ಸಂಪುಟ ೧ ಸಂಚಿಕೆ ೨ ಜುಲೈ ೯೬

# ಮಹಿಳಾ ಅಧ್ಯಯನ

ದಕ್ಷಿಣಾಯನ ಸಂಚಿಕೆ






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

## ಲೇಖಕರಿಗೆ ಸೂಚನೆಗಳು

೧. ಲೇಖನಗಳು ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿರಬೇಕು. ಅಥವಾ ಮಹಿಳಾ ಅಧ್ಯಯನಕ್ಕೆ ಹೊಸ ಆಯಾಮ ನೀಡಬಲ್ಲ ತಾತ್ವಿಕ ಚಿಂತನೆಗಳನ್ನು ಒಳಗೊಂಡಿರಬೇಕು.

೨. ಲೇಖನಗಳನ್ನು ಹಾಳೆಯ ಒಮ್ಮಗ್ಗುಲಲ್ಲಿ ಅಂದವಾಗಿ ಬರೆದಿರಬೇಕು

೩. 'ಲೇಖನ'ಗಳು ೫ ರಿಂದ ೧೦ ಪುಟಗಳ ಒಳಗಿರಲಿ

೪. ಲೇಖನಗಳ ಒಳಗಿನ ಅಭಿಪ್ರಾಯಗಳು ಆಯಾಲೇಖಕರವು. ವಿಶ್ವವಿದ್ಯಾಲಯದವಲ್ಲ.

೫. ಲೇಖನಗಳನ್ನು ಪತ್ರಿಕೆಯ ಆಶಯಕ್ಕೆ ಅನುಗುಣವಾಗಿ ಆಯ್ದು ಪ್ರಕಟಿಸಲಾಗುವುದು. ಅಪ್ರಕಟಿತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಆದ್ದರಿಂದ ಲೇಖಕರು ಲೇಖನದ ನಕಲನ್ನು ಇಟ್ಟುಕೊಳ್ಳುವುದು.

೬. ಲೇಖನಗಳನ್ನು ಕಳಿಸುವ ವಿಳಾಸ :

ಸಂಪಾದಕರು
'ಮಹಿಳಾ ಅಧ್ಯಯನ' ಪತ್ರಿಕೆ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.
ವಿದ್ಯಾರಣ್ಯ- ೫೮೩ ೨೭೬

**ಚಂದಾವಿವರ :**

ವಾರ್ಷಿಕ ಚಂದಾ : ರೂ. ೩೦
ಬಿಡಿ ಪ್ರತಿ : ರೂ. ೧೫

**ಚಂದಾ ಕಳಿಸುವ ವಿಳಾಸ :**

ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.

# ಮಹಿಳಾ ಅಧ್ಯಯನ

## (ದಕ್ಷಿಣಾಯನ ಸಂಚಿಕೆ)

ಸಂಪಾದಕಿ

ಡಾ. ಎಚ್. ಎಸ್. ಶ್ರೀಮತಿ



ಪ್ರಸಾರಾಂಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ

**MAHILA ADHYAYANA** (Half Yearly) Vol I-2 (July-Dec, 1999)
Ed. by Dr. H. S. Sreemathi.
Published by The Director, Prasaranga
Kannada University, Hampi, Vidyaranya -583 276

ಪುಟ : VIII + ೧೨೮

ಅರ್ಧವಾರ್ಷಿಕ ಪತ್ರಿಕೆ, ಸಂಪುಟ ೧, ಸಂಚಿಕೆ ೨



ಪ್ರಧಾನ ಸಂಪಾದಕರು : ಡಾ. ಎಂ. ಎಂ. ಕಲಬುರ್ಗಿ

ಸಲಹಾ ಸಮಿತಿ : ಡಾ. ವಿಜಯಾ ದಬ್ಬೆ
ಡಾ. ಮಲ್ಲಿಕಾ ಘಂಟಿ

ಸಹಾಯಕ ಸಂಪಾದಕರು : ಡಾ. ಎಂ. ಉಷಾ
ಡಾ. ಶೈಲಜಾ ಇಂ. ಹಿರೇಮಠ

ಬಿಡಿ ಪ್ರತಿ : ರೂ. ೧೫.೦೦
ವಾರ್ಷಿಕ ಚಂದಾ : ರೂ. ೩೦.೦೦

ಮುಖ ಪುಟ : ಕೆ. ಕೆ. ಮಕಾಳಿ

ಅಕ್ಷರ ಜೋಡಣೆ : ಯಾಜಿ ಗ್ರಾಫಿಕ್ಸ್, ಹೊಸಪೇಟೆ

**ಪ್ರಕಾಶಕರು**
ಪ್ರೊ. ಎ. ವಿ. ನಾವಡ
ನಿರ್ದೇಶಕರು, ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

ಮುದ್ರಕರು:
**ಸತ್ಯಶ್ರೀ ಪ್ರಿಂಟರ್ಸ್ ಪ್ರೈ. ಲಿ.**
ಚಾಮರಾಜಪೇಟೆ, ಬೆಂಗಳೂರು - 560 018
ದೂರವಾಣಿ: 6525736

ಸಂಪಾದಕೀಯ

## ಮಹಿಳಾ ಕಲ್ಯಾಣ

ನಮ್ಮ ಹಲವಾರು ರಾಷ್ಟ್ರೀಯ ಅಭಿವೃದ್ಧಿ ಯೋಜನೆಗಳಾಗಲೀ, ನಮ್ಮ ಹಲವು ಜ್ಞಾನಶಾಖೆಗಳು ಬೆಳೆಸುವ ಚಿಂತನಾಕ್ರಮಗಳಾಗಲಿ ನಮ್ಮ ವೈಜ್ಞಾನಿಕ ಸಂಶೋಧನೆಗಳಾಗಲಿ 'ಮಾನವ ಕಲ್ಯಾಣ' ಎಂಬ ಪರಿಕಲ್ಪನೆಯಲ್ಲಿ ಮಹಿಳೆಯೂ ಪರಿಗಣಿತಳಾಗಬೇಕೆಂಬುದನ್ನು ಮರೆತೇ ಬಿಡುತ್ತವೆ. ಉದ್ದೇಶ ಪೂರ್ವಕವೋ ಎಂಬಂತೆ ತೋರುವ ಈ ಸಾಮಾಜಿಕ ಅವಗಣನೆಯ ಬಗ್ಗೆ ಸಮಾನ ಅವಕಾಶಗಳಿಗಾಗಿ ಹುಡುಕಾಟ ನಡೆಸಿರುವ ಇಂದಿನ ಮಹಿಳೆ ಮೊದಲಿಗೆ ಅಂಕಿ ಅಂಶಗಳನ್ನು ನಿಖರವಾಗಿ ಗುರುತಿಸಿ ಅದರ ಪರಿಹಾರಕ್ಕಾಗಿ ಕಾರ್ಯಕ್ರಮಗಳನ್ನು ರೂಪಿಸಬೇಕಾಗಿದೆ. ಇಲ್ಲಿ ಅಂಕಿ ಅಂಶಗಳನ್ನೊಳಗೊಂಡ ಅಧ್ಯಯನದ ಅಗತ್ಯ ಬಹಳ. ಅಸಂಖ್ಯವೂ, ಅಗೋಚರವೂ ಆದ ಈ ಬಗೆಯ ಶೋಧನೆ ತೀರಾ ಶ್ರಮದಾಯಕವಾದದ್ದು.

'ಮಹಿಳೆ ಮತ್ತು ಆರೋಗ್ಯ' ಎಂಬ ವಿಚಾರ ಸಂಕಿರಣವೊಂದರಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಖಾತೆಯ ರಾಜ್ಯ ಆಯುಕ್ತರು ಸರ್ಕಾರದ ಕಾರ್ಯಕ್ರಮದ ವಿಶ್ಲೇಷಣೆ ಮಾಡಿದರು. ಮಹಿಳೆಯರ ಕಲ್ಯಾಣವನ್ನು ಕುರಿತ ಕಾರ್ಯಕ್ರಮಗಳ ಯಾದಿಯಲ್ಲಿ ಶಿಕ್ಷಣ ಮತ್ತು ಉದ್ಯೋಗಗಳಿಗೆ ಆದ್ಯತೆ ನೀಡಲಾಗುತ್ತಿದೆಯಾದರೂ ಅವರ ಸಮಗ್ರ ಅಭಿವೃದ್ಧಿ ಹಾಗೂ ಆರೋಗ್ಯ ಕುರಿತಂತೆ ಸಾಕಷ್ಟು ಎಚ್ಚರ ವಹಿಸಲಾಗುತ್ತಿಲ್ಲ ಎಂದು ಒಪ್ಪಿಕೊಂಡರು. 'ಕುಟುಂಬ ಆರೋಗ್ಯ ರಕ್ಷಣೆ ಎಂದರೆ ಅದು ಪ್ರಧಾನವಾಗಿ ಮಹಿಳೆಯ ಆರೋಗ್ಯ ರಕ್ಷಣೆಯನ್ನು ಒಳಗೊಳ್ಳಬೇಕು' ಎಂದು ಇದೇ ವೇದಿಕೆಯಲ್ಲಿದ್ದ ಖ್ಯಾತ ವೈದ್ಯ, ಸಮಾಜ ಸೇವಕ ಡಾ. ಎಚ್. ಸುದರ್ಶನ್ ಅವರು ಹೇಳಿದರಲ್ಲದೆ 'ಶೇಕಡ ತೊಂಬತ್ತೈದು ಭಾಗ ಸಂತಾನ ಹರಣ ಶಸ್ತ್ರಕ್ರಿಯೆಗಳು ಮಹಿಳೆಯರ ಮೇಲೆಯೇ ಪ್ರಯೋಗಗೊಳ್ಳುತ್ತವೆ. ಕುಟುಂಬ ಯೋಜನೆಯಲ್ಲಿ ಪುರುಷರು ಹೆಚ್ಚು ಹೆಚ್ಚಾಗಿ ಹೊಣೆ ವಹಿಸಿಕೊಳ್ಳುವಂತೆ ಮಾಡಬೇಕಾಗಿದೆ' ಎಂದರು. ಸಂವೇದನಾಶೀಲರಾದ ಹಲವು ತಜ್ಞರು, ಅಧಿಕಾರಿಗಳು ಮಹಿಳಾ ಕಲ್ಯಾಣವನ್ನು ಕುರಿತು ಸಮಗ್ರವಾಗಿ ಹಾಗೂ ಸ್ನೇಹಪರವಾಗಿ ಮಾತನಾಡತೊಡಗಿರುವುದು ಆಶಾದಾಯಕವಾದ ಸಂಗತಿ. ಮಹಿಳಾ ಕಲ್ಯಾಣವನ್ನು ಕುರಿತ ಇಂತಹ ಚಿಂತನಗಳು ವಿವಿಧ ಕ್ಷೇತ್ರಗಳಿಗೆ ಅನ್ವಯಿಸಿದಂತೆ ಬಹು ಆಯಾಮಗಳಲ್ಲಿ ಪ್ರಸಾರಗೊಳ್ಳುವ ಅಗತ್ಯವಿದೆ. 'ಮಹಿಳಾ ಅಧ್ಯಯನ' ಪತ್ರಿಕೆಯೂ ಇಂತಹ ಚಿಂತನೆಗಳಿಗೆ ಭದ್ರವಾದ ವೇದಿಕೆಯಾಗಲಿ ಎಂಬುದು ನಮ್ಮ ಪ್ರಯತ್ನ. ವಿವಿಧ ಅಂಕಣಗಳಲ್ಲಿನ ಬರೆಹಗಳಲ್ಲಿ ಈ ಚಿಂತನೆ ಪ್ರಧಾನ ಎಳೆಯಾಗಿ ಹರಿದಿದೆ.

ಈ ಪ್ರಯತ್ನದ ಹಿನ್ನೆಲೆಯಾಗಿ, ಮಾರ್ಗದರ್ಶಕರಾಗಿ ಸದಾ ನಮ್ಮ ಬೆನ್ನಿಗೆ ನಿಂತಿರುವ ನಮ್ಮ ಮಾನ್ಯ ಕುಲಪತಿ ಡಾ. ಎಂ. ಎಂ. ಕಲಬುರ್ಗಿಯವರನ್ನು ಮೊದಲಿಗೆ ನೆನೆಯುವುದು ನನ್ನ ಸಂತೋಷದ ಕರ್ತವ್ಯ.

ಡಾ. ವಿಜಯಾದಬ್ಬೆ ಮತ್ತು ಡಾ. ಮಲ್ಲಿಕಾ ಘಂಟಿಯವರು ನಮ್ಮ ಸಲಹಾ ಸಮಿತಿಯಲ್ಲಿದ್ದಾರೆ. ಡಾ. ದಬ್ಬೆಯವರು ಅಪಘಾತವೊಂದರಲ್ಲಿ ತೀವ್ರ ಅಪಾಯಕ್ಕೆ ಒಳಗಾಗಿ ಈಗಷ್ಟೇ ಚೇತರಿಸಿಕೊಳ್ಳುತ್ತಿದ್ದಾರೆ. ಈ ಸಂಚಿಕೆಗೆ ಅವರಿಂದ ಸಲಹೆ ಪಡೆಯಲಾಗಲಿಲ್ಲವೆಂಬುದು ವಿಷಾದಕರ. ಅವರ ಚೈತನ್ಯದ ಲಾಭವನ್ನು ಪಡೆಯುತ್ತಿರುವವರ ಸಂಖ್ಯೆ ಅಪಾರವಾದುದು. ಅವರೆಲ್ಲರ ಪರವಾಗಿ ದಬ್ಬೆಯವರು ಬೇಗನೆ ಚೇತರಿಸಿಕೊಂಡು ಮೊದಲಿನಂತಾಗಲಿ ಎಂದು ಹಾರೈಸುತ್ತೇನೆ. ಪ್ರಸ್ತುತ ಸಂಚಿಕೆಯ ಸಲಹಾ ಸಮಿತಿಯ ಕೆಲಸವನ್ನು ಡಾ. ಮಲ್ಲಿಕಾ ಘಂಟಿಯವರೇ ನಿರ್ವಹಿಸಿಕೊಟ್ಟರು. ಅವರಿಗೆ ನಮ್ಮ ಧನ್ಯವಾದಗಳು.

ವಿವಿಧ ಅಂಕಣಗಳಿಗಾಗಿ ಲೇಖನಗಳನ್ನು ಬರೆದುಕೊಟ್ಟ ವಿದ್ವಾಂಸರಿಗೆ ಆಭಾರಿಯಾಗಿದ್ದೇನೆ.

ಸಹೋದ್ಯೋಗಿ ಗೆಳತಿಯರಾದ ಡಾ. ಶೈಲಜಾ ಇಂ. ಹಿರೇಮಠ ಹಾಗೂ ಡಾ. ಎಂ. ಉಷಾ ಅವರ ಸಹಕಾರ ನನ್ನ ಒತ್ತಡಗಳನ್ನು ಕಡಿಮೆ ಮಾಡುವ ಚೇತನವೆನಿಸಿದೆ. ಕಿರಿಯರಾದ ಸುಚೇತಾ ನವರತ್ನ ಹಾಗೂ ಎ. ದಿನೇಶ ಅವರು ಶ್ರದ್ಧೆಯಿಂದ ನೆರವಾಗಿದ್ದಾರೆ. ಇವರೆಲ್ಲರನ್ನೂ ಪ್ರೀತಿಯಿಂದ ನೆನೆಯುತ್ತೇನೆ.

ಡಿ.ಟಿ.ಪಿ ಸಂಯೋಜನೆ, ಮುದ್ರಣ, ಮುಖಪುಟ -ಇತ್ಯಾದಿ ಹಂತಗಳನ್ನು ನಿರ್ವಹಿಸಿದ ಯಾಜಿ ಗ್ರಾಫಿಕ್ಸ್, ಹೊಸಪೇಟೆ, ಶ್ರೀ ಸುಜ್ಞಾನ ಮೂರ್ತಿ, ಶ್ರೀ ಮಕಾಳಿ-ಇವರುಗಳಿಗೂ ಪ್ರಸಾರಾಂಗದ ನಿರ್ದೇಶಕರಾದ ಪ್ರೊ. ಎ. ವಿ. ನಾವಡ ಹಾಗೂ ಅವರ ಸಿಬ್ಬಂದಿಯವರಿಗೂ ನನ್ನ ಧನ್ಯವಾದಗಳು.

ಕೊನೆಯದಾಗಿ, ಆದರೆ ಬಹು ಪ್ರಮುಖವಾಗಿ ನಮ್ಮ ಓದುಗರನ್ನು ಸ್ಮರಿಸಿ, ಪತ್ರಿಕೆಯ ಬಗೆಗೆ ರಚನಾತ್ಮಕ ಅಭಿಪ್ರಾಯ ಹಾಗೂ ಸಲಹೆಗಳನ್ನು ಬರೆದು ಕಳುಹಿಸಿರೆಂದು ಕೇಳಿಕೊಳ್ಳುತ್ತೇನೆ.

ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ಶ್ರೀಮತಿ ಎಚ್. ಎಸ್.

ಪರಿವಿಡಿ

# ವರದಕ್ಷಿಣೆ-ಒಂದು ಸಾಮಾಜಿಕ ಪಿಡುಗು

ಗೀತಾ ಕೃಷ್ಣಮೂರ್ತಿ

'ವರದಕ್ಷಿಣೆ' ಪದ್ಧತಿ ಕೂಡಲೇ ನಿವಾರಿಸಬೇಕಾಗಿರುವ ಆದರೆ ನಿವಾರಿಸಲಾಗದಿರುವ ಒಂದು ಸಾಮಾಜಿಕ ಪಿಡುಗು. ಹಿಂದೆ ಮಗಳು ತಂದೆಯ ಆಸ್ತಿಯಲ್ಲಿ ಪಾಲು ಪಡೆಯುತ್ತಿರಲಿಲ್ಲ. ಈ ಕಾರಣಕ್ಕಾಗಿ ಮದುವೆಯಲ್ಲಿ ಮಗಳಿಗೆ ಉಡುಗೊರೆಯ ರೂಪದಲ್ಲಿ ವಧುವಿನ ತಂದೆ ಕೊಡಬಯಸಿದ ಹಣ ಹಾಗೂ ವಸ್ತುಗಳೇ ಮುಂದೆ ವರದಕ್ಷಿಣೆಯ ರೂಪ ತಾಳಿರಬೇಕು. ಅಲ್ಲದೆ ಆರ್ಥಿಕವಾಗಿ ಅವಲಂಬಿತಳಾದ ಪತ್ನಿಯ ಯೋಗಕ್ಷೇಮವನ್ನು ನೋಡಿಕೊಳ್ಳುವುದಕ್ಕಾಗಿ ವರ ವಧುವಿನ ತಂದೆಯಿಂದ ನಿರೀಕ್ಷಿಸುವ ಹಣವೇ ವರದಕ್ಷಿಣೆಯಾಗಿರಬೇಕು. ಹೆಣ್ಣಿನ ಅಧೀನ ಸ್ಥಾನಮಾನದ ದ್ಯೋತಕವೂ ಆಗಿರಬಹುದು.

ವರದಕ್ಷಿಣೆ ಕೊಡುವ ಪದ್ಧತಿಯ ಉಲ್ಲೇಖ ನಮಗೆ ಬಹು ಹಿಂದಿನಿಂದಲೇ ದೊರೆಯುತ್ತದೆ. ನಮ್ಮ ಪೌರಾಣಿಕ ಕಥೆಗಳಲ್ಲಿಯೂ ಇದರ ಉಲ್ಲೇಖ ದೊರೆಯುತ್ತದೆ. ಸೀತಾ, ದ್ರೌಪದಿ, ಸುಭದ್ರ ಮುಂತಾದವರ ಮದುವೆಯ ಸಂದರ್ಭದಲ್ಲಿ ವರನಿಗೆ ವಧುವಿನ ಜೊತೆಗೆ ಧನ ಕನಕ ಗಜ ತುರಗ ಆದಿಯಾಗಿ ಉಡುಗೊರೆ ನೀಡಿದ ಉದಾಹರಣೆಗಳು ಇವೆ.

ವಧುವಿನ ತಂದೆ ಸ್ವಯಿಚ್ಛೆಯಿಂದ ತನ್ನ ಸಾಮರ್ಥ್ಯವರಿತು ಮಗಳಿಗೆ ತನ್ನ ಪ್ರೀತಿಯ ದ್ಯೋತಕವಾಗಿ ಕೊಡುತ್ತಿದ್ದ ಉಡುಗೊರೆ ಇಂದು ವಧುವಿನ ತಂದೆಗೆ ಭಯ ಹುಟ್ಟಿಸುವ, ವಧುವಿನ ಜೀವಕ್ಕೆ ಮುಳುವಾಗುವ ಒಂದು ಸಾಮಾಜಿಕ ಪಿಡುಗಿನ ರೂಪ ತಾಳಿದೆ. ಪ್ರತಿನಿತ್ಯ ವಧೂದಹನ, ವರದಕ್ಷಿಣೆ ಕಿರುಕುಳಗಳ ಸುದ್ದಿಯಿಲ್ಲದ ಪತ್ರಿಕೆಗಳಿಲ್ಲ ಎನ್ನುವಷ್ಟು ಈ ಪದ್ಧತಿ ವ್ಯಾಪಕವಾಗಿ ಬಿಟ್ಟಿದೆ. ವರದಕ್ಷಿಣೆ ತರಲಿಲ್ಲವೆಂಬ ಕಾರಣಕ್ಕೆ ಸೊಸೆ ಅಥವಾ ಹೆಂಡತಿಯನ್ನು ಜೀವಂತವಾಗಿ ಸುಟ್ಟ ಸುದ್ದಿಗಳು, ಅತ್ತೆ ಅಥವಾ ಗಂಡನ ಕಿರುಕುಳವನ್ನು ತಾಳದೆ ಆತ್ಮಹತ್ಯೆ ಮಾಡಿಕೊಂಡ ಹೆಣ್ಣಿನ ಕರುಣೆಯ ಕತೆಗಳು ಈ ಪಿಡುಗಿನ ಕರಾಳ ರೂಪವನ್ನು ತೆರೆದಿಡುತ್ತವೆ. ವರದಿಯಾಗುವ ಇಂಥ ಸಾವುಗಳಿಗಿಂತ ವರದಿಯಾಗದ ಸಾವುಗಳು ಲೆಕ್ಕವಿಲ್ಲದಷ್ಟು.

ವರದಕ್ಷಿಣೆ ಪದ್ಧತಿಯನ್ನು ನಿವಾರಿಸುವುದಕ್ಕಾಗಿ, ೧೯೬೧ ರಲ್ಲಿ ವರದಕ್ಷಿಣೆ ನಿಷೇಧ ಅಧಿನಿಯಮವನ್ನು ಜಾರಿಗೆ ತರಲಾಯಿತು. ಈ ಅಧಿನಿಯಮ ಜಾರಿಗೆ ಬಂದು ದಶಕಗಳೇ ಉರುಳಿದರೂ ಈ ಕಾನೂನಿನ ಅಡಿಯಲ್ಲಿ ಶಿಕ್ಷೆಗೆ ಒಳಪಟ್ಟವರ ಸಂಖ್ಯೆ ಕೇವಲ

ಬೆರಳೆಣಿಕೆಯಷ್ಟು. ವರದಕ್ಷಿಣೆಯನ್ನು ಕೊಡುವುದು ಮತ್ತು ತೆಗೆದುಕೊಳ್ಳುವುದು ಬಹಳ ಗುಟ್ಟಾಗಿ ನಾಲ್ಕು ಗೋಡೆಗಳ ನಡುವೆ ನಡೆಯುವುದರಿಂದ, ನ್ಯಾಯಾಲಯ ಅಗತ್ಯಪಡಿಸುವ ಸಾಕ್ಷ್ಯಾಧಾರಗಳು ದೊರೆಯುವ ಸಾಧ್ಯತೆಗಳು ಬಹು ಕಡಿಮೆ. ಹೀಗಾಗಿ ಇಂಥ ಸಾವಿನ ಪ್ರಕರಣಗಳು ಆತ್ಮಹತ್ಯೆ ಸಾವುಗಳೆಂಬುದಾಗಿ ದಾಖಲಾಗಿ ಬಿಡುವ ಸಂಭವವೇ ಹೆಚ್ಚು. ಅಲ್ಲದೆ ಕಾನೂನಿನಲ್ಲಿ 'ವರದಕ್ಷಿಣೆ' ಎಂಬುದಕ್ಕೆ ನೀಡಿರುವ ಪರಿಭಾಷೆಯೂ ಅಸ್ಪಷ್ಟವಾಗಿದೆ.

ಅಧಿನಿಯಮದ ೨ನೇ ಪ್ರಕರಣದಲ್ಲಿ 'ವರದಕ್ಷಿಣೆ'ಯನ್ನು ಪರಿಭಾಷಿಸಲಾಗಿದೆ.

**"ವರದಕ್ಷಿಣೆ" ಎಂದರೆ :-**

ಎ) ವಿವಾಹದ ಒಂದು ಪಕ್ಷಕಾರರು ವಿವಾಹದ ಇನ್ನೊಂದು ಪಕ್ಷಕಾರರಿಗೆ ಅಥವಾ

ಬಿ) ವಿವಾಹದ ಒಬ್ಬ ಪಕ್ಷಕಾರನ ತಂದೆ ತಾಯಿಯರು ಅಥವಾ ಇತರ ಯಾವನೇ ವ್ಯಕ್ತಿ ವಿವಾಹದ ಇನ್ನೊಬ್ಬ ಪಕ್ಷಕಾರನ ತಂದೆ ತಾಯಿಯರಿಗೆ ಅಥವಾ ಯಾವೊಬ್ಬ ಇತರ ವ್ಯಕ್ತಿಗೆ

ವಿವಾಹದಲ್ಲಿ ಅಥವಾ ವಿವಾಹಕ್ಕೆ ಮುಂಚೆ ಅಥವಾ ವಿವಾಹದ ನಂತರ ಯಾವುದೇ ಸಮಯದಲ್ಲಿ ಪಕ್ಷಕಾರರ ವಿವಾಹ ಸಂಬಂಧದಲ್ಲಿ ನೇರವಾಗಿ ಅಥವಾ ಪರೋಕ್ಷವಾಗಿ ಕೊಟ್ಟ ಅಥವಾ ಕೊಡಲು ಒಪ್ಪಿಕೊಂಡಿರುವ ಯಾವುದೇ ಆಸ್ತಿ ಅಥವಾ ಮೌಲಿಕ ಭದ್ರತೆ. ಆದರೆ ಈ ಪರಿಭಾಷೆಯಲ್ಲಿ ಮುಸ್ಲಿಮರಲ್ಲಿ ಇರುವ 'ಮೆಹರ್' ಅಥವಾ 'ಡವರ್' ಸೇರುವುದಿಲ್ಲ.

ವಿವಾಹ ಸಮಯದಲ್ಲಿ ಎರಡೂ ಪಕ್ಷಕಾರರಿಗೆ ತಂದೆ ತಾಯಿಯರು ಮತ್ತು ಬಂಧುಗಳು ಪ್ರೀತಿ ವಾತ್ಸಲ್ಯದಿಂದ ಉಡುಗೊರೆಯಾಗಿ ನೀಡುವ ನಗದು ಹಣ, ಒಡವೆಗಳು, ಉಡುಪುಗಳು ಹಾಗೂ ಇತರ ವಸ್ತುಗಳು 'ವರದಕ್ಷಿಣೆ'ಯ ವ್ಯಾಪ್ತಿಯಲ್ಲಿ ಬರುವುದಿಲ್ಲ. ಆದರೆ ಅವನ್ನೇ ವಿವಾಹಕ್ಕೆ ಪ್ರತಿಫಲವೆಂದು ಕೊಟ್ಟಲ್ಲಿ ಮಾತ್ರ ಅವು ವರದಕ್ಷಿಣೆ ಎನಿಸುತ್ತದೆ. ಇದನ್ನು ೨ ನೇ ಪ್ರಕರಣದ ಅಡಿಯಲ್ಲಿ ನೀಡಲಾದ ವಿವರಣೆಯಲ್ಲಿ ಸ್ಪಷ್ಟಪಡಿಸಲಾಗಿತ್ತು. ಆದರೆ ಮುಂದೆ ವರದಕ್ಷಿಣೆಯ ಪರಿಭಾಷೆಯಲ್ಲಿ ಬಳಸಲಾದ 'ಪ್ರತಿಫಲ' ಎಂಬುದು ವರದಕ್ಷಿಣೆಯ ಅರ್ಥವನ್ನು ಹಾಗೂ ವ್ಯಾಪ್ತಿಯನ್ನು ಸೀಮಿತಗೊಳಿಸುತ್ತದೆ ಎಂಬ ಕಾರಣದಿಂದ ಅದನ್ನು ತಿದ್ದುಪಡಿ ಮಾಡಲಾಯಿತು.

೩ ಮತ್ತು ೪ನೇ ಪ್ರಕರಣಗಳಲ್ಲಿ, ವರದಕ್ಷಿಣೆ ಕೊಡುವುದು, ಪಡೆಯುವುದು ಹಾಗೂ ಕೇಳುವುದನ್ನು ದಂಡನೀಯ ಅಪರಾಧವನ್ನಾಗಿಸಲಾಗಿದೆ. ಈ ಅಧಿನಿಯಮದ ಪ್ರಾರಂಭದ ನಂತರ ಯಾವನೇ ವ್ಯಕ್ತಿ ವರದಕ್ಷಿಣೆ ನೀಡಿದರೆ ಅಥವಾ ಪಡೆದರೆ ಅವನು ೫ ವರ್ಷಗಳ ಕಾರಾವಾಸದ ಮತ್ತು ಹದಿನೈದು ಸಾವಿರ ರೂಪಾಯಿಗಳು ಅಥವಾ ವರದಕ್ಷಿಣೆಯ ಮೊತ್ತ ಇವೆರಡರಲ್ಲಿ ಯಾವುದು ಜಾಸ್ತಿಯೋ ಅಂಥ ಜುಲ್ಮಾನೆಯ ಶಿಕ್ಷೆಗೆ ಒಳಗಾಗುತ್ತಾನೆ.

ವಧು ಅಥವಾ ವರನ ತಂದೆತಾಯಿಯರಿಂದ ಅಥವಾ ಅವರ ಇತರ ಸಂಬಂಧಿಗಳಿಂದ ಅಥವಾ ಪೋಷಕರಿಂದ ವರದಕ್ಷಿಣೆ ಕೇಳಿದಲ್ಲಿ ಹಾಗೆ ಕೇಳಿದ ವ್ಯಕ್ತಿಯೂ ಸಹ ಆರು ತಿಂಗಳಿಗೆ ಕಡಿಮೆಯಿಲ್ಲದ ಆದರೆ ಎರಡು ವರ್ಷಗಳಿಗೆ ವಿಸ್ತರಿಸಬಹುದಾದ ಕಾರಾವಾಸದ ಶಿಕ್ಷೆ ಮತ್ತು ಹತ್ತುಸಾವಿರ ರೂಗಳಿಗೆ ವಿಸ್ತರಿಸಬಹುದಾದ ಜುಲ್ಮಾನೆಯ ಶಿಕ್ಷೆಗೆ ಗುರಿಯಾಗುತ್ತಾನೆ.

ಅಧಿನಿಯಮದ ೫ನೇ ಪ್ರಕರಣದ ಮೇರೆಗೆ, ವರದಕ್ಷಿಣೆಯನ್ನು ಕೊಡಲು ಅಥವಾ ತೆಗೆದುಕೊಳ್ಳಲು ಮಾಡಿಕೊಂಡ ಯಾವುದೇ ಒಪ್ಪಂದ ಶೂನ್ಯವಾಗುತ್ತದೆ.

೬ನೇ ಪ್ರಕರಣದಲ್ಲಿ, ಯಾವೊಬ್ಬ ವ್ಯಕ್ತಿ ಸ್ವೀಕರಿಸಿದ ವರದಕ್ಷಿಣೆ ವಧುವಿನ ಹಾಗೂ ಆಕೆಯ ವಾರಸುದಾರರ ಪ್ರಯೋಜನಕ್ಕೆ ಬಳಸಬೇಕು ಎಂದು ಹೇಳಲಾಗಿದೆ. ಪತಿ ಆ ಸ್ವತ್ತನ್ನು ತನ್ನ ಪತ್ನಿಯ ಪರವಾಗಿ ನ್ಯಾಸವಾಗಿ ಹೊಂದಿರುತ್ತಾನೆ. ವಿವಾಹವಾದ ಮೂರು ತಿಂಗಳೊಳಗಾಗಿ ಆ ಸ್ವತ್ತನ್ನು ಪತ್ನಿಯ ಹೆಸರಿಗೆ ವರ್ಗಾಯಿಸಬೇಕು. ಹೀಗೆ ಮಾಡಲು ತಪ್ಪಿದಲ್ಲಿ ಅವನು ಆರು ತಿಂಗಳವರೆಗಿನ ಅವಧಿಗೆ ಕಡಿಮೆಯಿಲ್ಲದ ಆದರೆ ಎರಡುವರ್ಷದವರೆಗೆ ವಿಸ್ತರಿಸಬಹುದಾದ ಕಾರಾವಾಸಕ್ಕೆ ಮತ್ತು ೫೦೦೦ ರೂ ಜುಲ್ಮಾನೆಗೆ ಗುರಿಯಾಗುತ್ತಾನೆ.

ವರದಕ್ಷಿಣೆಯ ಪದ್ಧತಿ ಸಾಮಾಜಿಕ ಪಿಡುಗಿನ ರೂಪತಾಳಿದುದು ಸು ೧೩ ಅಥವಾ ೧೪ನೇ ಶತಮಾನದಲ್ಲಿ -ರಜಪೂತ ಕುಟುಂಬಗಳಲ್ಲಿ. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಇದು ಗಂಭೀರ ಸ್ವರೂಪದ ಸಮಸ್ಯೆಯಾಯಿತು. ಖ್ಯಾತ ಕಾದಂಬರಿಕಾರರಾದ ಬಂಕಿಮಚಂದ್ರ ಚಟರ್ಜಿ ಅವರ ಮಗಳು ಉತ್ಕಲಕುಮಾರಿ ಸಾಕಷ್ಟು ವರದಕ್ಷಿಣೆ ತರಲಿಲ್ಲವೆಂಬ ಕಾರಣಕ್ಕಾಗಿ ಆಕೆಯ ಗಂಡ ಜ್ಯೋತೀಂದ್ರ ಮೋಹನ್ ಮುಖರ್ಜಿ ೧೮೮೭ರ ನವೆಂಬರ್ ೮ ರಂದು ಅವಳಿಗೆ ವಿಷ ಹಾಕಿ ಸಾವಿಗೀಡುಮಾಡಿದ ಎಂಬುದನ್ನು ಇಲ್ಲಿ ಉಲ್ಲೇಖಿಸಬಹುದು.

ಈ ಪದ್ಧತಿ ಅನೇಕ ಹೆಣ್ಣು ಮಕ್ಕಳ ಹಿಂಸೆಗೆ, ಅಸಹನೀಯ ಬಾಳಿಗೆ ಹಾಗೂ ಅವರ ಸಾವಿಗೆ ಕಾರಣವಾಗಿದೆ. ಬಹಳಷ್ಟು ವರದಕ್ಷಿಣೆ ಸಾವುಗಳು ವರದಿಯಾಗುವುದೇ ಇಲ್ಲ. ಆದರೆ ವರದಿಯಾಗುವ ಇಂಥ ಸಾವುಗಳ ಸಂಖ್ಯೆಯೇ ಸಮಾಜದ ಧೃತಿ ಗೆಡಿಸುವಷ್ಟು ಪ್ರಮಾಣದಲ್ಲಿದೆ ಎಂದರೆ ಈ ಸಮಸ್ಯೆಯ ವ್ಯಾಪಕತೆ ಹಾಗೂ ಭೀಕರತೆಯನ್ನು ಊಹಿಸಬಹುದು.

೧೯೬೧ರಲ್ಲಿ ಜಾರಿಗೆ ಬಂದ ವರದಕ್ಷಿಣೆ ನಿಷೇಧ ಅಧಿನಿಯಮದ ಪ್ರಕಾರ ವರದಕ್ಷಿಣೆ ಬೇಡಿದನೆಂಬ ಕಾರಣಕ್ಕೆ ಬೇಡಿದ ವ್ಯಕ್ತಿಯನ್ನು ಕಾನೂನು ವ್ಯವಹರಣೆಗೆ ಗುರಿಪಡಿಸಲು ಸರ್ಕಾರದ ಪೂರ್ವಾನುಮತಿಯನ್ನು ಪಡೆಯಬೇಕಿತ್ತು ಹಾಗೂ ತೊಂದರೆಗೊಳಗಾದ ವ್ಯಕ್ತಿಯೇ ಒಂದು ವರ್ಷದೊಳಗಾಗಿ ದೂರು ನೀಡಬೇಕಿತ್ತು. ಆದರೆ ೧೯೭೦ರ ಮತ್ತು

೧೯೮೦ರ ದಶಕದ ಪ್ರಾರಂಭದಲ್ಲಿ ಮಹಿಳಾ ಸಂಘಟನೆಗಳ ಪ್ರಯತ್ನದಿಂದ ೧೯೬೧ರ ಕಾನೂನಿಗೆ ತಿದ್ದುಪಡಿ ತರಲಾಯಿತು. ೧೯೮೪ ರಲ್ಲಿ ಮಾಡಿದ ತಿದ್ದುಪಡಿಯ ಪ್ರಕಾರ ಮನ್ನಣೆ ಪಡೆದ ಯಾವುದೇ ಒಂದು ಸೇವಾಸಂಸ್ಥೆಯೂ ವರದಕ್ಷಿಣೆ ಅಪರಾಧದ ವಿರುದ್ಧ ದೂರು ನೀಡಬಹುದಾಗಿದೆ. ಅಲ್ಲದೆ ೨ ನೇ ಪ್ರಕರಣದಲ್ಲಿ 'ವರದಕ್ಷಿಣೆ' ಗೆ ನೀಡಲಾಗಿದ್ದ ಪರಿಭಾಷೆಗೂ ತಿದ್ದುಪಡಿ ತರಲಾಯಿತು. ಅಲ್ಲಿಯ 'ವಿವಾಹಕ್ಕೆ ಪ್ರತಿಫಲವಾಗಿ' ಎಂಬ ಪದಗಳನ್ನು ತೆಗೆದುಹಾಕಿ 'ವಿವಾಹದ ಸಂಬಂಧದಲ್ಲಿ' ಎಂಬ ಪದಗಳನ್ನು ಪ್ರತಿಸ್ಥಾಪಿಸಲಾಯಿತು. ಈ ಪದಗಳು ಮೂಲದ ಅರ್ಥವನ್ನು ಸ್ವಲ್ಪಮಟ್ಟಿಗೆ ವಿಸ್ತರಿಸಿದರೂ ವಿವಾಹದ ನಂತರ ಬೇಡಿದ ಅಥವಾ ಕೊಟ್ಟ ಯಾವುದೇ ಹಣ ಅಥವಾ ವಸ್ತುವಿಗೆ ಅನ್ವಯವಾಗುವುದಿಲ್ಲ. ಹೀಗಾಗಿ ಈ ತಿದ್ದುಪಡಿ ಕಾನೂನಿನ ಕೈ ಬಿಗಿಗೊಳಿಸುವುದಕ್ಕೆ ಹೆಚ್ಚೇನೂ ಸಹಾಯಕವಾಗಲಿಲ್ಲ.

೧೯೮೬ರಲ್ಲಿ ಈ ಕಾನೂನಿಗೆ ಮತ್ತಷ್ಟು ತಿದ್ದುಪಡಿ ಮಾಡಿ ವರದಕ್ಷಿಣೆ ಸಂಬಂಧದ ಜಾಹೀರಾತುಗಳನ್ನು ನಿಷೇಧಿಸುವ ಉಪಬಂಧವನ್ನು ಸೇರಿಸಲಾಯಿತು. ಅಲ್ಲದೆ ಮಹಿಳೆ ಅಸಹಜವಾದ ಸಾವನ್ನಪ್ಪಿದ ಪಕ್ಷದಲ್ಲಿ ಅವಳ ಆಸ್ತಿ ಅವಳ ಮಕ್ಕಳಿಗೆ ಸೇರಬೇಕು. ಮಕ್ಕಳಿಲ್ಲದ ಸಂದರ್ಭದಲ್ಲಿ ಅವಳ ತಂದೆತಾಯಿಯರಿಗೆ ಸೇರಬೇಕು ಎಂಬ ತಿದ್ದುಪಡಿಯನ್ನು ಸಹ ಮಾಡಲಾಯಿತು.

ಹಾಗೆಯೇ, ಭಾರತ ದಂಡ ಸಂಹಿತೆಗೆ ತಿದ್ದುಪಡಿ ಮಾಡಿ, ಪತಿ ಅಥವಾ ಪತಿಯ ಸಂಬಂಧಿಗಳಿಂದ ಪತ್ನಿಗೆ ಉಂಟಾಗುವ ಹಿಂಸೆಯನ್ನು ಹೊಸ ಅಪರಾಧವನ್ನಾಗಿ ಸೇರಿಸಲಾಯಿತು. ಇದರ ಪ್ರಕಾರ, ಪತ್ನಿಯ ಆತ್ಮಹತ್ಯೆಗೆ ಅಥವಾ ಆತ್ಮಹತ್ಯೆಯ ಪ್ರಯತ್ನಕ್ಕೆ ಕಾರಣವಾಗುವ ಪತ್ನಿಯ ಉದ್ದೇಶಪೂರ್ವಕ ವರ್ತನೆಯನ್ನು ಸಹ 'ವಿವಾಹಿತ ಸ್ತ್ರೀ ವಿರುದ್ಧ ಕ್ರೌರ್ಯ' ಎಂಬ ಹೊಸ ಉಪಬಂಧದ ಅಡಿಯಲ್ಲಿ ಪರಿಗಣಿಸಿ ಅದಕ್ಕೆ ಮೂರು ವರ್ಷಗಳ ಕಾರಾವಾಸ ಮತ್ತು ಜುಲ್ಮಾನೆಯ ಶಿಕ್ಷೆಯನ್ನು ವಿಧಿಸಲಾಯಿತು. ಭಾರತದಂಡ ಸಂಹಿತೆಗೆ ೩೦೪ ಬಿ ಪ್ರಕರಣವನ್ನು ಸೇರಿಸುವ ಮೂಲಕ 'ವರದಕ್ಷಿಣೆ ಸಾವಿ'ನ ಅಪರಾಧವನ್ನು ಪರಿಭಾಷಿಸಲಾಯಿತು.

ಈ ಎಲ್ಲ ತಿದ್ದುಪಡಿಗಳಿಗೆ ಸಂಘಟಿತ ಮಹಿಳಾ ಚಳುವಳಿಯ ಬೇಡಿಕೆಗಳು ಹಾಗೂ ಒತ್ತಾಯ ಬಹುಮಟ್ಟಿಗೆ ಕಾರಣವಾಯಿತೆನ್ನಬಹುದು. ಆದರೆ ಕೆಲವು ಮಹಿಳಾವಾದಿಗಳು ಈ ತಿದ್ದುಪಡಿಗಳು ಪಿಡುಗನ್ನು ನಿವಾರಿಸಲು ಯಾವ ರೀತಿಯಲ್ಲಿಯೂ ಸಹಾಯಕವಾಗುವುದಿಲ್ಲ ಎಂದು ಅಭಿಪ್ರಾಯಪಟ್ಟರು. ಇವುಗಳಿಂದ ಸಮಸ್ಯೆಯ ಚಿನ್ಹೆಗಳನ್ನು ಗುರುತಿಸಿದಂತಾಯಿತೇ ವಿನಃ ಸಮಸ್ಯೆಯ ಕಾರಣವನ್ನು ನಿವಾರಿಸಿದಂತಾಗಲಿಲ್ಲ ಎಂದು ವಾದಿಸಿದರು. ಈ ಯಾವುದೇ ಕಾನೂನು ಅಥವಾ ಸುಧಾರಣಾ ಕ್ರಮ ಕುಟುಂಬದಲ್ಲಿನ ಮಹಿಳೆಯ ಅಸಮಾನತೆಯ ನಿವಾರಣಾ ಕ್ರಮವಲ್ಲ. ಮಹಿಳೆಗೆ ತನ್ನ ವೈವಾಹಿಕ ಗೃಹದಲ್ಲಿ ಇರುವ ಅಧಿಕಾರದ ಕೊರತೆಯನ್ನಾಗಲೀ, ಆರ್ಥಿಕ

ಅವಲಂಬನೆಯನ್ನಾಗಲೀ ನಿವಾರಿಸುವುದಿಲ್ಲ. ಮಹಿಳೆಯ ಈ ಆರ್ಥಿಕ ಅವಲಂಬನೆಯಿಂದಲೇ ಇಂದು ವರದಕ್ಷಿಣೆ ಸಮಾಜಕ್ಕೆ ಅಭಿಶಾಪವಾಗಿ ಪರಿಣಮಿಸಿರುವುದು. ಆದ್ದರಿಂದ ಮಹಿಳೆಗೆ ಆರ್ಥಿಕ ಸ್ವಾತಂತ್ರ್ಯವನ್ನು ಒದಗಿಸುವ ಕ್ರಮಗಳನ್ನು ಕೈಗೊಳ್ಳುವ ಮೂಲಕ ಈ ಸಮಸ್ಯೆಯನ್ನು ಎದುರಿಸುವ ಹಾಗೂ ನಿವಾರಿಸುವ ಪ್ರಯತ್ನಗಳಾಗಬೇಕು ಎಂದು ಇವರು ವಾದಿಸಿದರು.

ನೂರಾರು ವರ್ಷಗಳಿಂದ ಬೇರುಬಿಟ್ಟಿರುವ ಒಂದು ಸಂಪ್ರದಾಯ ತನ್ನ ಮೂಲ ಉದ್ದೇಶವನ್ನೇ ಕಳೆದುಕೊಂಡು ಒಂದು ಪಿಡುಗಾಗಿ ಪರಿಣಮಿಸಿದಾಗ ಒಂದು ಕಾನೂನನ್ನು ರಚಿಸುವ ಮೂಲಕ ಅದನ್ನು ತೊಡೆದು ಹಾಕುವುದು ಸಾಧ್ಯವಿಲ್ಲ. ವರದಕ್ಷಿಣೆ ಅಪರಾಧಗಳಿಗಾಗಿ ಹೂಡಲಾದ ಅನೇಕ ಮೊಕದ್ದಮೆಗಳಿಂದ, ಅವುಗಳ ಸಂಬಂಧದಲ್ಲಿ ಹೊರಬಿದ್ದ ತೀರ್ಪುಗಳು ಹಾಗೂ ಅವುಗಳಲ್ಲಿ ಮಾಡಲಾದ ಕಾನೂನಿನ ನಿರ್ವಚನದಿಂದ ನಮ್ಮ ಕಾನೂನು ಎಷ್ಟು ಅಸಹಾಯಕವಾದುದು, ಎಷ್ಟು ಅಸಮರ್ಪಕವಾದುದು ಎಂಬುದು ಸ್ಪಷ್ಟವಾಗುತ್ತದೆ. ಒಂದೆಡೆ ಕಾನೂನು ಈ ಹಿಂಸೆಯನ್ನು ದಂಡನೀಯ ಅಪರಾಧವನ್ನಾಗಿ ಪರಿಗಣಿಸಿದರೆ ಇನ್ನೊಂದೆಡೆ ಕಾನೂನು ಪರಿಪಾಲಕರು ಅದೇ ಕಾನೂನನ್ನು ಅಕ್ಷರಶಃ ಅನ್ವಯಿಸಿ ಅನೇಕ ವೇಳೆ ಕಾನೂನಿನ ಉದ್ದೇಶವನ್ನೇ ವಿಫಲಗೊಳಿಸಿಬಿಡುತ್ತಾರೆ.

ನಾರಾಯಣ ಲಾಲ್- ವಿ- ರಾಜಾಸ್ಥಾನ ಪ್ರಕರಣ (೧೯೬೯, ೨ ಎಸ್ ಸಿ ಡಬ್ಲ್ಯು ಆರ್ ೨೮೨) ಇದಕ್ಕೆ ಉತ್ತಮ ಉದಾಹರಣೆ. ಪತ್ನಿಯನ್ನು ಅವಳ ಪತಿ ಅತ್ತೆ ಮಾವ ಎಲ್ಲರೂ ಹೊಡೆಯುತ್ತಿದ್ದರು. ಗರ್ಭಿಣಿಯಾದ ಅವಳನ್ನು ಕಬ್ಬಿಣದ ಸಲಾಕೆಯಿಂದ, ಅತಿ ಕ್ರೂರವಾಗಿ ಹೊಡೆದು ಕತ್ತು ಹಿಸುಕಿ ಕೊಲ್ಲಲಾಯಿತು. ಅವಳನ್ನು ಗುಟ್ಟಾಗಿ ದಹನ ಮಾಡಲು ಪ್ರಯತ್ನಿಸಲಾಯಿತು. ಆದರೆ ಸಕಾಲದಲ್ಲಿ ಇದನ್ನು ತಿಳಿದ ಅವಳ ಸಹೋದರ ಅದನ್ನು ತಡೆದು ಅದರ ವಿರುದ್ಧ ಮೊಕದ್ದಮೆ ಹೂಡಿದ. ರಾಜಾಸ್ಥಾನದ ಉಚ್ಚ ನ್ಯಾಯಾಲಯ ಪತಿಯು ಅಪರಾಧಿ ಎಂಬ ಕೆಳ ನ್ಯಾಯಾಲಯದ ತೀರ್ಪನ್ನು ಎತ್ತಿಹಿಡಿಯಿತು. ಆದರೆ ಅವಳ ಮಾವನನ್ನು ಖುಲಾಸೆ ಮಾಡಿತು. ಇದೇ ವಿಷಯ ಸರ್ವೋಚ್ಚ ನ್ಯಾಯಾಲಯದ ಮುಂದೆ ಬಂದಾಗ, ಸರ್ವೋಚ್ಚ ನ್ಯಾಯಾಲಯ ಹೀಗೆ ಅಭಿಪ್ರಾಯಪಟ್ಟಿತು. "ದೊರೆತ ಸಾಕ್ಷ್ಯಾಧಾರಗಳಿಂದ, ಕತ್ತು ಹಿಸುಕಿದುದರಿಂದ ಸಾವು ಉಂಟಾಗಿದೆ: ಮೃತಳ ಪತಿ ಹಾಗೂ ಅವನ ಕುಟುಂಬದವರು ಅವಳ ಮನೆಯವರಿಗೆ ತಿಳಿಸದೆಯೇ ಅಂತ್ಯಕ್ರಿಯೆ ಮುಗಿಸಿಬಿಡುವ ಉದ್ದೇಶ ಹೊಂದಿದ್ದರು: ಪತಿ ತನ್ನ ಪತ್ನಿಯೊಂದಿಗಿದ್ದ ಎಲ್ಲ ಸಂಬಂಧಗಳನ್ನೂ ಕಡಿದುಕೊಳ್ಳಲು ಇಚ್ಛಿಸಿದ್ದ; ಅವಳ ಪತಿಯ ಜೊತೆ ಅವಳ ಅತ್ತೆ ಮಾವಂದಿರೂ ಅವಳನ್ನು ಹಿಂಸಿಸುತ್ತಿದ್ದರು ಎಂಬುದು ಸ್ಪಷ್ಟವಾಗುತ್ತದೆ. ಆದರೆ ಪತಿಯೇ ಅಪರಾಧಿ ಎಂಬುದನ್ನು, ಎಂದರೆ ಕೊಲೆ ಮಾಡಿದ ಎಂಬುದನ್ನು ಸಂದೇಹಕ್ಕಾಸ್ಪದವಿಲ್ಲದಂತೆ ರುಜುವಾತು ಪಡಿಸುವುದಿಲ್ಲ. ಅಲ್ಲದೆ ಮೃತಳ ಮನೆಯಲ್ಲಿ ಸುಮಾರು ಹನ್ನೆರಡು ಮಂದಿಯಿದ್ದು ಅವರೆಲ್ಲರನ್ನೂ ಪ್ರಾಸಿಕ್ಯೂಷನ್ ಅವರು ಆರೋಪಿತರನ್ನಾಗಿ ಮಾಡಿದುದರಿಂದ, ಯಾರೂ

ಅವಳನ್ನು ಕೊಲೆ ಮಾಡಿರಬಹುದಾದ ಸಾಧ್ಯತೆ ಉಂಟು, ಹಾಗಾಗಿ ಯಾರೊಬ್ಬರನ್ನೂ ಸಂದೇಹಾತೀತವಾಗಿ ಕೊಲೆಗೆ ಬಾಧ್ಯರನ್ನಾಗಿಸಲು ಸಾಧ್ಯವಿಲ್ಲ" ಎಂದು ಅವಳ ಪತಿಯನ್ನು ಕೊಲೆಯ ಆರೋಪದಿಂದ ಮುಕ್ತಗೊಳಿಸಿ ಬಿಡುಗಡೆ ಮಾಡಿತು.

ಇಲ್ಲಿ, ಮನೆಯಲ್ಲಿ ಅಷ್ಟು ಮಂದಿಯಿದ್ದರೂ ಆರೋಪಿತನಿಗೆ ಮಾತ್ರವೇ ಅವಳನ್ನು ಕೊಲೆ ಮಾಡಲು ಕಾರಣವಿದ್ದುದು, ಅವಳ ಕೋಣೆಗೆ ಹೋಗಿ ಅವಳನ್ನು ಕೊಲೆ ಮಾಡಲು ಸಾಧ್ಯವಿದ್ದುದು ಮತ್ತು ಅವಳ ಸೋದರನಿಗೆ ತಿಳಿಸದೆ ಅವಳ ಅಂತ್ಯಕ್ರಿಯೆಗೆ ಪ್ರಯತ್ನಿಸಿದುದೂ ಅವನೇ ಎಂಬುದನ್ನು ಸನ್ಮಾನ್ಯ ನ್ಯಾಯಾಲಯ ಕಡೆಗಣಿಸಿತು. ಈ ಸಂದರ್ಭಗಳು ಅವನ ಅಪರಾಧವನ್ನು ಸಿದ್ಧಪಡಿಸಲು ಸಾಕಾಗಿತ್ತು. ಆದರೆ ನ್ಯಾಯಾಲಯ ಬೇರೆಯದೇ ನಿಲುವನ್ನು ತಳೆಯಿತು.

ಕಳೆದ ಕೆಲವು ವರ್ಷಗಳಿಂದ ಭಾರತದಾದ್ಯಂತ ಅತಿ ಹೆಚ್ಚಿನ ಸ್ತ್ರೀ ದಹನ ಹಾಗೂ ಅತ್ಯಾಚಾರದ ಪ್ರಕರಣಗಳು ದಾಖಲಾಗಿವೆ. ೧೯೮೩ ರಲ್ಲಿ ದೆಹಲಿಯಲ್ಲಿ ಪ್ರತಿದಿನವೂ ಸರಾಸರಿ ಇಬ್ಬರು ಮಹಿಳೆಯರು ಸುಟ್ಟಗಾಯಗಳಿಂದ ಸಾವನ್ನಪ್ಪಿದ್ದಾರೆ. ಮುಂಬಯಿಯಲ್ಲಿ ೧೯೮೮ರಲ್ಲಿ ಎಂಟು ತಿಂಗಳ ಅವಧಿಯ ಸಮೀಕ್ಷೆಯ ಪ್ರಕಾರ ಪ್ರತಿ ಐದು ದಿನಗಳಿಗೆ ಒಬ್ಬ ಮಹಿಳೆ ಸುಟ್ಟಗಾಯಗಳಿಗೆ ಬಲಿಯಾಗುತ್ತಿದ್ದಳು. ಬೆಂಗಳೂರಿನಲ್ಲಿ, ೧೯೮೮ ರಲ್ಲಿ ಆತ್ಮಹತ್ಯೆ ಹಾಗೂ ವರದಕ್ಷಿಣೆ ಸಾವುಗಳ ಸಂಖ್ಯೆ ಅದರ ಹಿಂದಿನ ವರ್ಷಗಳಿಗಿಂತ ದುಪ್ಪಟ್ಟಾಗಿತ್ತು.

ಭಾರತ ದಂಡ ಸಂಹಿತೆಗೆ ೧೯೮೬ ರಲ್ಲಿ ತಂದ ತಿದ್ದುಪಡಿ ವರದಕ್ಷಿಣೆ ಸಾವನ್ನು ಪರಿಭಾಷಿಸುತ್ತದೆ. ಭಾರತ ದಂಡ ಸಂಹಿತೆಯಲ್ಲಿ ವರದಕ್ಷಿಣೆ ಸಾವಿನ ಅಪರಾಧವನ್ನು ೩೦೪ ಬಿ ಪ್ರಕರಣದ ಅಡಿಯಲ್ಲಿ ಸೇರಿಸಲಾಗಿದೆ-

೩೦೪ ಬಿ ಪ್ರಕರಣದಲ್ಲಿ ಪರಿಭಾಷಿಸಲಾದಂತೆ ವರದಕ್ಷಿಣೆ ಸಾವಿನ ಅಪರಾಧ ಎಂದರೆ-

ಮಹಿಳೆಯ ಸಾವು ಮದುವೆಯಾದ ಏಳು ವರ್ಷಗಳೊಳಗೆ ಸುಟ್ಟಗಾಯಗಳಿಂದ ಅಥವಾ ದೈಹಿಕ ಗಾಯಗಳಿಂದ ಅಥವಾ ಸಹಜ ಸಂದರ್ಭಗಳಲ್ಲಿ ಅಲ್ಲದೆ ಅನ್ಯಥಾ ಉಂಟಾದರೆ, ಮತ್ತು ಅವಳ ಸಾವಿಗೆ ನಿಕಟ ಪೂರ್ವದಲ್ಲಿ ವರದಕ್ಷಿಣೆಗಾಗಿ ಅಥವಾ ವರದಕ್ಷಿಣೆಯ ಸಂಬಂಧದಲ್ಲಿ ಅವಳ ಪತಿಯಿಂದ ಅಥವಾ ಅವಳ ಪತಿಯ ಸಂಬಂಧಿಯಿಂದ ಅವಳು ಹಿಂಸೆಗೆ ಅಥವಾ ಕಿರುಕುಳಕ್ಕೆ ಗುರಿಯಾಗಿದ್ದಳು ಎಂಬುದನ್ನು ರುಜುವಾತು ಪಡಿಸಲಾದರೆ ಅಂಥ ಸಾವನ್ನು 'ವರದಕ್ಷಿಣೆ ಸಾವು' ಎಂದು ಕರೆಯತಕ್ಕುದು ಮತ್ತು ಅಂಥ ಪತಿ ಅಥವಾ ಸಂಬಂಧಿ ಈ ಸಾವಿಗೆ ಕಾರಣ ಎಂಬುದಾಗಿ ಭಾವಿಸತಕ್ಕುದು"

ವರದಕ್ಷಿಣೆ ಸಾವನ್ನುಂಟುಮಾಡಿದ ಯಾವನೇ ವ್ಯಕ್ತಿಗೆ ಏಳು ವರ್ಷಗಳಿಗೆ ಕಡಿಮೆಯಿಲ್ಲದ ಅಥವಾ ಜೀವಾವಧಿ ಕಾರಾವಾಸ ಶಿಕ್ಷೆಯನ್ನು ವಿಧಿಸತಕ್ಕುದು ಎಂದು ಉಪಬಂಧಿಸಲಾಗಿದೆ.

ಇದಕ್ಕೆ ಪೂರಕವಾಗಿ, ಭಾರತ ಸಾಕ್ಷ್ಯ ಅಧಿನಿಯಮಕ್ಕೆ ೧೧೩-ಎ ಹೊಸ ಪ್ರಕರಣವನ್ನು ಸೇರಿಸಿ ಅದರಲ್ಲಿ ದುಷ್ಪ್ರೇರಣೆಯನ್ನು ನೀಡಲಾಯಿತು ಎಂದು ಯಾವ ಸಂದರ್ಭಗಳಲ್ಲಿ ಪೂರ್ವಭಾವನೆ ಮಾಡಬಹುದು ಎಂಬುದನ್ನು ತಿಳಿಸಲಾಗಿದೆ.

* ಮೊದಲನೆಯದಾಗಿ ಮಹಿಳೆ ಮದುವೆಯಾದ ಏಳು ವರ್ಷಗಳೊಳಗೆ ಆತ್ಮಹತ್ಯೆ ಮಾಡಿಕೊಂಡಿದ್ದರೆ
* ಎರಡನೆಯದಾಗಿ ಅವಳ ಪತಿ ಅಥವಾ ಅವನ ಯಾರೇ ಸಂಬಂಧಿ ಅವಳನ್ನು ಹಿಂಸೆಗೆ ಗುರಿಪಡಿಸಿದ್ದರೆ

ಅಂಥ ಆತ್ಮಹತ್ಯೆಗೆ ಪತಿ ಅಥವಾ ಅಂಥ ಸಂಬಂಧಿ ದುಷ್ಪ್ರೇರಣೆ ನೀಡಿದ್ದಾರೆ ಎಂದು ಪೂರ್ವಭಾವನೆ ಮಾಡಲಾಗುತ್ತದೆ. ಈ ಪ್ರಕರಣ ಉಪಬಂಧಿಸುತ್ತದೆ. ಹಾಗೆ ದುಷ್ಪ್ರೇರಣೆ ನೀಡಿದ ವ್ಯಕ್ತಿಗೆ ಆ ಅಪರಾಧಕ್ಕಾಗಿ ವಿಧಿಸುವ ಶಿಕ್ಷೆಯನ್ನೇ ವಿಧಿಸತಕ್ಕದು ಎಂದು ಭಾರತದಂಡ ಸಂಹಿತೆ ವಿಧಿಸುತ್ತದೆ. (ಭಾರತದಂಡ ಸಂಹಿತೆಯ ೩೦೬ ನೇ ಪ್ರಕರಣ)

ಇಂಥ ಅಪರಾಧಗಳನ್ನು ರುಜುವಾತು ಪಡಿಸುವುದಕ್ಕಾಗಿ 'ಹಿಂಸೆ' ಎಂಬುದನ್ನು ಪರಿಭಾಷಿಸುವುದು ಅಗತ್ಯ. ಇದನ್ನು ೧೯೮೩ ರಲ್ಲಿ ಭಾರತದಂಡ ಸಂಹಿತೆಗೆ ಸೇರಿಸಿದ ೪೯೮-ಎ ಪ್ರಕರಣ ಹಾಗೂ ಅದಕ್ಕೆ ನೀಡಿರುವ ವಿವರಣೆಯಲ್ಲಿ ಪರಿಭಾಷಿಸಲಾಯಿತು. ಇದರ ಉದ್ದೇಶ ವಿವಾಹದ ನಂತರ ಹೆಚ್ಚಿನ ವರದಕ್ಷಿಣೆಗಾಗಿ ಅಥವಾ ಆಸ್ತಿಗಾಗಿ ಪತ್ನಿಯನ್ನು ಹಿಂಸಿಸುವ ಪತಿ ಮತ್ತು ಅವನ ಸಂಬಂಧಿಗಳನ್ನು ಶಿಕ್ಷೆಗೆ ಗುರಿಪಡಿಸುವುದೇ ಆಗಿದೆ-

"೪೯೮-ಎ ಮಹಿಳೆಯ ಪತಿ ಅಥವಾ ಪತಿಯ ಸಂಬಂಧಿ ಅವಳನ್ನು ಹಿಂಸೆಗೆ ಗುರಿಪಡಿಸುವುದು-ಮಹಿಳೆಯ ಪತಿ ಅಥವಾ ಪತಿಯ ಸಂಬಂಧಿಯಾಗಿರುವ ಯಾವನೇ ವ್ಯಕ್ತಿ ಅಂಥ ಮಹಿಳೆಯನ್ನು **ಹಿಂಸೆಗೆ ಗುರಿಪಡಿಸಿದರೆ** ಅವನು ಮೂರು ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರಾವಾಸದಿಂದ ದಂಡಿತನಾಗತಕ್ಕದು ಮತ್ತು ಜುಲ್ಮಾನೆಗೂ ಬದ್ಧನಾಗತಕ್ಕದು.

ವಿವರಣೆ - ಈ ಪ್ರಕರಣದ ಉದ್ದೇಶಕ್ಕಾಗಿ, **'ಹಿಂಸೆ'** ಎಂದರೆ

(ಎ) ಮಹಿಳೆ ಆತ್ಮಹತ್ಯೆ ಮಾಡಿಕೊಳ್ಳುವಂತೆ ಪ್ರಚೋದಿಸುವ ಸ್ವರೂಪದ ಅಥವಾ ಅವಳ ಜೀವಕ್ಕೆ, ಅಂಗಗಳಿಗೆ ಅಥವಾ (ದೈಹಿಕ ಅಥವಾ ಮಾನಸಿಕ) ಆರೋಗ್ಯಕ್ಕೆ ತೀವ್ರ ಗಾಯ ಅಥವಾ ಹಾನಿ ಉಂಟುಮಾಡುವ ಸಂಭವವಿರುವ ಯಾವುದೇ ಉದ್ದೇಶಪೂರ್ವಕ ವರ್ತನೆ; ಅಥವಾ

(ಬಿ) ಯಾವುದೇ ಆಸ್ತಿ ಅಥವಾ ಮೌಲಿಕ ಭದ್ರತೆಯ ಯಾವುದೇ ಕಾನೂನು ಬಾಹಿರ ಬೇಡಿಕೆಯನ್ನು ಪೂರೈಸುವಂತೆ ಮಹಿಳೆಯನ್ನು ಅಥವಾ ಅವಳ ಸಂಬಂಧಿಯನ್ನು ಬಲಾತ್ಕಾರ

ಪಡಿಸುವ ದೃಷ್ಟಿಯಿಂದ ಮಹಿಳೆಗೆ ನೀಡಲಾದ ಕಿರುಕುಳ ಅಥವಾ ಅವಳು ಅಥವಾ ಅವಳ ಸಂಬಂಧಿ ಅಂಥ ಬೇಡಿಕೆಯನ್ನು ಪೂರೈಸಲು ವಿಫಲರಾದರೆಂಬ ಕಾರಣಕ್ಕಾಗಿ ನೀಡಲಾದ ಕಿರುಕುಳ.

ಭಾರತದಂಡ ಸಂಹಿತೆಯನ್ನು ತಿದ್ದುಪಡಿ ಮಾಡುವುದರೊಂದಿಗೆ ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಗೂ ಸೂಕ್ತ ತಿದ್ದುಪಡಿ ತರಲಾಯಿತು. ಮೇಲೆ ಹೇಳಿದ ಭಾರತದಂಡ ಸಂಹಿತೆಯ ೪೯೮ ಎ ಪ್ರಕರಣದ ಮೇರೆಗೆ ಅಪರಾಧವೆನಿಸುವ ಒಂದು ಕೃತ್ಯದ ಬಗ್ಗೆ ಯಾರು ದೂರು ಸಲ್ಲಿಸಬಹುದು ಎಂಬುದನ್ನು ೧೯೮ ಎ ಪ್ರಕರಣವನ್ನು ಸೇರಿಸಿ ಅದರಲ್ಲಿ ಸ್ಪಷ್ಟಪಡಿಸಲಾಗಿದೆ.

* ಮೇಲಿನ ಪ್ರಕರಣದ ಅಡಿಯಲ್ಲಿ ಅಪರಾಧವಾಗುವ ಕೃತ್ಯದ ವಿವರಗಳ ವರದಿಯನ್ನು ಪೊಲೀಸು ಅಧಿಕಾರಿ ಸಲ್ಲಿಸಬೇಕು.
* ಕ್ರೌರ್ಯಕ್ಕೆ ಒಳಗಾದ ವ್ಯಕ್ತಿ ಅಥವಾ ಅವಳ ತಂದೆ, ತಾಯಿ, ಸೋದರ, ಸೋದರಿ ಅಥವಾ ತಂದೆ ಅಥವಾ ತಾಯಿಯ ಸೋದರ, ಸೋದರಿ ಬಂದು ದೂರನ್ನು ಸಲ್ಲಿಸಬೇಕು.
* ನ್ಯಾಯಾಲಯದ ಅನುಮತಿ ಪಡೆದು ಅವಳ ರಕ್ತ ಸಂಬಂಧಿ ವೈವಾಹಿಕ ಅಥವಾ ದತ್ತಕ ಸಂಬಂಧಿಯಾದ ಯಾವನೇ ವ್ಯಕ್ತಿ ದೂರನ್ನು ಸಲ್ಲಿಸಬಹುದು.

ಈ ಉಪಬಂಧಗಳಿಂದಾಗಿ ಪತಿಯ ಕ್ರೌರ್ಯಕ್ಕೆ ಒಳಗಾದ ಪತ್ನಿ ತಾನೇ ಸ್ವತಃ ಅಥವಾ ಅವಳ ಸಂಬಂಧಿಗಳು ಅವಳ ಪರವಾಗಿ ದೂರನ್ನು ಸಲ್ಲಿಸುವುದು ಸುಲಭವಾಗಿದೆ. ದೂರನ್ನು ಪತ್ನಿ ತಾನೇ ಸ್ವತಃ ನೀಡಿದ್ದರೆ ಅಥವಾ ತನ್ನ ಯಾವೊಬ್ಬ ಬಂಧುವಿನ ಮೂಲಕ ನೀಡಿದ್ದರೆ, ಮ್ಯಾಜಿಸ್ಟ್ರೇಟರಿಂದ ವಾರೆಂಟನ್ನು ಪಡೆಯದೆಯೇ ದಸ್ತಗಿರಿ ಮಾಡಬಹುದು. ಅವಳಿಗೆ ಅಂಥ ಸಂಬಂಧಿ ಯಾರೂ ಇಲ್ಲದಿದ್ದರೆ ಸರ್ಕಾರ ಅಧಿಸೂಚಿಸಿರುವ ಪ್ರವರ್ಗಕ್ಕೆ ಸೇರಿದ ಯಾವೊಬ್ಬ ಸರ್ಕಾರಿ ನೌಕರ ಸಹ ಪೊಲೀಸು ಅಧಿಕಾರಿಗೆ ಈ ಬಗ್ಗೆ ಮಾಹಿತಿ ನೀಡಬಹುದು. ಆಗಲೂ ಸಹ ಪೊಲೀಸು ಅಧಿಕಾರಿ, ಅವಳ ಪತಿ ಅಥವಾ ಪತಿಯ ಸಂಬಂಧಿಗಳನ್ನು ವಾರೆಂಟ್ ಇಲ್ಲದೆ ದಸ್ತಗಿರಿ ಮಾಡಬಹುದು. ಈ ಅಪರಾಧಕ್ಕಾಗಿ ದಸ್ತಗಿರಿಯಾದವನಿಗೆ ಜಾಮೀನು ದೊರೆಯುವುದಿಲ್ಲ. ಏಕೆಂದರೆ ಈ ಅಪರಾಧವನ್ನು "ಜಾಮೀನೀಯವಲ್ಲದ ಅಪರಾಧಗಳ" ಗುಂಪಿಗೆ ಸೇರಿಸಲಾಗಿದೆ. ಆದರೂ ಆಯಾ ಪ್ರಕರಣದ ಸನ್ನಿವೇಶಗಳನ್ನು ಗಮನದಲ್ಲಿರಿಸಿಕೊಂಡು ನ್ಯಾಯಾಲಯ ತನ್ನ ವಿವೇಚನಾನುಸಾರ ಜಾಮೀನು ಮಂಜೂರು ಮಾಡಬಹುದಾಗಿರುತ್ತದೆ.

ಪತಿಯ ಅಥವಾ ಅವನ ಬಂಧುಗಳ ಕ್ರೌರ್ಯಕ್ಕೆ ಗುರಿಯಾಗಿ ಸಾವಿಗೀಡಾಗುವ ಮತ್ತು ಆತ್ಮಹತ್ಯೆ ಮಾಡಿಕೊಳ್ಳುವ ಪತ್ನಿಯರ ಸಂಖ್ಯೆ ಹೆಚ್ಚುತ್ತಲೇ ಇದೆ. ಇಂಥ ಸಂದರ್ಭಗಳಲ್ಲಿ ಮೃತಳ ಅಂತ್ಯಕ್ರಿಯೆಯನ್ನು ಮಾಡಿ ಮುಗಿಸಿಬಿಡಲು ಅಪರಾಧಕ್ಕೆ ಕಾರಣರಾದವರು ಅನುಚಿತ ಆತುರವನ್ನು ತೋರಿಸುತ್ತಾರೆ. ಸಾವಿಗೀಡಾದ ಮಹಿಳೆಯ ಮೃತ ದೇಹವನ್ನು

ಹಾಗೆ ಆತುರದಲ್ಲಿ ವಿಲೇ ಮಾಡುವುದನ್ನು ತಡೆಯುವುದಕ್ಕಾಗಿ ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯ ೧೭೪ ನೇ ಪ್ರಕರಣವನ್ನು ತಿದ್ದುಪಡಿಮಾಡಲಾಗಿದೆ. ಮತ್ತು ಈ ತಿದ್ದುಪಡಿ ಮಾಡುವ ಮೂಲಕ ಈ ಮುಂದಿನ ಸಂದರ್ಭಗಳಲ್ಲಿ ಮೃತ ದೇಹವನ್ನು ಕಡ್ಡಾಯವಾಗಿ ವೈದಕೀಯ ಪರೀಕ್ಷೆಗೆ ಕಳುಹಿಸಬೇಕೆಂದು ವಿಧಿಸಲಾಗಿದೆ, ಎಂದರೆ-

i) ಮಹಿಳೆ ವಿವಾಹದ ತರುವಾಯದ ಏಳು ವರ್ಷಗಳೊಳಗೆ ಆತ್ಮಹತ್ಯೆ ಮಾಡಿಕೊಂಡಿದ್ದರೆ,

ii) ವಿವಾಹದ ತರುವಾಯದ ಏಳು ವರ್ಷಗಳೊಳಗೆ ಆದ ಆ ಮಹಿಳೆಯ ಸಾವು ಇತರ ವ್ಯಕ್ತಿಯ ಅಪರಾಧದಿಂದ ಆಗಿದೆ ಎಂದು ಸಕಾರಣವಾಗಿ ಸಂದೇಹಿಸಬಹುದಾದ ಸಂದರ್ಭಗಳಲ್ಲಿ ಆಗಿದ್ದರೆ,

iii) ಮಹಿಳೆಯ ಸಾವು ವಿವಾಹವಾದ ನಂತರ ಏಳು ವರ್ಷಗಳೊಳಗೆ ಆಗಿದ್ದು ಆ ಬಗ್ಗೆ ಮಹಿಳೆಯ ಯಾರೇ ಬಂಧು ಕೋರಿಕೆ ಸಲ್ಲಿಸಿದ್ದರೆ,

iv) ಸಾವಿನ ಕಾರಣದ ಬಗ್ಗೆ ಸಂದೇಹವಿದ್ದರೆ ಅಥವಾ

v) ಪೊಲೀಸು ಅಧಿಕಾರಿ ಅಥವಾ ಇತರ ಯಾವೊಬ್ಬ ವ್ಯಕ್ತಿ ಹಾಗೆ ಮಾಡುವುದು ಉಚಿತವೆಂದು ಭಾವಿಸಿದರೆ-

ಅಂಥ ಸಂದರ್ಭಗಳಲ್ಲಿ ವೈದ್ಯಕೀಯ ಪರೀಕ್ಷೆಗೆ ಕಳುಹಿಸಬೇಕಾಗುತ್ತದೆ.

ಸಾವಿನ ಕಾರಣದ ಬಗ್ಗೆ ಮ್ಯಾಜಿಸ್ಟ್ರೇಟರ ವಿಚಾರಣೆಯ ಬಗ್ಗೆ ಉಪಬಂಧ ಕಲ್ಪಿಸುವ ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯ ೧೭೬ ನೇ ಪ್ರಕರಣವನ್ನು ೧೯೮೩ ರಲ್ಲಿ ತಿದ್ದುಪಡಿ ಮಾಡಲಾಯಿತು.

ಇದರ ಪ್ರಕಾರ, ಮಹಿಳೆ ತನ್ನ ವಿವಾಹವಾದ ತರುವಾಯದ ಏಳು ವರ್ಷಗಳೊಳಗೆ ಆತ್ಮಹತ್ಯೆ ಮಾಡಿಕೊಂಡಿದ್ದರೆ ಅಥವಾ ಆ ಅವಧಿಯೊಳಗೆ ಅನುಮಾನಾಸ್ಪದ ರೀತಿಯಲ್ಲಿ ಸಾವಿಗೀಡಾಗಿದ್ದರೆ, ಪೊಲೀಸು ವಿಚಾರಣೆಯೊಂದಿಗೆ ಮ್ಯಾಜಿಸ್ಟ್ರೇಟರೂ ವಿಚಾರಣೆ ನಡೆಸಬಹುದು. ದೇಹವನ್ನು ಹೂಳಲಾಗಿದ್ದರೆ ಅದನ್ನು ಹೊರತೆಗೆಯುವಂತೆ ಆದೇಶಿಸಬಹುದು ಮತ್ತು ಮೃತ ಮಹಿಳೆಯ ಸಂಬಂಧಿಗಳಿಗೆ (ತಂದೆ, ತಾಯಿ, ಮಕ್ಕಳು, ಸಹೋದರ ಸಹೋದರಿಯರು ಮತ್ತು ಪತಿ) ವಿಚಾರಣೆಯ ಕಾಲದಲ್ಲಿ ಹಾಜರಿರುವಂತೆ ತಿಳಿಸಬಹುದು.

ಭಾರತೀಯ ಸಾಕ್ಷ್ಯ ಅಧಿನಿಯಮವನ್ನು ಮಹಿಳೆಗೆ ಅನುಕೂಲವಾಗುವ ರೀತಿಯಲ್ಲಿ ತಿದ್ದುಪಡಿ ಮಾಡಲಾಗಿದೆ. ಆತ್ಮಹತ್ಯೆಗೆ ದುಷ್ಪ್ರೇರಣೆ ನೀಡುವುದು ಅಪರಾಧ. ಹಾಗಾಗಿ, ಸಾಮಾನ್ಯವಾಗಿ, ಮಹಿಳೆಯ ಆತ್ಮಹತ್ಯೆಗೆ ಕಾರಣವಾದ ಕ್ರೌರ್ಯದ ಕುರುಹುಗಳನ್ನು ಮುಚ್ಚಿಹಾಕಲು ಅಪರಾಧಿಗಳು ಪ್ರಯತ್ನಿಸುತ್ತಾರೆ. ಇದರಿಂದಾಗಿ ಆರೋಪಿತರ

ಅಪರಾಧಗಳನ್ನು ರುಜುವಾತುಪಡಿಸಲು ಪ್ರಾಸಿಕ್ಯೂಷನ್ ವಕೀಲರಿಗೆ ಸಾಕಷ್ಟು ಸಾಕ್ಷ್ಯಗಳು ದೊರೆಯುತ್ತಿರಲಿಲ್ಲ. ಸಾಕ್ಷ್ಯಗಳ ಕೊರತೆಯಿಂದಾಗಿಯೇ ಅನೇಕ ಪ್ರಕರಣಗಳಲ್ಲಿ ಅಪರಾಧಿಗಳು ದೋಷಮುಕ್ತರಾಗಿಬಿಡುತ್ತಿದ್ದರು. ಈಗ ಈ ತಿದ್ದುಪಡಿಯಿಂದಾಗಿ, ತಾನು ನಿರ್ದೋಷಿಯೆಂಬುದನ್ನು ಆರೋಪಕ್ಕೆ ಗುರಿಯಾದ ವ್ಯಕ್ತಿಯೇ ಸಾಕ್ಷ್ಯಾಧಾರಗಳಿಂದ ಸಿದ್ಧಗೊಳಿಸಬೇಕಾಗುತ್ತದೆ. ಮದುವೆಯಾದ ಏಳು ವರ್ಷಗಳೊಳಗೆ ಪತ್ನಿ ಮರಣಹೊಂದಿದರೆ ಮತ್ತು ಅವಳ ಪತಿ ಹಾಗೂ ಸಂಬಂಧಿಗಳು ಅವಳನ್ನು ಹಿಂಸಿಸುತ್ತಿದ್ದರೆಂಬುದನ್ನು ಸಾಬೀತುಪಡಿಸಿದರೆ ಆರೋಪಿಯನ್ನು ನ್ಯಾಯಾಲಯ ಅಪರಾಧಿಯೆಂದೇ ಭಾವಿಸುತ್ತದೆ.

ಈ ಎಲ್ಲ ತಿದ್ದುಪಡಿಗಳ ಉದ್ದೇಶ ನೊಂದ ಮಹಿಳೆಯರಿಗೆ ನ್ಯಾಯದೊರಕಿಸಬೇಕು ಮತ್ತು ಕಾನೂನಿನಲ್ಲಿರುವ ಕೊರತೆಗಳಿಂದಾಗಿ ನಿಜವಾದ ಅಪರಾಧಿ ಶಿಕ್ಷೆಗೆ ಗುರಿಪಡದೆ ಪಾರಾಗಬಾರದು ಎಂಬುದು. ನ್ಯಾಯ ಪರಿಪಾಲನೆಯಲ್ಲಿ ಕಾನೂನುಗಳಷ್ಟೇ ಕಾನೂನಿನ ಅನ್ವಯ ಹಾಗೂ ವ್ಯಾಖ್ಯಾನಗಳೂ ಅಷ್ಟೇ ಮಹತ್ತರ ಪಾತ್ರವನ್ನು ವಹಿಸುತ್ತವೆ.

ಚಂಚಲ ಕುಮಾರಿ ವಿ-ಚಂಡೀಘಡ ಸಂಘ ರಾಜ್ಯಕ್ಷೇತ್ರ ( ಎಐಆರ್ ೧೯೮೬ ಎಸ್ ಸಿ ೭೫೨) ಪ್ರಕರಣದಲ್ಲಿ ಮಹಿಳೆಯ ಸಾವು ಸಂಭವಿಸಿದ್ದು ೧೯೮೧ರ ಜುಲೈ ೨೦ ರಂದು. ಪ್ರಥಮ ಮಾಹಿತಿ ವರದಿಯನ್ನು ದಾಖಲು ಮಾಡಿದ್ದು ಮೂರು ದಿನಗಳ ನಂತರ ಸಂಜೆ ೫-೧೦ ರಲ್ಲಿ. ಇದಕ್ಕೆ ಕಾರಣ ಮೃತಳ ಅಣ್ಣ ದೂರದೂರಿನಲ್ಲಿದ್ದ ಎಂಬುದು. ಅಧೀನ ನ್ಯಾಯಾಲಯಗಳು ಅಪರಾಧಿಗಳನ್ನು ಶಿಕ್ಷೆಗೆ ಒಳಪಡಿಸಿದುವು. ಆದರೆ ಉಚ್ಚ ನ್ಯಾಯಾಲಯ ಪ್ರಥಮ ಮಾಹಿತಿ ವರದಿಯನ್ನು ನೀಡುವಲ್ಲಿ ಆದ ವಿಳಂಬಕ್ಕೆ ಸಮಾಧಾನಕರ ಉತ್ತರ ನೀಡಿಲ್ಲ, ಹಾಗಾಗಿ ಇಡೀ ಕಾನೂನು ವ್ಯವಹರಣೆಗಳ ಸತ್ಯತೆಯ ಬಗ್ಗೆ ಇದು ಪ್ರಶ್ನಿಸುವಂತೆ ಮಾಡುತ್ತದೆ ಎಂಬ ಕಾರಣ ನೀಡಿ ಅಪರಾಧಿಗಳನ್ನು ದೋಷಮುಕ್ತರನ್ನಾಗಿಸಿತು.

ಆದರೆ, ಬಿರ್ದಿ ಚಂದ್ ಸರ್ದಾ ವಿ-ಮಹಾರಾಷ್ಟ್ರ ರಾಜ್ಯ (ಎಐಆರ್ ೧೯೮೪ ಎಸ್ ಸಿ ೧೬೨೨) ಪ್ರಕರಣದಲ್ಲಿ ನಗರದ ಗಣ್ಯ ವ್ಯಕ್ತಿ ಬಿರ್ದಿ ಚಂದ್ ಸರ್ದಾವಿ ಅವರ ಪತ್ನಿ ಮಂಜು ಕೇವಲ ೨೦ ವರ್ಷದ, ಅದೇ ಆಗ ಜೀವನಕ್ಕೆ ಕಾಲಿಟ್ಟ ಕನಸುಹೊತ್ತ ತರುಣಿ. ಆದರೆ, ಮದುವೆಯಾದ ನಾಲ್ಕು ತಿಂಗಳೊಳಗೆ ಆತ್ಮಹತ್ಯೆ ಮಾಡಿಕೊಂಡು ಜೀವನಕ್ಕೆ ವಿದಾಯ ಹೇಳಿದಳು. ಕಾರಣ ಗಂಡನ ಅಲಕ್ಷ್ಯ ಹಾಗೂ ಅವನಿಗಿದ್ದ ವಿವಾಹಬಾಹಿರ ಸಂಬಂಧ. ಅಧೀನ ನ್ಯಾಯಾಲಯಗಳು ಅಪರಾಧಿ ಎಂದ ಬಿರ್ದಿಚಂದ್‌ನನ್ನು ಸರ್ವೋಚ್ಚ ನ್ಯಾಯಾಲಯ ಮಂಜುವಿನ ಮರಣ ಆತ್ಮಹತ್ಯೆಯಿಂದಲೇ ಉಂಟಾಗಿದೆ ಎಂದು ತೀರ್ಪು ನೀಡಿ ಆರೋಪಿತನನ್ನು ಖುಲಾಸೆ ಮಾಡಿತು. ಇಲ್ಲಿಯೂ ಎಫ್‌ಪಿ ಆರ್ ಅನ್ನು ನೀಡುವಲ್ಲಿ ವಿಳಂಬವಾಗಿತ್ತು. ಆದರೆ ಇಲ್ಲಿ ಈ ವಿಳಂಬವನ್ನು ಬಿರ್ದಿಚಂದ್ ನಗರದ ಗಣ್ಯ ವ್ಯಕ್ತಿ, ಹಾಗಾಗಿ ಆತುರದ ನಿರ್ಧಾರ ಕೈಗೊಂಡಲ್ಲಿ ತಮ್ಮ ಮರ್ಯಾದೆಗೆ ಕುಂದುಂಟಾಗಬಹುದೆಂಬ ಕಾರಣದಿಂದ ಅವರು ತತ್‌ಕ್ಷಣವೇ ಎಫ್‌ಪಿಆರ್ (ಪ್ರಥಮ ಮಾಹಿತಿ ವರದಿ)ಅನ್ನು

ದಾಖಲು ಮಾಡಿಲ್ಲ, ಯಾವುದೇ ಕ್ರಮ ಕೈಗೊಳ್ಳುವುದಕ್ಕೆ ಮುನ್ನ ಆ ಬಗ್ಗೆ ತಮ್ಮ ಸ್ನೇಹಿತರನ್ನು ಸಮಾಲೋಚಿಸುವುದಕ್ಕಾಗಿ ಅವರು 'ಸ್ವಲ್ಪ' ಸಮಯ ತೆಗೆದುಕೊಂಡಿರಬಹುದು-ಎಂದು ಸರ್ವೋಚ್ಚ ನ್ಯಾಯಾಲಯವೇ ಸಮರ್ಥಿಸಿತು.

ಒಂದು ಪ್ರಕರಣದಲ್ಲಿ ಪ್ರಥಮ ಮಾಹಿತಿ ವರದಿಯನ್ನು ನೀಡುವಲ್ಲಿ ಆದ ವಿಳಂಬ ಅಪರಾಧ ಸಿದ್ಧಿಗೆ ಅಡ್ಡಿಯಾಗುತ್ತದೆ. ಆದರೆ ಅದೇ ವಿಳಂಬ ಇನ್ನೊಂದು ಪ್ರಕರಣದಲ್ಲಿ ಅಪರಾಧಿಯ ಖುಲಾಸೆಗೆ ಅಡ್ಡಿಯಾಗುವುದಿಲ್ಲ!

ಮಹಿಳೆಯರ ವಿರುದ್ಧ ತೋರುವ ಕ್ರೌರ್ಯಕ್ಕೆ ಹಾಗೂ ಹಿಂಸೆಗೆ ರಕ್ಷಣೆಯಾಗಿ ತಂದಿರುವ ಕಾನೂನು ಅದರ ನಿಜವಾದ ಅರ್ಥದಲ್ಲಿ ಮಹಿಳೆಯರ ರಕ್ಷಣೆಗೆ ಒದಗುವುದು ಕಾನೂನನ್ನು ಪರಿಣಾಮಕಾರಿಯಾಗಿ ಅನ್ವಯಿಸಿದಾಗ ಮಾತ್ರ. ಈ ಎರಡೂ ಪ್ರಕರಣಗಳಲ್ಲಿ ಕಾನೂನಿನ ಅನ್ವಯದಲ್ಲಿ ನ್ಯಾಯಾಂಗ ವಹಿಸಿರುವ ಪಾತ್ರವನ್ನು ಗಮನಿಸಬಹುದು.

ಕೇವಲ ನೈತಿಕತೆಯ ಆಧಾರದ ಮೇಲೆ ಯಾವೊಬ್ಬ ವ್ಯಕ್ತಿಯನ್ನು ಅಪರಾಧಿ ಎಂದು ನಿರ್ಣಯಿಸಬಾರದು ಎಂಬುದು ನ್ಯಾಯಶಾಸ್ತ್ರದ ಮೂಲ ತತ್ವ. ದೊರೆವ ಸಾಕ್ಷ್ಯಗಳಿಂದ ಆರೋಪಿತನ ಪರವಾಗಿ ಅಥವಾ ಅವನ ವಿರುದ್ಧವಾಗಿ-ಎರಡೂ ರೀತಿಯಲ್ಲಿ ವ್ಯಾಖ್ಯಾನಿಸಿ ತೀರ್ಪು ನೀಡುವುದು ಸಾಧ್ಯವಿದ್ದಾಗ, ಅಂಥ ತೀರ್ಪು ಯಾವಾಗಲೂ ಆರೋಪಿತನಿಗೆ ಅನುಕೂಲಕರವಾಗಿಯೇ ಇರಬೇಕು ಎಂಬುದು ನೆಲೆಗೊಂಡಿರುವ ಕಾನೂನು ಸಿದ್ಧಾಂತ. ಎಂದರೆ ಒಂದು ಸಾಕ್ಷ್ಯ ಪ್ರಾಸಿಕ್ಯೂಷನ್ನಿನ ಪರವಾಗಿದ್ದು ಇನ್ನೊಂದು ಸಾಕ್ಷ್ಯ ಆರೋಪಿಯ ಪರವಾಗಿದ್ದರೆ, 'ಸಂದೇಹದ ಲಾಭ' (benefit of doubt) ದೊರೆಯುವುದು ಆರೋಪಿಗೇ.

ಕುಟುಂಬದ ವ್ಯವಹಾರಗಳು ಖಾಸಗಿ ಸ್ವರೂಪದ್ದಾಗಿರುವುದರಿಂದ, ಮಹಿಳೆಯರು ಅತಿ ಸುಲಭವಾಗಿ ಕ್ರೌರ್ಯಕ್ಕೆ ಹಾಗೂ ಹಿಂಸೆಗೆ ಗುರಿಯಾಗುತ್ತಾರೆ. ಇದು ಮನೆಯ ನಾಲ್ಕು ಗೋಡೆಗಳ ನಡುವೆ ನಡೆಯುವುದರಿಂದ, ಪುರುಷರ ವಿರುದ್ಧ ಕಾನೂನು ಅಗತ್ಯಪಡಿಸುವ ಸಾಕ್ಷ್ಯಗಳು ದೊರೆಯುವುದಿಲ್ಲ. ಆದ್ದರಿಂದ ಅಪರಾಧಿತ ನ್ಯಾಯಾಶಾಸ್ತ್ರದ ಪ್ರಕಾರ ಅಪರಾಧವನ್ನು 'ಸಂದೇಹಕ್ಕೆ ಆಸ್ಪದವಿಲ್ಲದಂತೆ' ರುಜುವಾತುಪಡಿಸುವುದು ಕಷ್ಟದ ಕೆಲಸ. ಆದರೆ ಸಂದೇಹಾತೀತ ಸಾಕ್ಷ್ಯವಿದ್ದಾಗಲೂ ಸಹ ಮಹಿಳೆಯನ್ನು ಹಾಗೂ ಅವಳ ಮರಣ ಕಾಲದ ಹೇಳಿಕೆಯನ್ನು ನ್ಯಾಯಾಲಯ ಸಂದೇಹದಿಂದ ನೋಡಿರುವ ಪ್ರಕರಣಗಳಿವೆ.

೧೯೮೪ ರ ೨೪ ರಂದು ತೀರ್ಪು ಹೊರಬಿದ್ದ ರಾಜ್ಯ ವಿ- ಉಧಾಮಸಿಂಗ್ ಪ್ರಕರಣದಲ್ಲಿ ಒಂದು ವರ್ಷದ ಮಗುವಿನ ತಾಯಿ-ಸಣ್ಣ ವಯಸ್ಸಿನ ಶನ್ನಿಕೌರ್ ದೆಹಲಿಯ ಆಸ್ಪತ್ರೆಯೊಂದರಲ್ಲಿ ಸುಟ್ಟ ಗಾಯಗಳಿಂದ ಮೃತಪಟ್ಟಳು. ಸಾಯುವುದಕ್ಕೆ ಮುನ್ನ ತನ್ನ ಗಂಡನೇ ತನ್ನ ಮೇಲೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿದನೆಂದು ಮೂರು ಬಾರಿ ಹೇಳಿಕೆ ನೀಡಿದಳು- ಒಮ್ಮೆ ಪೊಲೀಸರಿಗೆ ಮತ್ತು ಎರಡು ಬಾರಿ ವೈದ್ಯರಿಗೆ. ಆದರೆ ನ್ಯಾಯಾಲಯ ಇದನ್ನು ನಂಬಲಿಲ್ಲ. ಮೊದಲ ಬಾರಿ ವೈದ್ಯರಿಗೆ ನೀಡಿದ ಹೇಳಿಕೆಯನ್ನು ನಂಬದಿರಲು ಅದು ನೀಡಿದ ಕಾರಣ-ಹೇಳಿಕೆಯನ್ನು ನೀಡುವಂಥ ಸ್ವಸ್ಥ ಮನಃಸ್ಥಿತಿಯನ್ನು ಆಕೆ

ಹೊಂದಿದ್ದಾಳೆಯೋ ಇಲ್ಲವೇ ಎಂಬುದನ್ನು ವೈದ್ಯರು ವೈದ್ಯಕೀಯ ಪರೀಕ್ಷೆ ನಡೆಸಿ ಖಚಿತಪಡಿಸಿಕೊಂಡಿರಲಿಲ್ಲ-ಎಂಬುದು. ಎರಡನೆಯ ಬಾರಿ ಪೊಲೀಸರಿಗೆ ನೀಡಿದ ಹೇಳಿಕೆಯನ್ನು ಪರಿಗಣಿಸದೆ ಇದ್ದುದಕ್ಕೆ ನೀಡಿದ ಕಾರಣ-ಪೊಲೀಸರು ನಂಬಲರ್ಹರಲ್ಲ. ಬಹುಮಾನ ಪಡೆಯುವ ಆಸೆಯಿಂದ ಈ ಹೇಳಿಕೆಯನ್ನು ದಾಖಲು ಮಾಡಿರಬೇಕು-ಎಂಬುದು. ಮೂರನೆಯ ಬಾರಿ ಮತ್ತೊಬ್ಬ ವೈದ್ಯರು ಅವಳನ್ನು ವೈದ್ಯಕೀಯ ಪರೀಕ್ಷೆಗೆ ಒಳಪಡಿಸಿ ಅವಳು ಹೇಳಿಕೆ ನೀಡುವ ಸ್ವಸ್ಥ ಮನಃಸ್ಥಿತಿಯನ್ನು ಹೊಂದಿದ್ದಾಳೆ ಎಂಬುದನ್ನು ದೃಢಪಡಿಸಿಕೊಂಡು ಪಡೆದ ಹೇಳಿಕೆಯನ್ನು ನಂಬದಿರಲು ನ್ಯಾಯಾಲಯ ನೀಡಿದ ಕಾರಣ-ಅವಳು ನೋವಿನಿಂದ ಕಿರುಚುತ್ತಿದ್ದಳು-ಹಾಗಾಗಿ ಅವಳು ಹೇಳಿಕೆ ನೀಡುವ ಮನಃಸ್ಥಿತಿಯಲ್ಲಿದ್ದಳು ಎಂದು ನಂಬಲು ಕಷ್ಟ-ಎಂಬುದು. ಮೇಲಿನ ಎಲ್ಲ ಮೂರು ಬಾರಿಯ ಹೇಳಿಕೆಗಳಲ್ಲೂ ಶಸ್ನಿಕೌರ್ ತನ್ನ ಮೇಲೆ ಸೀಮೆಎಣ್ಣೆ ಸುರಿದು ಬೆಂಕಿ ಹಚ್ಚಿದುದು ತನ್ನ ಗಂಡನೇ ಎಂಬುದನ್ನು ಮತ್ತೆ ಮತ್ತೆ ಸ್ಪಷ್ಟವಾಗಿ ತಿಳಿಸಿದ್ದಳು.

ಕೆಲವೊಮ್ಮೆ ಗಂಡನ ಕ್ರೌರ್ಯಕ್ಕೆ ತುತ್ತಾಗಿ ಸಾಯುವ ಸ್ಥಿತಿಯಲ್ಲಿರುವ ಮಹಿಳೆಯೂ ತನ್ನ ಸಾವಿಗೆ ತನ್ನ ಗಂಡನೇ ಕಾರಣ ಎಂದು ಹೇಳಲು ಹಿಂಜರಿದು, ತಾನೇ ಆತ್ಮಹತ್ಯೆಗೆ ಪ್ರಯತ್ನಿಸಿದುದು ಎಂಬ ಹೇಳಿಕೆ ನೀಡುತ್ತಾಳೆ. ಒಂದು ವೇಳೆ ಗುಣಮುಖಳಾದರೆ ಮತ್ತೆ ಅದೇ ಮನೆಗೆ ಹೋಗಿ ಅವರ ನಡುವೆಯೇ ಬಾಳಬೇಕಾಗುತ್ತದೆಂಬ ಕಠೋರ ಸತ್ಯ ಇಂಥ ಹೇಳಿಕೆಗಳಿಗೆ ಕಾರಣವಾಗುತ್ತದೆ. ಹೀಗಾಗಿ ಎಲ್ಲ ಸಾಕ್ಷ್ಯಗಳೂ ಒಂದು ಸಾವನ್ನು ಕೊಲೆ ಎಂಬುದನ್ನು ರುಜುವಾತುಪಡಿಸಿದರೂ ಮರಣ ಕಾಲದ ಹೇಳಿಕೆ ಅದನ್ನು ಆತ್ಮಹತ್ಯೆ ಎನ್ನುತ್ತದೆ. ಕೆಲವೊಮ್ಮೆ ತನ್ನ ಸಾವಿಗೆ ಆತ್ಮಹತ್ಯೆಯ ಪ್ರಯತ್ನವೇ ಕಾರಣ ಎಂದು ಹೇಳಿಕೆಕೊಟ್ಟ ಮಹಿಳೆ ಇನ್ನು ತಾನು ಉಳಿಯುವುದಿಲ್ಲವೆಂಬುದು ಖಚಿತವಾದಾಗ ತನ್ನ ಸಾವಿಗೆ ಆತ್ಮಹತ್ಯೆಯ ಪ್ರಯತ್ನ ಕಾರಣವಲ್ಲ ಅದು ಕೊಲೆ ಎಂಬ ಹೇಳಿಕೆಯನ್ನು ನೀಡುತ್ತಾಳೆ.

ವರದಕ್ಷಿಣೆಯ ಪ್ರಕರಣಗಳಲ್ಲಿ ಒಬ್ಬ ವ್ಯಕ್ತಿಯನ್ನು ಅಪರಾಧಿಯೆಂದು ನಿರ್ಧರಿಸುವಲ್ಲಿ ಸಾವಿನಂಚಿನಲ್ಲಿರುವ ವ್ಯಕ್ತಿಯ 'ಮರಣ ಕಾಲದ ಹೇಳಿಕೆ' ಮುಖ್ಯ ಸಾಕ್ಷ್ಯವಾಗುತ್ತದೆ.

ವರದಕ್ಷಿಣೆಯಂಥ ಸಾಮಾಜಿಕ ಪಿಡುಗನ್ನು ಈ ಎಲ್ಲ ಕಾನೂನುಗಳ ಮೂಲಕವೂ ನಿವಾರಿಸಲಾಗದಿರುವುದಕ್ಕೆ ನಮ್ಮ ಮಹಿಳೆಯರ ಆರ್ಥಿಕ ಅವಲಂಬನೆಯಷ್ಟೇ ಅವರ ಮನೋಧರ್ಮವೂ ಕಾರಣವಾಗುತ್ತದೆ.

ಏನೇ ಕಷ್ಟ ಬಂದರೂ ಗಂಡನೇ ದೈವ, ಗಂಡನ ಮನೆಯೇ ಅವಳು ಬಾಳಿ ಬದುಕಬೇಕಾದ ಮನೆ, ಗಂಡನ ಹೊರತು ಅವಳಿಗೆ ಉಳಿವಿಲ್ಲ. ಪ್ರತ್ಯೇಕ ಅಸ್ತಿತ್ವವಿಲ್ಲ, ಬೆಲೆಯಿಲ್ಲ, ಕಡೆಗೆ ನೆಲೆಯೂ ಇಲ್ಲ. ಇದು ನಮ್ಮ ಸಮಾಜ ಹೆಣ್ಣು ಮಕ್ಕಳಲ್ಲಿ ಬಿತ್ತಿ ಮರವಾಗಿಸಿರುವ ಆದರ್ಶ. ಇಂಥ ಆದರ್ಶದ ಆರಾಧನಾ ಮನೋಭಾವವೇ ಎಷ್ಟೋ ಬಾರಿ ಅವಳಿಗೆ ಶಾಪವಾಗಿ ಪರಿಣಮಿಸಿದೆ.

ಒಂದು ವೇಳೆ ಗಂಡನ ಕಿರುಕುಳವನ್ನು ತಾಳದೇ ಗಂಡನನ್ನು ಧಿಕ್ಕರಿಸಿ ಹೊರಬರುವ ಎಷ್ಟು ಮಂದಿ ಮಹಿಳೆಯರಿಗೆ ತವರಿನ ಆಶ್ರಯ ದೊರೆತೀತು?

ವಸಂತ ನಾರಾಯಣ ಪವಾರ್ -ವಿ- ಮಹಾರಾಷ್ಟ್ರ ರಾಜ್ಯ ಪ್ರಕರಣದಲ್ಲಿ (೧೯೮೦. ೨ **ಎಸ್‌ಸಿಆರ್**) ಮಹಿಳೆಯನ್ನು ಅವಳ ಪತಿಯೇ ಬೆಂಕಿ ಹಚ್ಚಿ ಕೊಲ್ಲಲು ಪ್ರಯತ್ನಿಸಿದ್ದರೂ ಮರಣ ಕಾಲದ ತನ್ನ ಹೇಳಿಕೆಯಲ್ಲಿ ಯಾವುದೇ ಕಾರಣಕ್ಕೂ ತನ್ನ ಪತಿಯನ್ನು ಹೊಡೆಯಬಾರದೆಂದು ಬೇಡುತ್ತಾ ಕಣ್ಣು ಮುಚ್ಚುತ್ತಾಳೆ.

ಮಹಿಳೆಯ ಈ ಭಾವನಾತ್ಮಕ ದೃಷ್ಟಿಯೂ ಕಾನೂನಿನ ವೈಫಲ್ಯಕ್ಕೆ ಕೆಲವೊಮ್ಮೆ ಕಾರಣವಾಗುತ್ತದೆ.

ಈ ಸಂದರ್ಭದಲ್ಲಿ, ಬ್ರಿಟನ್ನಿನಲ್ಲಿರುವ ಕಾನೂನನ್ನು ಗಮನಿಸಬೇಕು. ಅಲ್ಲಿ ತನ್ನನ್ನು ಹೊಡೆದು ಬಡಿದು ಹಿಂಸಿಸುತ್ತಾನೆಂದು ಪೋಲೀಸಿಗೆ ದೂರು ನೀಡುವ ಮಹಿಳೆ ಗಂಡನನ್ನು ಮನೆಯಿಂದ ಹೊರಹಾಕುವ ಆದೇಶವನ್ನು ಪಡೆಯಬಹುದು. ಬ್ರಿಟನ್ನಿನಲ್ಲಿ ಈ ಕಾರ್ಯತಂತ್ರ ಯಶಸ್ವಿಯಾದಂತೆ ಕಾಣುತ್ತದೆ. ಆದರೆ ಭಾರತದಲ್ಲಿನ ಪರಿಸ್ಥಿತಿ ಇದಕ್ಕೆ ತದ್ವಿರುದ್ಧ. ದೂರು ನೀಡಿದ ಮಹಿಳೆಯ ಪರಿಸ್ಥಿತಿ ಮತ್ತಷ್ಟು ಶೋಚನೀಯ.

ಆದರೆ ಈಗೀಗ ಈ ಪರಿಸ್ಥಿತಿ ಸ್ವಲ್ಪಮಟ್ಟಿಗೆ ಬದಲಾಗುತ್ತಿದೆ. ಕರ್ನಾಟಕದ ಸಾಗರದಲ್ಲಿರುವ ಅಗಡಿ ನಾರಾಯಣ ಆಶ್ರಮದಲ್ಲಿ ವರ ವರದಕ್ಷಿಣೆಯನ್ನು ಬೇಡಿದನೆಂಬ ಕಾರಣಕ್ಕೆ ಹಸೆ ಮಣೆಯ ಮೇಲಿದ್ದ ವಧು ಅದನ್ನು ಧಿಕ್ಕರಿಸಿ ನಡೆದ ಪ್ರಕರಣ ವರದಿಯಾಗಿದೆ. ಈಗೀಗ ಕರ್ನಾಟಕದಲ್ಲಿ ಹೆಚ್ಚು ಹೆಚ್ಚು ಶೋಷಿತ ಮಹಿಳೆಯರು ದೂರು ನೀಡಲು ಮುಂದಾಗುತ್ತಿದ್ದಾರೆ. ೧೯೮೩ ರಲ್ಲಿ ದೂರು ನೀಡಿದವರ ಸಂಖ್ಯೆ ಕೇವಲ ೨೦. ಆದರೆ ಈ ಸಂಖ್ಯೆ ೧೯೮೫ರಲ್ಲಿ ೯೧ ಕ್ಕೆ ೧೯೮೬ ರಲ್ಲಿ ೨೬೬ ಕ್ಕೆ ಏರಿತು.

ಮುರಿದು ಬಿದ್ದ ಎಲ್ಲ ಮದುವೆಗಳಿಗೂ ವರದಕ್ಷಿಣೆ ಒಂದೇ ಕಾರಣವಲ್ಲದಿದ್ದರೂ ಅಂಕಿ ಅಂಶಗಳ ಪ್ರಕಾರ ಬಹುಪಾಲು ಪ್ರಕರಣಗಳಿಗೆ ಅದೇ ಕಾರಣವಾಗಿದೆ. ಸಂತೋಷ ಹಾಗೂ ನೆಮ್ಮದಿಯಿಂದ ಕೂಡಿದ ಕುಟುಂಬಗಳೇ ಸಮಾಜ ವ್ಯವಸ್ಥೆಯ ಅಡಿಪಾಯ. ಆದ್ದರಿಂದ ಪ್ರಯತ್ನಗಳೂ ಸಮಸ್ಯೆಯ ಪರಿಹಾರಕ್ಕಿಂತ ಸಮಸ್ಯೆಗೆ ಮೂಲವಾದ ಕಾರಣವನ್ನು ನಿವಾರಿಸುವತ್ತ ಕೇಂದ್ರೀಕೃತವಾಗಬೇಕು.

ಈ ಹಿಂದೆಯೇ ಹೇಳಿದಂತೆ ಮಹಿಳೆಯ ಆರ್ಥಿಕ ಸ್ವಾವಲಂಬನೆ ಈ ಸಮಸ್ಯೆಯ ನಿವಾರಣೆಗೆ ಉತ್ತಮ ಉತ್ತರವಾದೀತು. ಮಹಿಳಾ ಸಾಕ್ಷರತೆಯ ಪ್ರಮಾಣವನ್ನು ಹೆಚ್ಚಿಸುವುದು ಈ ದಿಕ್ಕಿನಲ್ಲಿ ನಾವಿಡುವ ಮೊದಲ ಹೆಜ್ಜೆಯಾಗಬೇಕು. ಮಹಿಳೆಗೆ ಪಿತ್ರಾರ್ಜಿತ ಆಸ್ತಿ ಹಕ್ಕು ನೀಡಿರುವ ಕರ್ನಾಟಕ ಸರ್ಕಾರದ ಕ್ರಮ ಈ ದೃಷ್ಟಿಯಿಂದ ಅತ್ಯಂತ ಶ್ಲಾಘನೀಯವಾದುದು.

# ತಾಯಿಯಾಳಿಕೆ ನೆಲದ ಹಾಡ್ಗತೆಗಳಲ್ಲಿ ಮಹಿಳಾ ಸಂವಿಧಾನ

ಡಾ. ಗಾಯತ್ರೀ ನಾವಡ

ಬಂಧುತ್ವ ಎನ್ನುವುದು ವಿವಾಹ ಅಥವಾ ರಕ್ತ ಸಂಬಂಧದ ಮೂಲಕ ವ್ಯಕ್ತಿಗಳ ನಡುವೆ ಏರ್ಪಡುವ ಸಂಬಂಧ. ಸಮುದಾಯವೊಂದರಲ್ಲಿ ಬಂಧುತ್ವವು ಅತ್ಯಂತ ಕ್ರಿಯಾಶೀಲವಾಗಿರುವ ಸಂಗತಿ. ಹೀಗಾಗಿ ಯಾವುದೇ ಒಂದು ಸಾಮಾಜಿಕ ವ್ಯವಸ್ಥೆಯನ್ನು ಅರ್ಥೈಸಿಕೊಳ್ಳುವಲ್ಲಿನ ಮೂಲಭೂತ ಪರಿಕಲ್ಪನೆಗಳು ಎಂದರೆ ಅಲ್ಲಿನ ಬಂಧುತ್ವ ವ್ಯವಸ್ಥೆ. ಯಾಕೆಂದರೆ ಹೆಣ್ಣು-ಗಂಡಿನ ಸಂಬಂಧಗಳು ಆ ಸಮುದಾಯದ ಬಂಧುತ್ವ ವ್ಯವಸ್ಥೆಯೊಂದಿಗೆ ಅಂತರ್ ಸಂಬಂಧವನ್ನು ಹೊಂದಿರುತ್ತವೆ. ಒಂದು ಸಂಸ್ಕೃತಿಯ ಉತ್ಪನ್ನಗಳಾದ, ಬದುಕಿನ ಅಭಿವ್ಯಕ್ತಿಗಳಾದ ಜಾನಪದಕ್ಕೂ ಆ ಸಂಸ್ಕೃತಿಯಲ್ಲಿ ಹೆಣ್ಣು - ಗಂಡುಗಳು ಪಡೆದುಕೊಳ್ಳುವ ಸ್ಥಾನಮಾನಗಳಿಗೂ ನೇರವಾದ ಸಂಬಂಧವಿದೆ. ತಾಯಿಯಾಳಿಕೆ ನೆಲದ ಜಾನಪದವನ್ನು ಅಲ್ಲಿ ಪ್ರಕಟವಾಗುವ ಹೆಣ್ಣುತನವನ್ನು ಅಲ್ಲಿನ ಮಾತೃವಂಶೀಯ ಬಂಧುತ್ವ ವ್ಯವಸ್ಥೆಯ ಸಂರಚನೆಯ ಚೌಕಟ್ಟಿನಲ್ಲಿಯೇ ಕಂಡುಕೊಳ್ಳಬೇಕು. ಆಗ ಬಂಧುತ್ವ ವ್ಯವಸ್ಥೆ ಹಾಗೂ ಜಾನಪದದ ಒಳ ಸಂಬಂಧ ಕುರಿತಂತೆ ಒಂದು ಹೊಸ ಸಂಕಥನವನ್ನು ಕಟ್ಟುವುದು ಸಾಧ್ಯವಾಗುತ್ತದೆ.

ನನ್ನ ಈ ಶೋಧನೆಗೆ ತಾಯಿಯಾಳಿಕೆ ನೆಲದ 'ದ್ರೌಪದಿ ಪಗ್ಡಿ ಆಟೊ ಆಡಿದ್' 'ಕೊರತಿ ಕಂಚಿ' ಹಾಗೂ 'ಪರತಿ ಮಂಗಣೆ' ಎನ್ನುವ ಕನ್ನಡ-ತುಳು ಕಥನಕವನಗಳನ್ನು ಆಯ್ದುಕೊಂಡಿದ್ದೇನೆ. ನನ್ನ ಈ ಆಯ್ಕೆಯ ಸೈದ್ಧಾಂತಿಕತೆ ಹೆಣ್ಣು ಮುಖಾಮುಖಿಯಾದ ಸಂಘರ್ಷದ ವಿವಿಧ ವಿನ್ಯಾಸಗಳನ್ನು ಇವು ನೀಡುತ್ತವೆ ಎನ್ನುವುದರ ಜೊತೆಗೆ ಅದಕ್ಕೆ ಪ್ರತಿಕ್ರಿಯಿಸುವ ಇಲ್ಲಿನ ಹೆಣ್ಣುಗಳ ರೀತಿಯಲ್ಲಿ ಒಂದು ವಿಶಿಷ್ಟತೆ ಇದೆ ಎನ್ನುವುದು.

## ದ್ರೌಪದಿ ಪಗ್ಡಿ ಆಟೊ ಆಡಿದ್

ಅಧಿಕಾರೀಯ ಪ್ರಭುತ್ವಗಳು ಕೆಲವು ಮೌಲ್ಯ, ಮಾದರಿಗಳನ್ನು ಸ್ಥಾಪಿಸುವ ಪ್ರಯತ್ನವನ್ನು ಪರ್ಯಾಯ ಚಿಂತನೆಗಳು ಅದನ್ನು ಮುರಿಯುವ ಪ್ರಕ್ರಿಯೆಯಲ್ಲಿ ತೊಡಗಿರುತ್ತವೆ. ಈ ಪ್ರಕ್ರಿಯೆಯಾಗಿಯೇ ಮೌಖಿಕ ಪರಂಪರೆಯ ಜನಪದ ಕಾವ್ಯ, ಪುರಾಣ, ಹಾಡ್ಗತೆಗಳನ್ನು ಕಾಣಬೇಕಾಗಿದೆ. ಹೀಗಾಗಿಯೇ ಲಿಖಿತ ಕಾವ್ಯ ಹಾಗೂ ಮೌಖಿಕ ಕಾವ್ಯಗಳ ರಾಚನಿಕ ಸ್ವರೂಪದಲ್ಲೆ ವೈರುಧ್ಯಗೋಚರಿಸುತ್ತದೆ. ಲಿಖಿತ ಕಾವ್ಯಲೋಕದ ಪೌರಾಣಿಕತೆಗೆ, ದೈವಿಕತೆಗೆ ಪರ್ಯಾಯವಾಗಿ ವಾಸ್ತವ ನೆಲೆಯಲ್ಲಿ ಪರಿಭಾವಿಸುವ

ಲೋಕದೃಷ್ಟಿ ಮೌಖಿಕ ಸಂಸ್ಕೃತಿಯದಾಗಿದೆ. ಈ ನೆಲೆಯಲ್ಲಿ ಜನಪದ ರಾಮಾಯಣ, ಮಹಾಭಾರತಗಳನ್ನು ವಿಶೇಷ ಅಧ್ಯಯನ ನಡೆಸಬೇಕಾದ ಅಗತ್ಯವಿದೆ.

ಮಹಾಭಾರತದ ದ್ರೌಪದಿ ಮೌಖಿಕ ಲಿಖಿತ ಪರಂಪರೆ ಎರಡನ್ನು ತೀವ್ರವಾಗಿ ಸೆಳೆದ ಸಂಕೀರ್ಣ ವ್ಯಕ್ತಿತ್ವ. ದ್ರೌಪದಿ ಕುರಿತ ಅನೇಕ ಜನಪದ ಕಥನಕವನಗಳು ಕರ್ನಾಟಕದಲ್ಲಿ ದೊರೆಯುತ್ತಿದ್ದು 'ದ್ರೌಪದಿ ಪಗ್ಡಿ ಆಟೊ ಆಡಿದ್ಟ್'ಪಠ್ಯವನ್ನು ನಾನು ಮಾತೃರೂಪಿ ಸಂಸ್ಕೃತಿಯ ಉಡುಪಿ ಜಿಲ್ಲೆಯ ಮಂಜಿ ಎನ್ನುವ ಮಹಿಳೆಯಿಂದ ದಾಖಲಿಸಿಕೊಂಡಿದ್ದಾಗಿದೆ.

ಬಹುತೇಕ ಜನಪದ ಕಾವ್ಯಕಥೆಯಂತೆ 'ದ್ರೌಪದಿ ಪಗ್ಡಿ ಆಟೋ ಆಡಿದ್ಟ್' ಕೂಡಾ ಭಾರತೀಯ ಶಿಷ್ಟ ಪರಂಪರೆಯ ಚೌಕಟ್ಟನ್ನು ಮುರಿದು ಪುನರ್‌ಸೃಷ್ಟಿ ಪಡೆಯುವ ಕ್ರಿಯೆಯಾಗಿದೆ. ಜನಪದ ಮಹಾಭಾರತದ, ರಾಮಾಯಣದ ಕತೆಗಳು ದೂರದ ಹಸ್ತಿನಾಪುರದಲ್ಲಿ, ಅಯೋಧ್ಯೆಯ ಅರಮನೆಯಲ್ಲಿ ನಡೆದವುಗಳಲ್ಲ. ಅದು ಅವರಿಗೆ ತಮ್ಮದೇ ಬದುಕು ಬವಣೆಯ ಕತೆ, ತಮ್ಮದೇ ಜೀವನದ ಲೋಕಗ್ರಹಿಕೆ. ದ್ರೌಪದಿ ತಮ್ಮದೇ ಹಳ್ಳಿ ಕೇರಿಯ ಹೆಣ್ಣುಮಗಳು. ಶಿಷ್ಟ ಮನಸ್ಸಿನ ಕಾಲದ ದೂರವನ್ನು ಮೀರಿ ಅವು ಇಂದಿನ ಕತೆಗಳಾಗಿ ಪ್ರಸ್ತುತತೆಯನ್ನು ಪಡೆದುಕೊಳ್ಳುತ್ತವೆ. ಈ ನೆಲೆಯಲ್ಲಿ ಜನಪದ ಮಹಾಭಾರತದ ದ್ರೌಪದಿಯ ಅಸ್ಮಿತೆಯ ಪ್ರಶ್ನೆ ವಿಶೇಷ ನೋಟದ ಅಧ್ಯಯನವನ್ನು ಕೋರುತ್ತದೆ. ದ್ರೌಪದಿಯ ಈ ಅಸ್ಮಿತೆಯ ದಾಖಲಾತಿಗೆ ನಾವು ನಮ್ಮ ವಿಶ್ಲೇಷಣಾ ವಿಧಾನ ಹಾಗೂ ಚೌಕಟ್ಟನ್ನು ಬದಲಿಸಬೇಕಾಗುತ್ತದೆ.

ದ್ರೌಪದಿಯಲ್ಲಿ ಮೋಹಿತನಾದ 'ಕೌರುವ ದುರುಯೋಧನ' ಪಗಡೆಯಾಡಲು ಪಾಂಡವರನ್ನು ಕರೆಸುತ್ತಾನೆ. 'ನಾವು ಸೋತರೆ ನಮ್ಮ ಸಕಲ ಸಿರಿಭಾಗ್ಯೊ ನಿಮಗಾಗಬೇಕು, ನೀವು ಸೋತರೆ ನಿಮ್ಮ ಸಕಲ ಸಿರಿಭಾಗ್ಯೊ ನಮಗಾಗಬೇಕು' ಎಂದು ಒಡ್ಡಿದ ಪರತ್ತಿನ ಒಪ್ಪಂದದಂತೆ ಗೆದ್ದ ದುರ್ಯೋಧನ ದ್ರೌಪದಿಗೆ ಕರೆ ಕಳುಹಿ ಆಳನ್ನಟ್ಟುತ್ತಾನೆ.

ದುರ್ಯೋಧನನ ರಾಜಸಭೆಯಲ್ಲಿ ಅಳುತ್ತಾ ದಿಕ್ಕೆಟ್ಟು 'ಪುರುಷ ಕಾರುಣ್ಯ'ಕ್ಕಾಗಿ ದೈನ್ಯದಿಂದ ಬೇಡುವ ಶಿಷ್ಟ ದ್ರೌಪದಿಗೆ ಪೂರ್ತಿಯಾಗಿ ಬೇರೆಯಾಗಿ ಜನಪದ ದ್ರೌಪದಿ ಪ್ರಕಟಗೊಂಡಿದ್ದಾಳೆ. ದುರ್ಯೋಧನನ ಸಂಚಿಗೆ ಆಕೆ ಧೃತಿ ಕೆಡುವುದಿಲ್ಲ. ಅಥವಾ ಕುಂಟು ನೆಪವೊಡ್ಡಿ ಜಾರಿಕೊಳ್ಳುವುದಿಲ್ಲ. ಹಾಗಾಗಿ ದ್ರೌಪದಿಯನ್ನು ಆಗ್ರಹದಿಂದ ಎಳೆದು ತರುವ ಪ್ರಮೇಯವೇ ಹುಟ್ಟಿಕೊಳ್ಳುವುದಿಲ್ಲ. ದುರ್ಯೋಧನನ ಕರೆಯ ಮೇರೆಗೆ ಆಕೆಯೇ ನೇರವಾಗಿ ಅವನ ಚಾವಡಿಗೆ ಬರುತ್ತಾಳೆ.

*"ನಿನ ಹೊನು ಮಂಚಾಕೆ ಹಾಸುಗೆ ಹಾಸುಕಾರೆ*
*ಕಪುರಾದ ಈಳ್ಯವ ಮಡ್ಡು ಕೊಡುಕಾರೆ*
*ನನ ಮುದ್ದಾದ ತೋಳಲಿ ನಿನ ತಬ್ಬುಕಾರೆ*
*ಭಾವಯ್ಯ ನನ್ನಾ ಸೆಮೊಂದು ನಡ್ಸಿ ಕೊಡುಬೇಕೆ"*

ಎಂದು ಪಗಡೆಯಾಟಕ್ಕೆ ದುರ್ಯೋಧನನನ್ನು ಆಹ್ವಾನಿಸುತ್ತಾಳೆ. ಉದ್ದಕ್ಕೂ ಆತಂಕ, ಸಂಘರ್ಷಕ್ಕೆ ಒಳಗಾದ ದ್ರೌಪದಿ ಸವಾಲನ್ನು ಎದುರಿಸುವ ಈ ರೀತಿಯಲ್ಲಿಯೇ ಒಂದು ವಿಶಿಷ್ಟತೆ ಇದೆ. ಪುರುಷ ನಿರೀಕ್ಷೆಗೆ ದಂಗುಬಡಿಸುವ ಪಂಥಾಹ್ವಾನವಿತ್ತು ದ್ರೌಪದಿ ಪುರುಷನ ಮುಂದೆ ಸೋಲುಗೆಲುವಿನ ಆಟಕ್ಕೆ ಮುಂದಾಗುತ್ತಾಳೆ.

*"ಹದಿನಾರು ಮೊಳದ ಬಾಕೂರ ಸೀರೆಯ*
*ಬೋರೆಂಜ ಗಾಳಿ ಬೀಸಿ ಸ್ಯಾಲಿ ಮಗುಚಾಕೆ*
*ಸೆಳೆದಾವು ಕೌರುವನ ಸತಿ ತೊಡೆ*
*ಮತ್ತೇನಿ ಸಪುನಾದ ತೆರನಾಗಿ*
*ಪಗುಡೀಯ ಆಟವಲಾಡುತ ಸೋತನೆ*
*ಸತಿ ದ್ರೌಪದಿಗೆ ಗೆಲುವಾಗೆ ನನ್ನ*
*ಅರಮನೆಯ ಗೌಡಿ ಚಾಕುರಿಗೆ ಸನುವಾಗೆ."*

ಧೃತರಾಷ್ಟ್ರನ ಕೃಪೆಯಿಂದ ಅಸಹಾಯಕ ಸ್ಥಿತಿಯಲ್ಲಿ ತನ್ನ ಗಂಡಂದಿರನ್ನು ಮರಳಿ ಪಡೆಯುವ ದ್ರೌಪದಿಗೂ ಸ್ತ್ರೀತನದ ಆತ್ಮವಿಶ್ವಾಸದಲ್ಲಿ ಸವಾಲನ್ನು ಗೆದ್ದು ತನ್ನ ಗಂಡಂದಿರನ್ನು ಬಿಡಿಸಿ ಪಡೆದುಕೊಳ್ಳುವ ದ್ರೌಪದಿಗೂ ಬಹುದೊಡ್ಡ ಅಂತರವಿದೆ. ಜೂಜಿನ ಹಿನ್ನೆಲೆಯಲ್ಲಿಯೇ ಈ ಅಂತರದ ಸುಳಿವಿದೆ. ಶಿಷ್ಟ ಕಾವ್ಯಗಳ ಜೂಜು ವಸುಧೆಯ ವ್ಯಾಮೋಹದಿಂದ ಪ್ರೇರಿತವಾದ ಸೇಡಿನಿಂದ ಹುಟ್ಟಿದ್ದು. ಇಲ್ಲಿ ದ್ರೌಪದಿಯ ಮೋಹದಿಂದ ಪ್ರೇರಿತವಾದ ಕಾಮದಿಂದ ಹುಟ್ಟಿದ್ದು. ಇಲ್ಲಿಯ ದ್ರೌಪದಿಯ ಹೋರಾಟ ಇರುವುದು ಇವರು ಗಂಡಂದಿರನ್ನು ಮರಳಿ ಪಡೆಯುವ ಕಡೆಗಲ್ಲ, ಅದು ತನ್ನನ್ನು ಉಳಿಸಿಕೊಳ್ಳುವ ಆತ್ಯಂತಿಕ ಸ್ಥಿತಿಯ ಕಾಳಜಿಯದು. ಹೀಗಾಗಿ ಇಲ್ಲಿನ 'ತೊಡೆ ತೋರಿಸಿ' ಕೌರವನನ್ನು ಗೆಲ್ಲುವ ನಡವಳಿಕೆಯನ್ನು ಹೆಣ್ಣುತನದ ಒಂದು ವಾಸ್ತವ ಸಾಧ್ಯತೆಯಾಗಿ ಗುರುತಿಸಬೇಕೇ ಹೊರತು ಅಪವಾದವಾಗಿ, ಅಪಚಾರವಾಗಿ ಅಲ್ಲ. ದ್ರೌಪದಿಯ ನಡವಳಿಕೆ ಸಾಂಪ್ರದಾಯಿಕ ಸ್ತ್ರೀಮಾದರಿಗೆ ಅಳವಡದಿರುವುದರಿಂದಲೇ ನಮ್ಮ ಶಿಷ್ಟಕೇಂದ್ರಿತ ಮನಸ್ಸು ಅದನ್ನು ಅಸಹಜವೆಂದು, ಅವಮಾನವೆಂಬ ಅಪನಂಬಿಕೆಯಿಂದ ನೋಡಿದೆ. ಇಂತಹ ಪುರುಷನಿಷ್ಠ ನಿಲುವಿನ ನೋಟ ದುರ್ಯೋಧನನಿಗೆ, ಅವನ ಸೋಲಿಗೆ ಕೇಂದ್ರಿತವಾಗಿದೆಯೇ ಹೊರತು ದ್ರೌಪದಿಯ ಗೆಲುವಿನತ್ತ ನೋಡುವುದಿಲ್ಲ. ದ್ರೌಪದಿಯ ಗೆಲುವಿನ ಸಾಧ್ಯತೆಯನ್ನು ತೆರೆದ ಅವಳ ಚಾಲಾಕಿತನಕ್ಕಾಗಲಿ, ಪಂಥಾಹ್ವಾನವೊಡ್ಡಿ ಪಗಡೆಯಾಟಕ್ಕೆ ಆಹ್ವಾನಿಸುವ ಅವಳ ಆತ್ಮವಿಶ್ವಾಸಕ್ಕಾಗಲಿ, ಕೌರವನ ಅಹಂನ್ನು ಮುಕ್ಕಿ ಮುರಿಯುವ ಅವಳ ಎದೆಗಾರಿಕೆಗಾಗಲಿ, ಸವಾಲನ್ನು ಗೆದ್ದು ಪ್ರಕಟಿಸುವ ಸ್ತ್ರೀಶಕ್ತಿಯ ರೀತಿಗಾಗಲಿ ಅದು ಸ್ಪಂದಿಸುವುದಿಲ್ಲ. ಇಕ್ಕಟ್ಟಿನಲ್ಲಿ ದಿಟ್ಟತನವನ್ನು ಮೆರೆದ ದ್ರೌಪದಿಯನ್ನು ಬಿಟ್ಟು ವಾಸ್ತವ ಹೆಣ್ಣಾಗಿ ಮತ್ತು ಈ ವಿಜಯವನ್ನು ಅವಳ ವೈಯಕ್ತಿಕ ಸಾಧ್ಯತೆಯಾಗಿ ಕಂಡುಕೊಳ್ಳುವುದರಲ್ಲಿ ಹೆಚ್ಚಿನ ಅರ್ಥವಿದೆ.

## ಕೊರತಿ ಕಂಚಿ

ಹೆಣ್ಣೆಂದರೆ ಶೀಲ, ಶೀಲ ಎಂದರೆ ಹೆಣ್ಣು ಎನ್ನುವ ಸಾಂಸ್ಕೃತಿಕ ಪರಿಗ್ರಹಿಕೆಯಲ್ಲಿ ಪಾತಿವ್ರತ್ಯ ಎನ್ನುವುದು ಒಂದು ಅತ್ಯುತ್ಕೃಷ್ಟ ಮೌಲ್ಯವಾಗಿರುತ್ತದೆ. ಪಾತಿವ್ರತ್ಯವನ್ನು ಮೌಲ್ಯವಾಗಿ ಸ್ವೀಕರಿಸಿದ ಎಲ್ಲ ಸಂಸ್ಕೃತಿಗಳಲ್ಲೂ ಹೆಣ್ಣನ್ನು ನೋಡುವ ನೆಲೆ ಇದೇ ಆಗಿದೆ. ಪಾತಿವ್ರತ್ಯವನ್ನು ಪಾಲಿಸುವ ಹೆಣ್ಣಿನ ಪವಾಡ ಮಹಿಮೆಗಳ ವೈಭವೀಕರಣದಲ್ಲಿ ಮತ್ತು ಪಾತಿವ್ರತ್ಯವನ್ನು ಮೀರಿದ ಹೆಣ್ಣಿಗೆ ಒದಗುವ ದುರಂತದ ವೈರುಧ್ಯದಲ್ಲಿ ಶೀಲದ ಮೌಲ್ಯವನ್ನು ಕಾಪಾಡಿಕೊಂಡು ಬರಲಾಗಿದೆ. ಈ ಬಗೆಯ ಪಾತಿವ್ರತ್ಯದ ವೈಭವೀಕರಣ ಮತ್ತು ಹಾದರದ ದುರಂತಗಳನ್ನು ನಮ್ಮ ಅನೇಕ ಕಾವ್ಯ ಪುರಾಣಗಳು ಪ್ರತಿಪಾದಿಸಿವೆ. ಅಶೌಚಕ್ಕೆ ಅತೀತನಾದ ಗಂಡಿನ ಸಂದರ್ಭದಲ್ಲಿ ಕಾಣೆಯಾದ ಪದ-ಶೀಲ ಹೆಣ್ಣನ್ನು ಇಡಿಯಾಗಿ ಆವರಿಸಿಕೊಂಡಿರುವ ದ್ವಂದ್ವದಲ್ಲಿ ಪಾತಿವ್ರತ್ಯದ ಪ್ರಶ್ನೆಯನ್ನು ಚರ್ಚಿಸಬೇಕಿದೆ.

ಸ್ತ್ರೀವಾದ ತನ್ನ ಹೋರಾಟದ ಪ್ರಧಾನ ಕಾಳಜಿಯಾಗಿ ಎತ್ತಿಕೊಂಡ ಶೀಲದ ಪ್ರಶ್ನೆಯನ್ನು ತಾಯಾಳಿಕೆ ನೆಲದ ಜನಪದ ಹಾಡ್ಗತೆ 'ಕೊರತಿ ಕಂಚಿ' (ಗುಂಡ್ಮಿ) ಎತ್ತಿ ಪ್ರತಿಸೃಷ್ಟಿಯಲ್ಲಿ ಮುನ್ನಡೆಯುತ್ತದೆ. ಕೊರತಿ ಕಂಚಿ ಹೆಣ್ಣಿಗೆ ಹೇರಿದ ಪಾತಿವ್ರತ್ಯವನ್ನು ಪ್ರಶ್ನಿಸುವ ಪ್ರತಿರೋಧದ ನೆಲೆಯಲ್ಲಿಯೇ ನಿಲ್ಲುವುದಿಲ್ಲ. ಶೀಲದ ಪರಿಕಲ್ಪನೆಯನ್ನು ಗಂಡಿಗೂ ವಿಸ್ತರಿಸುವ ಮಟ್ಟದಲ್ಲಿ ಬೆಳೆಯುತ್ತದೆ. ಹಾಗಲ್ಲದಿದ್ದರೆ "ನನಗೆ ಯಾಕೆ?" ಎನ್ನುವ ಪ್ರಶ್ನೆ ''ನಿನಗೆ ಯಾಕಿಲ್ಲ?'' ಎನ್ನುವ ಇನ್ನೊಂದು ಪ್ರಶ್ನೆಯಲ್ಲೇ ಮುಕ್ತಾಯವಾಗುತ್ತದೆ: "ನಿನಗೂ ಬೇಕು" ಎನ್ನುವ ಒತ್ತಾಯದಲ್ಲಿಲ್ಲ. ಈ ಬಗೆಯ ಸಾಂಸ್ಕೃತಿಕ ಶಿಲ್ಪದ ಭಂಜನೆಯ ವಿಧಾನಕ್ಕೆ ಮಾತ್ರ ಹೊಸದನ್ನು ಸೃಷ್ಟಿಸುವ ಶಕ್ತಿ ಇರುತ್ತದೆ.

ಗುಡ್ಡದಲ್ಲಿ ಗಡ್ಡೆ ಅಗೆಯುತ್ತಿದ್ದ ಕೊರತಿ ಕಂಚಿಯಲ್ಲಿ ನಾರಾಯಣಸ್ವಾಮಿ ಮೋಹಗೊಳ್ಳುತ್ತಾನೆ. ಕಂಚಿ ಉಪಾಯದಿಂದ ಸ್ವಾಮಿಯ ಮುದ್ರೆಯುಂಗುರ ಅವನ ಮಡದಿಗೆ ಮುಟ್ಟಿಸುತ್ತಾಳೆ. ಮಡದಿ ಮಹಾಲಕ್ಷ್ಮಿ ಕೊರತಿ ಕಂಚಿಯಾಗಿ ಗುಡ್ಡದಲ್ಲಿ ಕಾದಿದ್ದ ನಾರಾಯಣಸ್ವಾಮಿಯನ್ನು ಕೂಡುತ್ತಾಳೆ. ' ಬಯ್ಯಾರಲಾಯಿತೊ, ನನ್ ಕೊರ್ಗ ಬಪ್ಪು ಹೊತ್ತಾಯಿತೊ, ನಾ ಕೊಪ್ಕಾರೊ ಹೋರೇನೀಗ' ಎಂದು ಗಂಡ ಬರುವ ಮುನ್ನ ಮನೆ ಸೇರುತ್ತಾಳೆ. ಗಂಟಿ ಹೊಡೆದುಕೊಂಡು ಬಂದ ಗಂಡ ನಾರಾಯಣಸ್ವಾಮಿಗೆ ಹೆಂಡತಿ ನೀವು ಕೊರತಿಯನ್ನು ಕೂಡಿದ್ದೀರಿ, ಮುದ್ರೆಯುಂಗುರ ತೋರಿಸಿ ಎಂದು ಸವಾಲು ಹಾಕಿ ಖೆಡ್ಡಕ್ಕೆ ಕೆಡಹುತ್ತಾಳೆ. ನಾರಾಯಣಸ್ವಾಮಿ ತಪ್ಪೊಪ್ಪಿಕೊಳ್ಳುತ್ತಾನೆ. ವಾಸ್ತವವಾಗಿ ಗಂಡ ಕೂಡಿದ್ದು ತನ್ನನ್ನು ಎಂದು ತಿಳಿದಿದ್ದೂ ಗಂಡನನ್ನು ಕ್ಷಮಿಸಿ ಹೆಂಡತಿ ಅವನನ್ನು ಒಪ್ಪಿಕೊಳ್ಳುವುದಿಲ್ಲ. ಹೆಣ್ಣು ಪಾತಿವ್ರತ್ಯವನ್ನು ಮೀರಿದಾಗ ಆಕೆ ಎದುರಿಸಬೇಕಾದ ದಿವ್ಯಗಳನ್ನು, ಪ್ರಾಯಶ್ಚಿತ್ತಗಳನ್ನು ಗಂಡಿಗೂ ವಿಧಿಸುತ್ತಾಳೆ.

"ಏಳ್ ಹಳ್ಳಿ ಕಟ್ಬೇಕು
ಏಳ್ ಹಳ್ಳಿ ಸುಡ್ಬೇಕು

................

................

ಏಳ್ ಮುಳ್ಕ ಕಂತ್ಪೇಕು"

ಎನ್ನುವ ಕಠಿಣ ಶಿಕ್ಷೆಗಳನ್ನು ವಿಧಿಸುತ್ತಾಳೆ.

ಪರಪೆಣ್ಣಿನ ಸಂಗ ಮಾಡಿದ ಗಂಡಿಗೆ ಮನೆಯ ಪ್ರವೇಶಕ್ಕೆ ಹೆಣ್ಣೊಬ್ಬಳು ಹೇರುವ ನಿಷೇಧ ಹಾಗೂ ವಿಧಿಸುವ ತೀವ್ರ ಶಿಕ್ಷೆಗಳ ಮೂಲಕ ಹಾದರದ ಸಾಂಪ್ರದಾಯಿಕ ಭಾವನೆಗಳನ್ನು ಭಂಜಿಸುತ್ತಾಳೆ. ಸಾಂಪ್ರದಾಯಿಕ ಸ್ಥಿತಿಯಲ್ಲಿ ಗಂಡಿನ ಪುರುಷತನದ ಸಂಕೇತವಾಗುವ ವಿವಾಹೇತರ ಸಂಬಂಧವನ್ನು ಹಾದರವಾಗಿ ನಿರ್ವಚಿಸುವ, ಅವನ ಲೈಂಗಿಕ ಕ್ರೌರ್ಯವನ್ನು ನಿಯಂತ್ರಿಸುವ ಹೆಣ್ಣಿನ ಈ ಕಾರ್ಯ ಪ್ರತಿಸೃಷ್ಟಿಯ ಆಶಯದ ವಿಶಿಷ್ಟ ಮಾದರಿಯಾಗಿದೆ. ಇಷ್ಟು ಪ್ರಾಯಶ್ಚಿತ್ತಕ್ಕೆ ಒಳಗಾಗಿಯೂ ಈವರೆಗೆ ತನ್ನಲ್ಲಿದ್ದ ನಂಬಿಕೆಯನ್ನು ಕಳೆದುಕೊಂಡ ಗಂಡ 'ಅರೆಜಾತಿ ಲೆಕ್ಕ' ಎನ್ನುವ ಅನುಮಾನವೊಂದು ಹಾಗೆಯೇ ಉಳಿಯುತ್ತದೆ.

ಶೀಲದ ಪಾವಿತ್ರ್ಯವನ್ನು ಗಂಡಿಗೂ ವಿಸ್ತರಿಸುವ ಹಾಗೂ ಅದನ್ನು ಮೀರುವ ಗಂಡಿಗೆ ಪ್ರಾಯಶ್ಚಿತ್ತದ ದಿವ್ಯಗಳನ್ನು ವಿಧಿಸುವ ಪ್ರಕ್ರಿಯೆ ಬಹುಪತ್ನಿತ್ವದ ಮೌಲ್ಯವ್ಯವಸ್ಥೆಯಲ್ಲಿ ಬಹಳ ಅಪರೂಪದ್ದು. ಏಕಪತಿತ್ವದ ಕಟ್ಟಿನ ಆಚೆಗೆ ಮರು ಮದುವೆಯ ಪರ್ಯಾಯದಲ್ಲಿ ಈ ಪ್ರಕರಣವನ್ನು ವಿವರವಾಗಿ ಅರಸಬೇಕು. ತಾಯ್ತಾಳಿಕೆ ಸಾಂಸ್ಕೃತಿಕ ಪರಿವಲಯದ ಮನಸ್ಸೊಂದು ಮಾತ್ರ ಇಂತಹ ನೆಯ್ಗೆಯನ್ನು ನೇಯಬಲ್ಲದು.

**ಪರತಿ ಮಂಗಣೆ**

ಹೆಣ್ಣು ಲಿಂಗದ ನೆಲೆಯಲ್ಲಿ ಶೋಷಿತಳು ಎನ್ನುವ ಸಾರ್ವತ್ರಿಕ ಸತ್ಯದಲ್ಲಿ ಪ್ರಧಾನ ಅಂಶವಾಗುವುದು ಹೆಣ್ಣಿನ ಲೈಂಗಿಕತೆಯ ಪ್ರಶ್ನೆ. ಈ ಲೈಂಗಿಕತೆಯ ಚರ್ಚೆಯಲ್ಲಿ ನಮ್ಮ ವರ್ಣಶ್ರೇಣಿ ವ್ಯವಸ್ಥೆಯಲ್ಲಿ ನಾವು ಜಾತಿ ಸಂದರ್ಭವನ್ನು ಮರೆತು ಮಾತಾಡುವಂತಿಲ್ಲ. ಜಾತಿ, ಲಿಂಗ ರಾಜಕಾರಣದಲ್ಲಿ ಮೇಲುಜಾತಿಯ ಗಂಡಸರ ಲೈಂಗಿಕ ಕಾಮನೆಗೆ ಸುಲಭದಲ್ಲಿ ದಕ್ಕುವವರು ಕೆಳಜಾತಿಯ ಹೆಣ್ಣುಗಳು. ತುಳುವಿನ 'ಪರತಿ ಮಂಗಣೆ' ಹಾಡ್ಗತೆ ಇದಕ್ಕೊಂದು ಸಾಕ್ಷಿಯಾಗುವಲ್ಲಿಯೇ ಈ ಸತ್ಯಕ್ಕೆ ಇನ್ನೊಂದು ಆಯಾಮವನ್ನು ತೆರೆಯುತ್ತದೆ. ಪರತಿ ಮಂಗಣೆ ನಮಗೆ ಮುಖ್ಯವಾಗುವುದು ಕೆಳಜಾತಿಯ ಹೆಣ್ಣೊಬ್ಬಳು ಮೇಲು ಜಾತಿಯ ಗಂಡಿನ ಕಾಮನೆಗೆ ಒಳಗಾಗುವ ದುರಂತದ ಕಥೆಗಲ್ಲ : ಜಾತಿ, ಲಿಂಗ ಎರಡು ನೆಲೆಗಳಲ್ಲೂ ತನ್ನಿಂದ ಉಚ್ಚನೆನಿಸಿದ ಪ್ರತಿಷ್ಠಿತ ಬಲ್ಲಾಳನನ್ನು ಭಂಗಿಸಿ ಗೆಲ್ಲುವ ಪ್ರತಿಭಟನೆಯ ರೀತಿಗೆ.

ಭೂತಕಟ್ಟುವ ಪರಿಶಿಷ್ಟ ವರ್ಗದ ಪರವನ ಪರತಿ ಮಂಗಣೆಯನ್ನು ಊರಿನ ಬಲ್ಲಾಳ ಮೋಹಿಸುತ್ತಾನೆ. ಪರತಿ ಮಂಗಣೆಯನ್ನು ಪಡೆಯುವ ಹುನ್ನಾರವಾಗಿ ಬಲ್ಲಾಳ ಕೋಲ

ಕಟ್ಟಲು ಪರವನನ್ನು ಬರಮಾಡಿಕೊಂಡು ಈಡಿಟ್ಟು ಕೊಲ್ಲುತ್ತಾನೆ. ಬಹುತೇಕ ಜನಪದ ಸಾಹಿತ್ಯ ಲಿಂಗ, ಜಾತಿ, ವರ್ಗ ವ್ಯವಸ್ಥೆಯ ಶಕ್ತಿ ರಾಜಕಾರಣದ ಇದಿರು ಸಂಘರ್ಷಕ್ಕಿಳಿದು ಹೋರಾಡಿ ಸೋತ ಸಮುದಾಯದ ಕತೆಯನ್ನು ವಿವರಿಸುತ್ತದೆ ಮತ್ತು ಹಾಗೆ ವಿವರಿಸುವಲ್ಲಿ ವಿಶೇಷ ಗೌರವ, ಪೂಜ್ಯತೆಯನ್ನು ತೋರ್ಪಡಿಸುತ್ತದೆ. ಆದರೆ 'ಪರತಿ ಮಂಗಣೆ' ಹಾಡ್ಗತೆ ಇದಕ್ಕೆ ವಿರುದ್ಧವಾಗಿ ಜಾತಿ, ಲಿಂಗದ ನೆಲೆಯಲ್ಲಿ ಅಶೌಚವೆಂದು ಗ್ರಹೀತಳಾದ ಪರತಿ ಮಂಗಣೆ ವ್ಯವಸ್ಥೆಯ ವಿರುದ್ಧ ಹೋರಾಡಿ ಗೆಲುವನ್ನು ಸಾಧಿಸುವ ತಾತ್ವಿಕತೆಯನ್ನು ರೂಪಿಸುತ್ತದೆ. ಈ ತೀರ್ಮಾನಕ್ಕೆ ಪರತಿ ಮಂಗಣೆ ಮತ್ತು ಬಲ್ಲಾಳನ ಸಾವನ್ನು ಅರ್ಥೈಸಿಕೊಳ್ಳುವುದರ ಮೂಲಕ ಬರಬಹುದು. ಈ ಇಬ್ಬರ ಸಾವಿನ ಅರ್ಥದಲ್ಲಿ ಸಾಕಷ್ಟು ವ್ಯತ್ಯಾಸದ ಅಂತರವಿದೆ. ಪರತಿ ಮಂಗಣೆಯ ಸಾವನ್ನು ಪತಿ ಪ್ರೇಮವಾಗಿ ನಿರ್ವಚಿಸಿಕೊಳ್ಳುವುದಕ್ಕಿಂತ ಬಲ್ಲಾಳನ ಶಕ್ತಿ ರಾಜಕಾರಣದ ನೆಲೆಗಳನ್ನು ಪುಡಿಗೈಯುವ ಪ್ರಕ್ರಿಯೆಯಾಗಿ ನಿರೂಪಿಸಿಕೊಳ್ಳುವಲ್ಲಿ ಹೆಚ್ಚಿನ ಜವಾಬ್ದಾರಿ ಇದೆ.

ಪರತಿ ಮಂಗಣೆಯ ಸಾವು ದುರ್ಬಲರು ತಮ್ಮ ಇಕ್ಕಟ್ಟಿಗೆ ತೋರಿದ ಪ್ರತಿಭಟನೆ ಅಥವಾ ಹೋರಾಟವಾಗಿಯೇ ಪರಿಭಾವಿಸಬೇಕು. ಪ್ರತಿಭಟನಾಮೂಲವಾದ ಸಾವನ್ನು ಎಲ್ಲಿಯೂ ಸೋಲಾಗಿ ಸರಳೀಕರಿಸಬಾರದು. ಪರತಿ ಮಂಗಣೆ ತನ್ನ ಗಂಡನ ಚಿತೆಗೆ ಹಾರಿ ಸತ್ತಿದ್ದರೆ ಇಂತಹ ಪ್ರತಿಭಟನೆಯು ನಾವು ಇವತ್ತು ಆಶಿಸುವ ಸ್ತ್ರೀತ್ವದ ಹೋರಾಟ ಮಾದರಿಯೇ ಎಂಬ ಪ್ರಶ್ನೆ ಏಳುತ್ತಿತ್ತು. ಹಾಗಲ್ಲದೆ ಪುರುಷನೊಬ್ಬನ ಎಲ್ಲ ಬಗೆಯ ಅಸ್ತಿತ್ವವನ್ನು ನಿರಚಿಸುವ ಶಕ್ತಿಯಾಗುವಲ್ಲಿಯೇ 'ಪರತಿ ಮಂಗಣೆ' ವಿಶಿಷ್ಟವಾಗುವುದು.

ಬಲ್ಲಾಳ ಪರತಿ ಮಂಗಣೆ ಹಾರಿದ ಚಿತೆಗೆ ಬೀಳುವುದು ಆದರ್ಶ ಪ್ರೇಮದ ಸಾಕ್ಷಾತ್ಕಾರವಲ್ಲ. ಬಲ್ಲಾಳನಿಗಿದ್ದುದು ಮಂಗಣೆಯ ಮೇಲಿನ ಲೈಂಗಿಕ ಕಾಮನೆಯ ಸೆಳೆತವೇ ಹೊರತು ಪ್ರೇಮವಲ್ಲ. ಇದನ್ನು ಪರತಿ ಮಂಗಣೆ ತನ್ನ ಪರವನ ಚಿತೆಗೆ ಹಾಕಲು ಹೇಳಿದ ವಸ್ತು ಒಡವೆಗಳನ್ನು ಬಲ್ಲಾಳ ಒದಗಿಸುವ ಅವಸರದಲ್ಲಿ ಹಾಗೂ ಪ್ರತಿ ವಸ್ತುವನ್ನು ಚಿತೆಗೆ ಹಾಕಿದಾಗಲೂ "ಇನ್ನೇನು ನೋಡುತ್ತೀಯಾ ಪರತಿ ಮಂಗಣೆ, ಹೆಣವನ್ನು ಚಿತೆಯಲ್ಲಿ ಕೊಂಡುಹೋಗಿ ಇಡೋಣ" ಎನ್ನುವ ಆತುರದಲ್ಲಿ ಅವನ ಕಾಮದ ಒತ್ತಾಯವನ್ನು ನೋಡಬಹುದು. ಪರತಿ ಮಂಗಣೆಗೆ ತನ್ನ ಪರವನ ಸಾವಿನ ಹಿನ್ನೆಲೆಯಲ್ಲಿನ ಬಲ್ಲಾಳನ ಕ್ರೌರ್ಯದ ಅರಿವಿದೆ. ಹೀಗಾಗಿ ಪರವನ ಸಾವಿಗೆ ಅವಳ ಪ್ರತಿಕ್ರಿಯೆಯಲ್ಲಿ ಗಂಡನನ್ನು ಕಳೆದುಕೊಂಡ ದುಃಖಕ್ಕಿಂತ ಬಲ್ಲಾಳನ ಅನ್ಯಾಯ ಕ್ರೌರ್ಯಕ್ಕೆ ತಕ್ಕ ಪ್ರತಿ ತಂತ್ರವನ್ನು ಹೂಡಿ ಅವನನ್ನು ದುರಂತಕ್ಕೆ ತಳ್ಳುವ ಇಚ್ಛೆ ತೀವ್ರವಾಗಿದೆ.

ಪರವ ಸತ್ತು ಹೆಣವಾದಾಗ "ಸಂಕೋಲೆ ಹಿಡಿದು ನನ್ನ ಚಾವಡಿಗೆ ಬಾ ಮಂಗಣೆ" ಎಂದು ಬಲ್ಲಾಳ ಉತ್ಕಟತೆಯಲ್ಲಿ ಪರತಿ ಮಂಗಣೆಯನ್ನು ಆಹ್ವಾನಿಸುತ್ತಾನೆ. ಅದಕ್ಕೆ "ಚಿತೆಯ ಹೊಗೆ ಹೂ ಅರಳಿ ಹೊತ್ತಬೇಕಲ್ಲ ಬಲ್ಲಾಳರೆ" ಎನ್ನುವ ಮಂಗಣೆ ಸಂಕೇತ ಭಾಷೆಯಲ್ಲಿ ಬಲ್ಲಾಳನ ನಾಶವನ್ನು ಸೂಚಿಸುತ್ತಾಳೆ. ಹೀಗೆ ಚಿತೆಯ ಹೊಗೆ ಹೂ ಅರಳಿ

ಹೊತ್ತಬೇಕಾದರೆ ನಿಮ್ಮ ಅರಮನೆಯ ಒಂದೊಂದೇ ವಸ್ತುವನ್ನು ಚಿತೆಗೆ ತಂದು ಹಾಕಬೇಕು ಎನ್ನುತ್ತಾಳೆ. ಬಲ್ಲಾಳನ ಸಂಪತ್ತು ಹಾಗೆ ಪರವನ ಕಾಷ್ಟದಲ್ಲಿ ಸುಟ್ಟು ಉರಿದಾಗ ಲೋಕದಲ್ಲಿ ಬಲ್ಲಾಳನ ಅಸ್ತಿತ್ವವು ಅಷ್ಟಷ್ಟು ಕರಗಿ ಹೋಗುತ್ತದೆ. ಸಂಪತ್ತು, ಜಾತಿ, ಲಿಂಗದ ಶಕ್ತಿ ಕೇಂದ್ರಗಳ ಭಂಜನೆಯಾದಾಗಲೂ ಬಲ್ಲಾಳನ ಭೌತಿಕ ಅಸ್ತಿತ್ವ ವೊಂದಿರುತ್ತದೆಯಷ್ಟೆ! ಪರತಿ ಮಂಗಣೆ ತಾನು ಶೃಂಗಾರವಾಗಬೇಕು ಎಂಬ ನೆಪದಲ್ಲಿ ಬಲ್ಲಾಳನ ಹೆಂಡತಿಯ ಮೂಗುತಿ, ಕರಿಮಣಿ, ಓಲೆ, ಕೈಬಳೆ, ಕಾಲುಂಗುರಗಳನ್ನು ತರಿಸುತ್ತಾಳೆ. ಬಲ್ಲಾಳನ ಹೆಂಡತಿಯನ್ನು 'ವಿಧವೆ'ಯಾಗಿಸುವ ಈ ಕ್ರಿಯೆ ಸಾಂಕೇತಿಕವಾಗಿ ಬಲ್ಲಾಳನ ಭೌತಿಕ ಅಸ್ತಿತ್ವವನ್ನು ನಾಶ ಮಾಡುತ್ತದೆ. ಹೀಗೆ ವ್ಯಕ್ತಿಯೊಬ್ಬ ಬದುಕಿದ್ದಾಗಲೇ ಅನುಭವಿಸುವ ಸಾವು ಪಾವಿತ್ರ್ಯ ನಾಶವಾಗಿ ಅತ್ಯಂತ ಅವಮಾನ ಮತ್ತು ನೋವಿನ ಸಂಗತಿಯಾಗುವಲ್ಲಿ ಪರತಿ ಮಂಗಣೆಯ ಗೆಲುವನ್ನು ಅಳೆಯಬೇಕು.

ಯಾವುದೇ ಅಭಿವ್ಯಕ್ತಿ ಪ್ರಕಾರವೊಂದರ ವಸ್ತು ರೂಪ ರಚನೆಗಳ ಹಿಂದೆ ಆಯಾ ಸಾಂಸ್ಕೃತಿಕ ಪರಿಗ್ರಹಿಕೆ ದಟ್ಟವಾಗಿರುತ್ತದೆ. ಹೀಗಾಗಿ ಸಂಸ್ಕೃತಿಯೊಂದರ ಲಿಂಗ ವಿವಕ್ಷೆ ಏನು ಎನ್ನುವುದನ್ನು ಕಂಡುಕೊಳ್ಳುವಲ್ಲಿ ಅಲ್ಲಿನ ಅಭಿವ್ಯಕ್ತಿ ಮಾಧ್ಯಮಗಳ ಅಧ್ಯಯನ ಬಹಳಷ್ಟು ಅಗತ್ಯವನ್ನು ಪೂರೈಸುತ್ತವೆ. ತಾಯಾಳಿಕೆ ನೆಲದ ಈ ಎಲ್ಲ ಪಾಡ್ಡನೆಗಳು ಪಿತೃರೂಪಿ ಸಂಸ್ಕೃತಿಯ ಹೆಣ್ಣು ತನದ ಗ್ರಹೀತದ ಭಿನ್ನತೆಯಲ್ಲಿ ಸ್ತ್ರೀಶಕ್ತಿಯನ್ನು ಕಟ್ಟಿಕೊಡುತ್ತದೆ ಎನ್ನುವುದು ಬಂಧುತ್ವವು ಪಠ್ಯವೊಂದನ್ನು ಪ್ರಭಾವಿಸುವ ಮತ್ತು ನಿಯಂತ್ರಿಸುವ ಒಂದು ಪ್ರಧಾನ ಅಂಶವೆಂಬ ನಿರ್ಣಯವನ್ನು ಮಂಡಿಸುವುದಾಗಿದೆ. ಈ ಒಳ ಸಂಬಂಧದ ಸಿಕ್ಕನ್ನು ಬಿಡಿಸಿಕೊಂಡರೆ ಸಂಸ್ಕೃತಿಯೊಂದರ ಹೆಣ್ಣುತನದ ಪರಿಗ್ರಹಿಕೆಯ ಮೂಲನೆಲೆ ಅರಿವಾಗುತ್ತದೆ.



# ಭಾರತದಲ್ಲಿ ಮಹಿಳೆಯರು : ಐತಿಹಾಸಿಕ ಮತ್ತು ಸಾಂಸ್ಕೃತಿಕ ದೃಷ್ಟಿಕೋನ

ಡಾ. ಆರ್. ಇಂದಿರಾ

ಭಾರತದ ಮಹಿಳೆಯರ ಸ್ಥಾನವನ್ನು ಕುರಿತು ಅಧ್ಯಯನ, ಚರ್ಚೆ ಅಥವಾ ವಿಶ್ಲೇಷಣೆಗಳನ್ನು ನಡೆಸುವಾಗ ನಾವು ಪ್ರಮುಖವಾದ ಒಂದು ಅಂಶವನ್ನು ಗಮನದಲ್ಲಿಡಬೇಕಾಗುತ್ತದೆ. ಮಹಿಳೆಯರನ್ನು ಕುರಿತ ಪ್ರಸ್ತಾಪಗಳು ಐತಿಹಾಸಿಕ ದಾಖಲೆಗಳಲ್ಲಿ ವ್ಯವಸ್ಥಿತವಾದ ರೂಪದಲ್ಲಿ ಕಂಡುಬರುತ್ತಿರುವುದು ಇತ್ತೀಚಿನ ದಶಕಗಳಲ್ಲಾದ್ದರಿಂದ ಭಾರತೀಯ ಮಹಿಳೆಯರ ಸ್ಥಾನವನ್ನು ಪ್ರಾಚೀನ ಕಾಲದಿಂದ ಹಿಡಿದು ಆಧುನಿಕ ಕಾಲದವರೆಗೂ ಒಂದು ಐತಿಹಾಸಿಕ ದೃಷ್ಟಿಕೋನದಿಂದ ಚಿತ್ರಿಸುವ ಕಾರ್ಯ ಸುಲಭಸಾಧ್ಯವಲ್ಲ, ಭಾರತದಂಥ ಬಹುಧರ್ಮೀಯ, ಬಹುಜಾತಿಯ ಹಾಗೂ ಬಹುಸಂಸ್ಕೃತಿಯ ಸಮಾಜದಲ್ಲಿ ಮಹಿಳೆಯರನ್ನು ಸಮರೂಪವಾದ ಒಂದು ವರ್ಗವನ್ನಾಗಿ ಚಿತ್ರಿಸುವುದು ಕೂಡ ಸರಿಯಿಲ್ಲ. ಕಾಲದಿಂದ ಕಾಲಕ್ಕೆ, ವರ್ಗದಿಂದ ವರ್ಗಕ್ಕೆ, ಧರ್ಮದಿಂದ ಧರ್ಮಕ್ಕೆ ಭಿನ್ನವಾಗಿರುವಂಥ ಮಹಿಳೆಯರ ಪರಿಸ್ಥಿತಿಯನ್ನು ಗಮನದಲ್ಲಿಟ್ಟುಕೊಂಡೇ ಭಾರತೀಯ ಮಹಿಳೆಯರ ಸ್ಥಾನದಲ್ಲಿ ಉಂಟಾಗಿರುವ/ ಉಂಟಾಗುತ್ತಿರುವ ಬದಲಾವಣೆಗಳನ್ನು ವಿಶ್ಲೇಷಿಸಬೇಕಾಗುತ್ತದೆ. ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಭಾರತೀಯ ಮಹಿಳೆಯರ ಬದುಕಿನಲ್ಲಿ ತಲೆದೋರಿರುವ ಬದಲಾವಣೆಗಳ ಒಂದು ಐತಿಹಾಸಿಕ ನೋಟವನ್ನು ಇಲ್ಲಿ ನೀಡಲು ಪ್ರಯತ್ನಿಸಲಾಗಿದೆ.

## ಪ್ರಾಚೀನ ಭಾರತದಲ್ಲಿ ಮಹಿಳೆಯರ ಸ್ಥಾನ

ಪ್ರಾಚೀನ ಭಾರತದ ಬಗ್ಗೆ ನಮಗೆ ದೊರೆಯುವ ವಿಷಯ ಮೂಲಗಳಲ್ಲಿ ಋಗ್ವೇದವು ಅತ್ಯಂತ ಹಳೆಯದಾದುದು ಎನ್ನಲಾಗಿದೆ. ವೇದಗಳ ಕಾಲದಲ್ಲಿ ಮಹಿಳೆಯರ ಸ್ಥಾನವನ್ನು ವಿಶ್ಲೇಷಿಸುವಾಗಲೂ, ಒಂದು ವೇದಕಾಲದಿಂದ ಮತ್ತೊಂದು ವೇದಕಾಲಕ್ಕೆ ಮಹಿಳೆಯರ ಸ್ಥಾನದಲ್ಲಿ ತೋರಿಬಂದಂಥ ಬದಲಾವಣೆಗಳನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ವೇದಗಳ ಕಾಲವನ್ನು ಕ್ರಿ. ಪೂ. ೨೫೦೦- ೧೫೦೦ ರವರೆಗೂ ಗುರುತಿಸಬಹುದು. ಋಗ್ವೇದದ ಕಾಲದಲ್ಲಿ ಸಂಪೂರ್ಣವಾಗಿ ಲಿಂಗವ್ಯವಸ್ಥೆಯ ಸಮಾನತೆ ಎನ್ನುವುದು ಇಲ್ಲವಾಗಿದ್ದರೂ, ಲಿಂಗ ತಾರತಮ್ಯವಂತೂ ಎದ್ದು ಕಾಣುತ್ತಿರಲಿಲ್ಲ. ಧಾರ್ಮಿಕ ಮತ್ತು

ಸಾಮಾಜಿಕ ಚಟುವಟಿಕೆಗಳಲ್ಲಿ ಮುಕ್ತವಾಗಿ ಭಾಗಿಗಳಾಗಿರುತ್ತಿದ್ದ ಸ್ತ್ರೀಯರಿಗೆ ತಮ್ಮ ವೈವಾಹಿಕ ಜೀವನದ ಸಂಗಾತಿಯನ್ನು ಆರಿಸುವ ಸ್ವಾತಂತ್ರ್ಯವಿತ್ತು. ಬಾಲ್ಯವಿವಾಹ ಪದ್ಧತಿಯು ಈ ಕಾಲದಲ್ಲಿ ಇರಲಿಲ್ಲವೆಂಬುದಷ್ಟೇ ಅಲ್ಲ, ವಿಧವಾ ವಿವಾಹಕ್ಕೆ ಕೂಡ ಮನ್ನಣೆಯಿತ್ತು ಎಂಬುದು ಗಮನಾರ್ಹ. ಸಾಮಾನ್ಯವಾಗಿ ೧೬ ಅಥವಾ ೧೭ನೇ ವಯಸ್ಸಿನಲ್ಲಿ ಕನ್ಯೆಯರು ವಿವಾಹವಾಗುತ್ತಿದ್ದದರಿಂದ ಅವರಿಗೆ ಶಿಕ್ಷಣವನ್ನು ಪಡೆಯಲೂ ಅವಕಾಶವಿತ್ತು. ಈ ಕಾಲದಲ್ಲಿ ಅನೇಕ ಮಹಿಳೆಯರು ಅಸಮಾನ ಪಾಂಡಿತ್ಯವನ್ನು ಗಳಿಸಿ ಪುರುಷರೊಡನೆ ಸಮಸಮವಾಗಿ ಸಾಹಿತ್ಯಿಕ-ಶೈಕ್ಷಣಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುತ್ತಿದ್ದಂಥ ಉಲ್ಲೇಖಗಳಿವೆ. ಕುಟುಂಬದ ಆಸ್ತಿಯ ಹಂಚಿಕೆಯ ಬಗ್ಗೆ ಯಾವುದೇ ಸ್ಪಷ್ಟ ಮಾಹಿತಿ ದೊರೆಯದಿದ್ದರೂ ಋಗ್ವೇದದ ಹಲವು ಶ್ಲೋಕಗಳು ಸ್ತ್ರೀಯರಿಗೂ ಆಸ್ತಿಯಲ್ಲಿ ಪಾಲು ಇತ್ತು ಎಂಬುದನ್ನು ಸೂಚಿಸುತ್ತದೆ. ಋಗ್ವೇದದ ಕಾಲದಲ್ಲಿ ಸ್ತ್ರೀ ಮತ್ತು ಪುರುಷರಿಗೆ ಹೆಚ್ಚು ಕಡಿಮೆ ಸಮಾನ ಸ್ಥಾನವಿತ್ತು ಎಂಬುದು ಲಭ್ಯ ಮೂಲಗಳಿಂದ ತಿಳಿದು ಬರುತ್ತದೆ.

ಕ್ರಿ. ಪೂ ೧೦೦೦ ದ ವೇಳೆಗೆ ಆರ್ಯರು ಭಾರತದಲ್ಲಿ ತಮ್ಮ ಭೂ ಸ್ವಾಮ್ಯವನ್ನು ವಿಸ್ತರಿಸುತ್ತಾ ಹೋದ ಹಾಗೆಲ್ಲಾ ಇಲ್ಲಿನ ಮೂಲ ನಿವಾಸಿಗಳಾದ ದ್ರಾವಿಡರಿಗೂ ಅವರಿಗೂ ಘರ್ಷಣೆಗಳು ಹೆಚ್ಚುತ್ತಾ ಹೋದವಷ್ಟೇ ಅಲ್ಲ, ಆರ್ಯ ಸಂಸ್ಕೃತಿಯ ಪ್ರಾಬಲ್ಯವೂ ಬೆಳೆಯುತ್ತಾ ಹೋಯಿತು. ಭಾರತೀಯ ಸಮಾಜದ ವಿಭಜನೆ ಹಾಗೂ ಮಾತೃ ಪ್ರದಾನವಾದಂಥ ಮೌಲ್ಯಗಳ ಹಾಗೂ ಆಚರಣೆಗಳ ನಶಿಸುವಿಕೆ ಈ ಯುಗದಲ್ಲಿ ಪ್ರಾರಂಭವಾಗಿ ಆಗ ಆರಂಭವಾದ ಲಿಂಗ ವ್ಯವಸ್ಥೆಯ ಅಸಮಾನತೆ ಇಂದಿಗೂ ಹೊಸ ಹೊಸ ರೂಪಗಳನ್ನು ತಾಳಿ ಮುಂದುವರೆದುಕೊಂಡು ಬಂದಿದೆ ಎಂಬುದು ಗಮನಾರ್ಹವಾದ ವಿಷಯ. ಒಂದೆಡೆ ಕುಟುಂಬದ ಒಳಗೆ ಮತ್ತೊಂದೆಡೆ ಕುಟುಂಬದ ಹೊರಗೆ ಮಹಿಳೆಯರ ಸ್ಥಾನ ಕ್ಷೀಣಿಸುತ್ತಾ ಹೋಯಿತು. ನೇಗಿಲು ಪ್ರಧಾನ ಕೃಷಿ ವ್ಯವಸ್ಥೆಯಿಂದ ಸ್ತ್ರೀಯರನ್ನು ದೂರವಿಟ್ಟದ್ದು, ಪುರುಷ ದಬ್ಬಾಳಿಕೆ ಹಾಗೂ ಶೋಷಣೆ ಹೆಚ್ಚಾಗಿ ಮಹಿಳೆಯನ್ನು ಗೃಹಬಂಧಿಯನ್ನಾಗಿಸಿದ್ದು, ಕೇವಲ ಮಕ್ಕಳನ್ನು ಹೆರುವ ಯಂತ್ರವನ್ನಾಗಿ ಪರಿವರ್ತಿಸಿದ್ದು, ಜಾತಿ ಶ್ರೇಣಿಯಲ್ಲಿ ಕೆಳಸ್ತರಗಳಲ್ಲಿ ಇರಿಸಲ್ಪಟ್ಟಿದ್ದ ಜಾತಿಗಳ ಮಹಿಳೆಯರೊಡನೆ ವಿವಾಹೇತರ ಸಂಬಂಧವನ್ನು ಬೆಳೆಸುವುದು, ಜ್ಞಾನ ಎನ್ನುವ ಸಂಪನ್ಮೂಲವನ್ನು ಮೇಲ್ಜಾತಿಗಳ ಮತ್ತು ಪುರುಷರ ಸೊತ್ತಾಗಿಸಿದ್ದು- ಈ ಎಲ್ಲ ಪ್ರವೃತ್ತಿಗಳೂ ಆರ್ಯ ಸಂಸ್ಕೃತಿಯು ಸ್ತ್ರೀ ವಿರೋಧಿ ಮೌಲ್ಯಗಳನ್ನು ಸಮಾಜದಲ್ಲಿ ಸ್ಥಾಪಿಸಿ, ದ್ರಾವಿಡ ಸಂಸ್ಕೃತಿಯಲ್ಲಿ ಕಂಡುಬರುತ್ತಿದ್ದ ಸ್ತ್ರೀ-ಪುರುಷ ಸಮಾನತೆಯನ್ನು ಗೌರವಿಸುತ್ತಿದ್ದ ಮೌಲ್ಯಗಳ ನಾಶಕ್ಕೆ ಕಾರಣವಾಯಿತು. ಇದೇ ಸಮಯದಲ್ಲಿ ವೇದಧರ್ಮವು ಬೆಳೆದು ಪ್ರಾಬಲ್ಯವನ್ನು ಪಡೆದು ಇಡೀ ಭರತ ಖಂಡದಲ್ಲಿ ಈ ಧರ್ಮದ ಪ್ರಭಾವ ಹರಡಲಾರಂಭಿಸಿತು. ಈ ಕಾಲದಲ್ಲಿ ಸ್ತ್ರೀಯರನ್ನು ಕುರಿತು ಇಲ್ಲಿಯವರೆಗೂ ವ್ಯಕ್ತವಾಗಿರದಿದ್ದ ಶುದ್ಧ ಅಶುದ್ಧ ಎಂಬ ಭಾವನೆಗಳು ಮೂಡಿ ಬಂದು ಸ್ತ್ರೀಯರು ತಮ್ಮ

ಜೀವನದ ಹಲವು ಹಂತಗಳಲ್ಲಿ ಅಶುದ್ಧ ಎಂದು ಗುರುತಿಸಲಾಯಿತು. ಈ ಕಾರಣದಿಂದಾಗಿ ಧಾರ್ಮಿಕ ಕ್ಷೇತ್ರದಲ್ಲಿ ಸ್ತ್ರೀಯರ ಭಾಗವಹಿಸುವಿಕೆ ಕ್ರಮೇಣ ಕಡಿಮೆಯಾಗತೊಡಗಿತು. ಈ ಕಾಲದಲ್ಲಿ ಹಲವು ಸಾಮಾಜಿಕ ಮೌಲ್ಯಗಳು ಸ್ತ್ರೀಯರಿಗೆ ವಿರುದ್ಧವಾದ ಧೋರಣೆಗಳನ್ನು ಮೈಗೂಡಿಸಿಕೊಂಡಿದ್ದನ್ನು ನಾವು ಕಾಣಬಹುದು. ವಂಶಾವಳಿಯನ್ನು ಗಂಡು ಸಂತಾನದ ಮೂಲಕವೇ ಗುರುತಿಸುವ ಕ್ರಮ ಹೆಚ್ಚು ಪ್ರಚಲಿತವಾಯಿತು. ಹೆಣ್ಣು ಮಕ್ಕಳನ್ನು ಪ್ರಮುಖ ಅರ್ಹತೆಗಳಿಂದ ದೂರವಿಡುವ ಧಾರ್ಮಿಕ ನಂಬಿಕೆಗಳು ಪ್ರಬಲವಾಗುತ್ತಿದ್ದವು. ಸ್ತ್ರೀಯರನ್ನು ಹಲವು ಮೂಲಭೂತ ಹಕ್ಕುಗಳಿಂದ ವಂಚಿಸುವ ಧಾರ್ಮಿಕ ನಂಬಿಕೆಗಳು ಚಲಾವಣೆಗೆ ಬರತೊಡಗಿದಂತೆ, ಹೆಚ್ಚು ಹೆಚ್ಚು ಪ್ರಚಲಿತ ವಾಗತೊಡಗಿದ ವ್ಯಕ್ತಿಯ ಪುನರ್ಜನ್ಮದ ಪರಿಕಲ್ಪನೆಯು ಸ್ತ್ರೀಯ ಸ್ಥಾನದ ಮೇಲೆ ವಿಶೇಷವಾದ ನಕಾರಾತ್ಮಕ ಪರಿಣಾಮವನ್ನು ಬೀರಲು ಪ್ರಮುಖ ಕಾರಣವಾಯಿತು. ಇದರ ಫಲವಾಗಿ ವ್ಯಕ್ತವಾದ ಹಲವು ಧಾರ್ಮಿಕ ವಿಧಿಗಳ ಮೂಲಕವೇ ಸತ್ತ ವ್ಯಕ್ತಿಯ ಆತ್ಮಕ್ಕೆ ಶಾಂತಿ ಸಿಗುತ್ತದೆ ಎಂಬ ನಂಬಿಕೆ ಸ್ತ್ರೀಯರನ್ನು ಧಾರ್ಮಿಕ ಕ್ರಿಯೆಯಲ್ಲಿ ಪಾಲ್ಗೊಳ್ಳದಂತೆ ತಡೆಯಿತು. ಪುರುಷ ಪ್ರಧಾನ ಸಮಾಜವಾಗಿದ್ದರಿಂದ ಸಹಜವಾಗಿಯೇ ಈ ಧಾರ್ಮಿಕ ಕ್ರಿಯೆಗಳನ್ನು ನಡೆಸುವ ಅರ್ಹತೆಯನ್ನು ಗಂಡು ಮಕ್ಕಳಿಗೆ ನೀಡಲಾಯಿತು. ಈ ಪದ್ಧತಿ ಆಸ್ತಿಯ ಹಂಚುವಿಕೆಯ ಮೇಲೆಯೂ ಬಹಳ ಪ್ರಭಾವ ಬೀರಿದ್ದು ಇಂದಿಗೂ ಬಹುತೇಕ ಕುಟುಂಬಗಳಲ್ಲಿ ಗಂಡು ಸಂತಾನದಿಂದಲೇ ಮುಕ್ತಿ ಸಾಧ್ಯ, ಗಂಡು ಮಕ್ಕಳೇ ಪಿತ್ರಾರ್ಜಿತ ಆಸ್ತಿಯನ್ನು ಪಡೆಯಲು ಅರ್ಹರು ಎಂಬ ನಂಬಿಕೆ ಹಾಗೂ ಆಚರಣೆಗಳು ಜಾರಿಯಲ್ಲಿವೆ. ಈ ವ್ಯವಸ್ಥೆಯಲ್ಲಿ ಪುರುಷ ಶ್ರೇಷ್ಠತೆಯನ್ನೂ, ಸ್ತ್ರೀಯ ದೌರ್ಬಲ್ಯಗಳನ್ನು ಎತ್ತಿ ಹಿಡಿಯಲಾಗಿ ಆಸ್ತಿ ಹಾಗೂ ಧಾರ್ಮಿಕ ಕ್ರಿಯಾ ವಿಧಿಗಳಲ್ಲೂ ಸ್ತ್ರೀಯರು ಯಾವುದೇ ನಿರ್ದಿಷ್ಟವೂ, ಪ್ರಮುಖವೂ ಆದ ಸ್ಥಾನವಿಲ್ಲದೇ ನೇಪಥ್ಯಕ್ಕೆ ತಳ್ಳಲ್ಪಟ್ಟರು.

ಪುರುಷ ಪ್ರಧಾನ ಸಂಸ್ಕೃತಿ ಸಮಾಜದಲ್ಲಿ ಬೇರೂರುತ್ತಾ ಹೋದ ಹಾಗೆಲ್ಲಾ ಗಂಡು ಸಂತಾನದ ಸಾಮಾಜಿಕ-ಆರ್ಥಿಕ ಮೌಲ್ಯವೂ ಬೆಳೆಯುತ್ತಾ ಹೋಯಿತು. ಈ ವ್ಯವಸ್ಥೆ ಸೃಷ್ಟಿಯಾಗಲು ಈ ಕೆಳಗಿನ ಅಂಶಗಳು ಬಹು ಮುಖ್ಯವಾದುದೆಂದು ಗುರುತಿಸಲ್ಪಟ್ಟಿವೆ:

೧. ಹಿರಿಯರ ಆತ್ಮಕ್ಕೆ ಮೋಕ್ಷವನ್ನು ದೊರಕಿಸಿಕೊಡಲು ನಡೆಸಬೇಕಾದ ಧಾರ್ಮಿಕ ಕ್ರಿಯಾವಿಧಿಗಳು.

೨. ಪೂರ್ವಜರ ಆಸ್ತಿಯನ್ನು ಕಾಪಾಡುವುದು.

೩. ಇಳಿವಯಸ್ಸಿನಲ್ಲಿ ತಂದೆ- ತಾಯಿಯರ ರಕ್ಷಣೆ.

ಈ ಅಂಶಗಳು ಗಂಡು ಸಂತಾನಕ್ಕೆ ಹೆಚ್ಚಿನ ಸಾಮಾಜಿಕ ಸ್ಥಾನವನ್ನು ನೀಡುವುದರ ಜೊತೆಗೆ ಹೆಣ್ಣು ಸಂತಾನದ ಸ್ಥಾನವನ್ನು ನಿಕೃಷ್ಟಗೊಳಿಸಲೂ ಕಾರಣವಾದವು.

ಈ ಹಿನ್ನಲೆಯಲ್ಲಿಯೇ ಮಾತೃ ಪ್ರಧಾನ ಕುಟುಂಬಗಳ ಅಸ್ತಿತ್ವದ ಸೂಚಕಗಳಾದ

ಸತ್ಯಕಾಮ, ಜಾಬಾಲಿ, ಪಾಂಡಿತ್ಯವನ್ನು ಪಡೆದ ಗಾರ್ಗಿ, ಮೈತ್ರೇಯಿಯರ ನಿದರ್ಶನಗಳು ಕಂಡುಬಂದರೂ ಅವು ಸಾಮಾನ್ಯವಾಗಿ ಕಂಡುಬಂದಂಥ ಪರಿಸ್ಥಿತಿಯನ್ನು ಪ್ರತಿನಿಧಿಸುವ ಉದಾಹರಣೆಗಳಾಗಿರಲಿಲ್ಲ ಎಂಬುದನ್ನು ನಾವು ಇಲ್ಲಿ ಗಮನಿಸಬೇಕಾಗಿದೆ.

## ಮಹಾಕಾವ್ಯಗಳಲ್ಲಿ ಸ್ತ್ರೀಯರು

ಭಾರತೀಯ ಸಂಸ್ಕೃತಿಯಲ್ಲಿ ಸ್ತ್ರೀಯರ ಪಾತ್ರಗಳ ಚಿತ್ರಣ ಮಾಡುವಲ್ಲಿ ರಾಮಾಯಣ ಮತ್ತು ಮಹಾಭಾರತಗಳ ಪಾತ್ರವನ್ನು ಅಲಕ್ಷಿಸುವಂತಿಲ್ಲ. ಭಾರತೀಯ ಸಂಸ್ಕೃತಿಯ ಮೇಲೆಯೇ ಈ ಮಹಾಕಾವ್ಯಗಳ ಪ್ರಭಾವ ಬಹು ಹಿರಿದಾಗಿದ್ದು, ಅವು ಸೃಷ್ಟಿಸಿದ ಅನೇಕ ಮೌಲ್ಯಗಳು ಸಮಕಾಲೀನ ಸಾಮಾಜಿಕ ವ್ಯವಸ್ಥೆಯನ್ನು ತಮ್ಮ ಹಿಡಿತದಲ್ಲಿಟ್ಟುಕೊಂಡಿವೆ ಎಂದರೂ ತಪ್ಪಾಗಲಾರದು. ವಿಭಿನ್ನವಾದ ರೀತಿಗಳಲ್ಲಿ ಚಿತ್ರೀಕರಿಸಲ್ಪಟ್ಟಿದ್ದರೂ ಸೀತೆ ಹಾಗೂ ದ್ರೌಪದಿಯರ ಪಾತ್ರಗಳು ಭಾರತೀಯ ಸ್ತ್ರೀಯರ ಬದುಕನ್ನು ಇಂದಿಗೂ ಒಂದಲ್ಲ ಒಂದು ರೀತಿಯಲ್ಲಿ ಪ್ರಭಾವಿಸುತ್ತಿವೆ. ಅದರಲ್ಲೂ ವಿಶೇಷವಾಗಿ, ಸಾಮಾನ್ಯ ಹಿಂದೂ ಮನಸ್ಥಿತಿಯ ಮೇಲೆ ಈ ಪಾತ್ರಗಳ ಪ್ರಭಾವ ಅಚ್ಚಳಿಯದೇ ಉಳಿದಿದೆ ಎನ್ನುವುದು ಗಮನಾರ್ಹ. ಮಹಾಭಾರತದ ದ್ರೌಪದಿಯ ಪಾತ್ರಕ್ಕಿಂತ ರಾಮಾಯಣದ ಸೀತೆಯ ಪಾತ್ರವನ್ನು ಒಂದು ಆದರ್ಶ ಮಾದರಿಯನ್ನಾಗಿಸಿ, ರಾಮಾಯಣದ ಸಂಸ್ಕೃತಿಯೇ ಭಾರತದ ಸಂಸ್ಕೃತಿ ಎಂದು ಸಾರುತ್ತಾ ಇಂದಿಗೂ ಆದರ್ಶ ಭಾರತೀಯ ಅದರಲ್ಲೂ ವಿಶೇಷವಾಗಿ ಹಿಂದೂ ನಾರಿಯರು ಸೀತೆಯನ್ನು ಅನುಸರಿಸಬೇಕೆಂದು ಹೇಳುತ್ತಿರುವವರ ಸಂಖ್ಯೆಯೇನೂ ಕಡಿಮೆಯಿಲ್ಲ.

ರಾಮಾಯಣದ ಸೀತೆ ಪುರುಷ ಪ್ರಾಧಾನ್ಯತೆಯನ್ನೂ, ಸ್ತ್ರೀಯ ಪರಾಧೀನತೆಯನ್ನೂ ಎತ್ತಿ ಹಿಡಿಯುವಂಥ ಒಂದು ಸ್ತ್ರೀ ಪಾತ್ರ. ತನ್ನ ಪತಿ ರಾಮನ ಆಸೆಗಳು ಹಾಗೂ ಆಸಕ್ತಿಗಳನ್ನು ಪಾಲಿಸುವುದರಲ್ಲಿಯೇ ತನ್ನ ಜೀವನದ ಸಾರ್ಥಕತೆಯನ್ನು ಕಂಡುಕೊಳ್ಳುವ ಸೀತೆಗೆ ಸ್ವತಂತ್ರವಾದ ವ್ಯಕ್ತಿತ್ವವೇ ಇಲ್ಲವೇನೋ ಎನಿಸದಿರುವುದಿಲ್ಲ. ತ್ಯಾಗ, ಬಲಿದಾನ, ಪತಿನಿಷ್ಠೆ, ಪ್ರಶ್ನೆ- ಪ್ರತಿಭಟನೆ ಇವೆರಡರಿಂದಲೂ ದೂರವಿರುವುದು ಮುಂತಾದ ಹತ್ತು ಹಲವು ಸಾಂಪ್ರದಾಯಿಕ ಪ್ರವೃತ್ತಿಗಳ ದ್ಯೋತಕವಾದ ಸೀತೆಯನ್ನು ಕುರಿತ ಕಥೆಗಳು, ಹಾಡುಗಳು, ಚಲನ ಚಿತ್ರಗಳು, ಟಿ. ವಿ. ಧಾರವಾಹಿಗಳ ಮೂಲಕ ಆಕೆಯ ಪಾತ್ರ ಮಾದರಿಯನ್ನು ಅಜರಾಮರವಾಗಿಸಲಾಗಿದೆ.

ರಾವಣನಿಂದ ಅಪಹರಿಸಲ್ಪಟ್ಟ ಸೀತೆ ಆತನನ್ನು ಧಿಕ್ಕರಿಸಿದ ವಿಷಯ ಜನಜನಿತವಾಗಿದ್ದರೂ ರಾಮ ರಾವಣನನ್ನು ಯುದ್ಧದಲ್ಲಿ ಸೋಲಿಸಿ ಸೀತೆಯನ್ನು ಮರು ಪಡೆದಿದ್ದರೂ, ಸಣ್ಣ ವಯಸ್ಸಿನ ಮಕ್ಕಳ ತಾಯಿಯಾಗಿದ್ದರೂ ಸಾಮಾನ್ಯ ಪ್ರಜೆಯೊಬ್ಬನ ಟೀಕೆಗೆ ಅತಿ ಪ್ರಾಶಸ್ತ್ಯ ನೀಡಿದ ರಾಮ ತನ್ನ ಪತ್ನಿಯ ಚಾರಿತ್ರ್ಯಶುದ್ಧತೆಯನ್ನು ಪರೀಕ್ಷೆಗೆ ಒಳಪಡಿಸುವಂಥ ಪರಿಸ್ಥಿತಿ ಒದಗಿಬಂತು. ಸ್ತ್ರೀಗೆ ಶೀಲ ಹಾಗೂ ಪಾತಿವ್ರತ್ಯದಂಥ ಗುಣಗಳೇ ಪರಮ ಶ್ರೇಷ್ಠವೆಂದು ನಂಬಿದ ಸೀತೆ ತನ್ನ ಪತಿಯ ಪ್ರಜಾನಿಷ್ಠೆಯನ್ನು ಎತ್ತಿಹಿಡಿಯಲು

ಅಗ್ನಿ ಪರೀಕ್ಷೆಯನ್ನು ಮಾಡುತ್ತಾಳೆ. ರಾಮನು ಸೀತೆಯಿಂದ ದೂರವಿದ್ದಂಥ ದೀರ್ಘಕಾಲದಲ್ಲಿ ಆತನ ಚಾರಿತ್ರ್ಯಶುದ್ಧತೆಯನ್ನು ಪ್ರಶ್ನಿಸುವಂಥ ಯಾವುದೇ ಪ್ರಸಂಗ ಕಂಡುಬರುವುದಿಲ್ಲ. ಇದರಿಂದ ಸ್ತ್ರೀ ಪುರುಷರನ್ನು ಕುರಿತಂತೆ ಸಮಾಜದಲ್ಲಿ ಪ್ರಚಲಿತವಾಗಿದ್ದ ದ್ವಿಮುಖ ನೀತಿಯ ಪರಿಚಯ ನಮಗೆ ಉಂಟಾಗುತ್ತದೆ. ಆಧುನಿಕತೆಯ ತುತ್ತತುದಿಯನ್ನು ಭಾರತೀಯ ಸಮಾಜ ತಲುಪುತ್ತಿದೆ ಎಂದು ಒಂದೆಡೆ ಹೆಮ್ಮೆಯಿಂದ ಸಾರುವ ಈ ಸಂಸ್ಕೃತಿ, ಮತ್ತೊಂದೆಡೆ ಸ್ತ್ರೀಯ ಪರಾಧೀನತೆಯನ್ನೂ ಪುರುಷನ ಪ್ರಾಬಲ್ಯವನ್ನೂ ಎತ್ತಿ ಹಿಡಿಯುವಂಥ ಮೌಲ್ಯಗಳನ್ನೂ ಪ್ರತಿಪಾದಿಸುತ್ತಿರುವುದು ಸಮಕಾಲೀನ ಸಂಸ್ಕೃತಿ ಯಾವ ಬಗೆಯ ಸ್ತ್ರೀ ಪಾತ್ರ ಮಾದರಿಗಳನ್ನು ಪ್ರತಿಪಾದಿಸುತ್ತಿದೆ ಎಂಬುದಕ್ಕೆ ಸಾಕ್ಷಿಯಾಗಿದೆ.

ರಾಮಾಯಣಕ್ಕಿಂತ ಮಹಾಭಾರತದಲ್ಲಿ ಹೆಚ್ಚು ಸ್ತ್ರೀಪರವೆನಿಸುವಂಥ ಪ್ರವೃತ್ತಿಗಳನ್ನು ಕಾಣಬಹುದು. ಮಹಾಭಾರತದ ಸಮಯದ ಸಮಾಜದಲ್ಲಿ ಬಹುಪತ್ನಿತ್ವ ಮತ್ತು ಬಹುಪತಿತ್ವ ವಿವಾಹಗಳಿಗೆ ಹಾಗೂ ವಿವಾಹ ಎನ್ನುವ ಸಾಂಸ್ಥಿಕ ವ್ಯವಸ್ಥೆಯಿಂದ ಹೊರತಾದ ಸಂಬಂಧಗಳಿಗೆ ಮನ್ನಣೆಯಿತ್ತು ಎಂಬುದು ತಿಳಿದುಬರುತ್ತದೆ. ವಿವಾಹ ಎನ್ನುವ ಸಾಂಸ್ಥಿಕ ವ್ಯವಸ್ಥೆಯಿಂದ ಹೊರತಾದ ಸಂಬಂಧಗಳು ಹಾಗೂ ಆ ಸಂಬಂಧಗಳಿಂದ ಜನಿಸಿದ ಸಂತಾನಕ್ಕೆ ಸಾಮಾಜಿಕ ವಿರೋಧವೇನೂ ವ್ಯಕ್ತವಾಗಿರಲಿಲ್ಲ ಎನ್ನುವುದು ಗಮನಾರ್ಹ. ಆದರೆ ಈ ಸಮಯದಲ್ಲೂ ಗಂಡು ಸಂತಾನಕ್ಕೆ ಅತಿ ಹೆಚ್ಚಿನ ಪ್ರಾಶಸ್ತ್ಯವಿತ್ತು ಎನ್ನುವುದು ಆಗಿನ ಸಮಾಜದಲ್ಲಿ ಆಚರಣೆಯಲ್ಲಿದ್ದ ನಿಯೋಗ ಪದ್ಧತಿಯಿಂದ ತಿಳಿದು ಬರುತ್ತದೆ.

ಮಹಾಭಾರತದಲ್ಲಿ ದ್ರೌಪದಿಯ ಪಾತ್ರ ಸ್ವಾಭಿಮಾನ, ಧೈರ್ಯ ಹಾಗೂ ಅನ್ಯಾಯದ ವಿರುದ್ಧ ಧ್ವನಿಯನ್ನು ಎತ್ತುವಂಥ ಪಾತ್ರವಾಗಿ ಮೂಡಿ ಬಂದಿದೆ. ತನ್ನ ವ್ಯಕ್ತಿತ್ವವನ್ನು ಸದಾಕಾಲವೂ ಪಾಂಡವ ಸಹೋದರರೊಡನೆ ಹೊಂದಾಣಿಕೆಯನ್ನು ಮಾಡಿಕೊಳ್ಳದ ಹಾಗೂ ತನ್ನ ನಡವಳಿಕೆಯಲ್ಲಿ ದಾಸಿ ಭಾವವನ್ನು ತೋರದ ದ್ರೌಪದಿ ಸ್ತ್ರೀಯ ಪರಾಧೀನತೆಯನ್ನು ಪ್ರತಿಪಾದಿಸುವ ಪಾತ್ರವಾಗಿಲ್ಲ ಎಂಬುದು ಗಮನಾರ್ಹವಾದ ಅಂಶ. ಮಹಾಭಾರತದಲ್ಲಿ ಕಂಡುಬರುವ ಅನೇಕ ಮೌಲ್ಯಗಳು ಸಮಕಾಲೀನ ಸಮಾಜದಲ್ಲೂ ಕಂಡುಬರುತ್ತಿದ್ದು ಸಾಮಾಜಿಕ ಬದಲಾವಣೆಯ ಸೋಂಕು ಆಗಲೇ ತಟ್ಟಿತ್ತು ಎನ್ನುವುದಕ್ಕೆ ಸಾಕ್ಷಿಯಾಗಿದೆ. ದ್ರೌಪದಿಯ ಪಾತ್ರ ಸ್ವಾಭಿಮಾನ, ಸ್ವಗೌರವಗಳ ಸಂಕೇತವಾಗಿ ಮೂಡಿ ಬಂದಿದ್ದರೂ, ಸೀತೆಯನ್ನು ವೈಭವೀಕರಿಸಿದಷ್ಟು ಆಕೆಯನ್ನು ಭಾರತೀಯ ಸಂಸ್ಕೃತಿ ಸಮ್ಮಾನಿಸಿಲ್ಲ ಎನ್ನುವುದು ಹೆಣ್ಣಿನ ಸ್ವಾತಂತ್ರ್ಯಕ್ಕಿಂತ ಆಕೆಯ ದಾಸ್ಯತ್ವವನ್ನು ಅದು ಎತ್ತಿ ಹಿಡಿಯುತ್ತದೆ ಎಂಬುದಕ್ಕೆ ಸಾಕ್ಷಿಯಾಗಿದೆ. ದ್ರೌಪದಿಯ ಬಹುಪತಿತ್ವವನ್ನು ನಕಾರಾತ್ಮಕವಾದ ದೃಷ್ಟಿಕೋನದಿಂದ ನೋಡಿ, ಆ ಪಾತ್ರದ ಹೆಸರಿನಲ್ಲಿ ಅನೇಕ ಸ್ತ್ರೀಯರನ್ನು ಅವಹೇಳನ ಮಾಡುವುದು ಕೂಡ ಕಂಡುಬರುತ್ತದೆ. ದ್ರೌಪದಿಯ ಪಾತ್ರ ಸೀತೆಯ ಪಾತ್ರದಂತೆ ಒಂದು ಆದರ್ಶ ಮಾದರಿಯಾಗಿ ಮೂಡಿ ಬಂದಿಲ್ಲ. ಸೀತೆಯ ವ್ಯಕ್ತಿತ್ವ

ಅನುಕರಣ ಯೋಗ್ಯ ಎಂಬ ಪಾಠವನ್ನು ಇಂದಿಗೂ ಭಾರತೀಯ ಸ್ತ್ರೀಯರಿಗೆ ಕಲಿಸುತ್ತಿರುವುದು ಆಧುನಿಕ ಯುಗದಲ್ಲೂ ಮಹಾಕಾವ್ಯಗಳಲ್ಲಿ ಕಂಡುಬಂದ ಪುರುಷ ಪ್ರಧಾನ ಸಂಸ್ಕೃತಿ ಎಷ್ಟರ ಮಟ್ಟಿಗೆ ಸಮಕಾಲೀನ ಮೌಲ್ಯಗಳನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿದೆ ಎಂಬ ಅಂಶವನ್ನು ನಾವು ಗಮನಿಸಬೇಕಾಗಿದೆ.

ಸಾಮಾಜಿಕ ಬದಲಾವಣೆಗಳನ್ನು ಸೂಚಿಸುವ ಅನೇಕ ಪ್ರವೃತ್ತಿಗಳು ಮಹಾಭಾರತದ ಸಮಾಜದಲ್ಲಿ ಕಂಡುಬರುತ್ತಿದ್ದವು ಎಂದು ಹಿಂದೆಯೇ ಸೂಚಿಸಿದೆಯಷ್ಟೆ. ಆ ಕಾಲದಲ್ಲಿ ಸತಿಪದ್ಧತಿ ಜಾರಿಯಲ್ಲಿದ್ದರೂ ಸ್ತ್ರೀಯರು ಅದನ್ನು ಕಡ್ಡಾಯವಾಗಿ ಪಾಲಿಸ ಬೇಕಾಗಿರಲಿಲ್ಲ. ಪತಿಯ ಮರಣಾನಂತರವೂ ಕುಟುಂಬದ ಮುಂಚೂಣಿಯಲ್ಲಿ ನಿಂತು ಸ್ವಾವಲಂಬಿಗಳಾಗಿ ಜೀವಿಸಿರುವ ಸ್ತ್ರೀಯರ ದೃಷ್ಟಾಂತಗಳು ನಮಗೆ ಮಹಾಭಾರತದಲ್ಲಿ ದೊರೆಯುತ್ತವೆ. ಈ ಕಾಲದಲ್ಲಿ ಬಾಲ್ಯವಿವಾಹ ಪದ್ಧತಿಯ ಆಚರಣೆ ಇರಲಿಲ್ಲವೆಂದೇ ಅರ್ಥೈಸುತ್ತಾ, ಸ್ತ್ರೀ ಪುರುಷರಿಗೆ ತಮ್ಮ ದಾಂಪತ್ಯ ಜೀವನದ ಸಂಗಾತಿಗಳನ್ನು ಆಯ್ಕೆ ಮಾಡುವ ಸ್ವಾತಂತ್ರ್ಯವಿತ್ತೆಂದು ಕೂಡ ಹೇಳಬಹುದು. ಸ್ತ್ರೀಯರು ಸಾಮಾಜಿಕ ಸಮಾರಂಭಗಳಲ್ಲಿ, ಕ್ರೀಡೆಗಳು ಹಾಗೂ ಉತ್ಸವಗಳಲ್ಲಿ ಭಾಗವಹಿಸುತ್ತಿದ್ದರು ಎಂಬುದಕ್ಕೆ ನಿದರ್ಶನಗಳಿವೆ. ಒಟ್ಟಿನಲ್ಲಿ ಹೇಳಬೇಕಾದರೆ ಮಹಾಭಾರತದ ಕಾಲದಲ್ಲಿ ಸ್ತ್ರೀಯರು ತಕ್ಕಮಟ್ಟಿನ ಸ್ವಾತಂತ್ರ್ಯ ಹಾಗೂ ಸಮಾನತೆಯನ್ನು ಹೊಂದಿದ್ದರು.

ಸಮಕಾಲೀನ ಸಂಸ್ಕೃತಿ ಹಾಗೂ ಮನಸ್ಥಿತಿಯ ಮೇಲೆ ರಾಮಾಯಣ ಮತ್ತು ಮಹಾಭಾರತಗಳ ಪ್ರಭಾವ ಇಂದಿಗೂ ಜೀವಂತವಾಗಿದ್ದು, ಶಿಕ್ಷಣ, ಕುಟುಂಬ, ರಾಜಕೀಯ, ಸಮೂಹ ಮಾಧ್ಯಮಗಳು, ಧರ್ಮ ಮುಂತಾದ ಸಂಸ್ಥೆಗಳ ಮೂಲಕ ನಡೆಯುವ ಸಾಮಾಜೀಕರಣ ಈ ಮಹಾಕಾವ್ಯಗಳ ಅನೇಕ ಮೌಲ್ಯಗಳನ್ನು ಉಳಿಸಿಕೊಂಡು ಬಂದಿದೆ.

## ಬೌದ್ಧ ಮತ್ತು ಜೈನ ಧರ್ಮಗಳ ಕಾಲದಲ್ಲಿ ಸ್ತ್ರೀಯರು

ಸುಮಾರು ಕ್ರಿ. ಪೂ. ೬ನೇ ಶತಮಾನದ ವೇಳೆಗೆ ಬುದ್ಧ ಹಾಗೂ ಮಹಾವೀರರ ಚಿಂತನೆಗಳು ಒಂದು ಮಟ್ಟದಲ್ಲಿ ಭಾರತೀಯ ಮೌಲ್ಯ, ಜೀವನ ಶೈಲಿಗಳ ಮೇಲೆ ತಮ್ಮ ಪ್ರಭಾವ ಬೀರಲು ಪ್ರಾರಂಭಿಸಿದವು. ಈ ಯುಗದಲ್ಲಿ ಸ್ತ್ರೀ ಸ್ವಾತಂತ್ರ್ಯವನ್ನು ಗುರುತಿಸಲು ಒಂದು ಪ್ರಯತ್ನ ಪ್ರಾರಂಭವಾಯಿತು ಎಂದು ಹೇಳಿದರೂ ತಪ್ಪಾಗಲಾರದು. ವೈದಿಕ ಧರ್ಮಕ್ಕೆ ಬೌದ್ಧ ಮತ್ತು ಜೈನ ಧರ್ಮಗಳು ತೋರಿಸಿದ ಪ್ರತಿಭಟನೆ ಹೊಸ ಸಾಮಾಜಿಕ ರಚನೆ ಮತ್ತು ಚಿಂತನೆಗಳಿಗೆ ದಾರಿಮಾಡಿಕೊಟ್ಟಿತು.

ಬೌದ್ಧ ಧರ್ಮವು ಹಿಂದೂ ಧರ್ಮಕ್ಕಿಂತಲೂ, ಸಮಾನತೆಯ ತತ್ವಕ್ಕೆ ಹೆಚ್ಚು ಒತ್ತನ್ನು ನೀಡಿತ್ತು. ಸ್ತ್ರೀಯರ ಸ್ಥಾನವನ್ನು ಉತ್ತಮ ಪಡಿಸಬೇಕೆಂಬ ಯಾವುದೇ ವಿಶೇಷ ಕಾಳಜಿಗಳನ್ನೇನೂ ಹೊಂದಿರಲಿಲ್ಲವಾದರೂ ಸ್ತ್ರೀಯರಿಗೂ ತಮ್ಮ ಭಾವನೆಗಳನ್ನು ವ್ಯಕ್ತಪಡಿಸಲು ಒಂದು ಅವಕಾಶವನ್ನು ನೀಡಬೇಕೆಂಬ ಭಾವನೆಯ ಛಾಯೆಯನ್ನು ಬೌದ್ಧ

ಧರ್ಮದಲ್ಲಿ ಗುರುತಿಸಬಹುದು. ಈ ಸಂಸ್ಥೆಯೂ ಮಹಿಳಾ ಪ್ರಶ್ನೆಯನ್ನು ಸಾಂಪ್ರದಾಯಿಕ ರೀತಿಯಲ್ಲಿಯೇ ಅರ್ಥೈಸಿತು ಎನ್ನುವುದು ನಿಜವಾದರೂ ಬೌದ್ಧ ಧರ್ಮದ ಹಲವು ತತ್ವಗಳು ಸ್ತ್ರೀಯರ ಜೀವನದ ಮೇಲೆ ತೀವ್ರ ಪ್ರಭಾವವನ್ನು ಬೀರಿದವು ಎಂದರೆ ತಪ್ಪಾಗಲಾರದು. ಬುದ್ಧನು ವಿವಾಹವನ್ನು ಒಂದು ಸಾಮಾಜಿಕ ಹಾಗೂ ಆರ್ಥಿಕ ಒಪ್ಪಂದವೆಂದು ಪರಿಗಣಿಸಿದ್ದಾನೆ. ಈ ಸಂಬಂಧಕ್ಕೆ ಒಳಪಟ್ಟ ಇಬ್ಬರು ವ್ಯಕ್ತಿಗಳಿಗೂ ಧಾರ್ಮಿಕ ಜೀವನವನ್ನು ಸ್ವೀಕರಿಸಲು ಹಾಗೂ ವಿವಾಹ ಒಪ್ಪಂದದಿಂದ ಹೊರಬರಲು ಅವಕಾಶಗಳಿದ್ದವು. ಬೌದ್ಧ ಧರ್ಮದಲ್ಲಿ ಸ್ತ್ರೀಯರಿಗೂ ಧಾರ್ಮಿಕ ಚಿಂತನೆ ಹಾಗೂ ಕ್ರಿಯಾ ವಿಧಿಗಳಲ್ಲಿ ಭಾಗಿಗಳಾಗುವ ಅವಕಾಶವನ್ನು ಕಲ್ಪಿಸಲಾಗಿತ್ತು. ಈ ಕಾರಣದಿಂದಲೇ ಹೆಚ್ಚಿನ ಸಂಖ್ಯೆಯಲ್ಲಿ ಭಿಕ್ಷುಣಿಯರು ಬೌದ್ಧ ಧರ್ಮವನ್ನು ಸ್ವೀಕರಿಸಿದರು. ಇವರು ರಚಿಸಿದ ಕೃತಿಗಳೇ ಥೇರೀಗಾಥಾ ಎಂದು ಪ್ರಸಿದ್ಧವಾಗಿವೆ.

ಬೌದ್ಧ ಸಂಘಗಳು ಸಮಾಜದ ಎಲ್ಲ ವರ್ಗಗಳ ಮಹಿಳೆಯರನ್ನು ಅವರ ವೃತ್ತಿ, ಅಂತಸ್ತುಗಳು ಏನೇ ಇರಲಿ ಸಮಾನವಾಗಿ ಸ್ವೀಕರಿಸುವ ಪ್ರಯತ್ನವನ್ನಾದರೂ ಮಾಡಿತು ಎಂಬುದು ತಿಳಿದು ಬರುತ್ತದೆ. ಬೇರೆ ಯಾವ ಧರ್ಮವೂ ತನ್ನ ಪರಿಧಿಯಲ್ಲಿ ಸೇರಿಸಿಕೊಳ್ಳದಿದ್ದ, ಸಾಮಾಜಿಕ ಅಗೌರವಕ್ಕೆ ಒಳಗಾದ ವೇಶ್ಯೆಯರನ್ನೂ ಸಂಘದಲ್ಲಿ ಘನತೆ ಮತ್ತು ಗೌರವಗಳಿಂದ ಬದುಕಲು ಅವಕಾಶ ಕಲ್ಪಿಸಿಕೊಟ್ಟಿದ್ದು ಅತ್ಯಂತ ಗಮನಾರ್ಹವಾದ ಅಂಶವಾಗಿದೆ. ಬೌದ್ಧಧರ್ಮದ ಮೌಲ್ಯಗಳನ್ನು ಆಧರಿಸಿದ ಸಂಘಗಳು ಇಡೀ ಸಮಾಜವನ್ನು ಪರಿವರ್ತಿಸಲು ಬೇಕಿದ್ದ ಸಂಖ್ಯೆಯಲ್ಲಿ ಬೆಳೆದು ಬರಲಿಲ್ಲವಾದುದರಿಂದ ಬದಲಾವಣೆಯು ಒಂದು ವ್ಯಾಪಕವಾದ ಮಟ್ಟದಲ್ಲಿ ತಲೆದೋರಲಿಲ್ಲ ಎಂಬುದು ತಿಳಿದುಬರುತ್ತದೆ.

## ಧರ್ಮಶಾಸ್ತ್ರಗಳಲ್ಲಿ ಮಹಿಳೆಯರ ಚಿತ್ರಣ

ಕ್ರಿ. ಪೂ ೩ ನೇಯ ಶತಮಾನದ ನಂತರದ ಕಾಲವನ್ನು ಸ್ಮೃತಿಗಳ ಕಾಲವೆಂದು ಗುರುತಿಸುತ್ತಾರೆ. ಧರ್ಮಶಾಸ್ತ್ರದ ರಚನೆಯು ಇದಕ್ಕಿಂತಲೂ ಮುಂಚೆಯೇ ಪ್ರಾರಂಭಗೊಂಡಿದ್ದರೂ, ಜನರ ನಡೆನುಡಿಗಳನ್ನು ಆಚಾರ ವಿಚಾರಗಳನ್ನು ನಿಯಂತ್ರಿಸುವ ಸಾಧನವಾಗಿ ಅದರ ಪ್ರಾಮುಖ್ಯತೆ ಈ ಕಾಲದಲ್ಲೇ ವ್ಯಕ್ತವಾದದ್ದು. ಸಮಕಾಲೀನ ಸಮಾಜದಲ್ಲಿ ಜನ ಜೀವನದ ಗತಿಯನ್ನು ನಿರ್ಧರಿಸಲು ರೂಪಿಸುವ ನೀತಿಯನ್ನು ರಚಿಸುವುದರಲ್ಲಿ ಧರ್ಮಶಾಸ್ತ್ರಗಳು ಪ್ರಮುಖ ಪಾತ್ರವನ್ನು ವಹಿಸಿದವು. ಧರ್ಮಶಾಸ್ತ್ರಗಳು ಮೂಲಭೂತವಾಗಿ ವೇದಗಳನ್ನೇ ಆದರಿಸಿದ್ದರೂ ಅನೇಕ ವಿಚಾರಗಳು ಧರ್ಮಶಾಸ್ತ್ರಗಳಲ್ಲಿ ಪ್ರಥಮಬಾರಿಗೆ ವ್ಯಕ್ತವಾದವು. ಧರ್ಮಶಾಸ್ತ್ರಗಳು ಹಿಂದೂ ಜನಜೀವನ ನಿರ್ದೇಶಕ ಸೂತ್ರಗಳಾಗಿ ಇಂದಿಗೂ ಉಳಿಸಿಕೊಂಡಿರುವುದು ಗಮನಾರ್ಹ.

ಮನುಸಂಹಿತೆಯನ್ನು ಧರ್ಮಶಾಸ್ತ್ರಗಳ ಸಮೂಹದಲ್ಲೂ ಬಹು ಪ್ರಧಾನವಾದ ಹಾಗೂ ಪ್ರಬಲವಾದ ನೀತಿಶಾಸ್ತ್ರವಾಗಿ ನಾವು ಕಾಣುತ್ತೇವೆ. ಇದು ಪ್ರಭಾವಿ ಧರ್ಮಶಾಸ್ತ್ರ ಗ್ರಂಥವಾದುದರಿಂದ ನಂತರದ ಶಾಸ್ತ್ರ ಗ್ರಂಥಗಳೆಲ್ಲವೂ ಇದರ ಶೈಲಿಯಲ್ಲಿಯೇ

ಮೂಡಿಬಂದಿವೆ. ಮಹಿಳೆಯ ಚಾರಿತ್ರ್ಯದ ಬಗ್ಗೆ ಹೆಚ್ಚು ಒತ್ತುಕೊಟ್ಟ ಕಾಲವಿದು. ಪಾತಿವ್ರತ್ಯವನ್ನು ಹೆಣ್ಣಿನ ಅತಿ ಉತ್ತಮವಾದ, ಶ್ರೇಷ್ಠವಾದ ಮೌಲ್ಯವನ್ನಾಗಿಸಿದ ಮನುಸಂಹಿತೆ ನೈತಿಕತೆಯನ್ನು ಕುರಿತು ದ್ವಿಮುಖ ಮೌಲ್ಯಗಳ ಪ್ರತಿಪಾದನೆಗೆ ಪ್ರಮುಖ ಸಾಧನವಾಯಿತು. ಏಕಸಂಗಾತಿ ವಿವಾಹ ಪದ್ಧತಿಗೆ ಧರ್ಮಶಾಸ್ತ್ರ ಒತ್ತು ನೀಡಿತಾದರೂ ಅದನ್ನು ಸ್ತ್ರೀಯರಿಗಷ್ಟೇ ಅನ್ವಯಿಸುವಂತಾಯಿತೇ ಹೊರತು ಪುರುಷರು ಅದಕ್ಕೆ ಬದ್ಧರಾಗಲಿಲ್ಲ. ಪುರುಷರಿಗೆಂದೂ ಏಕ ಪತ್ನಿತ್ವದ ಮೌಲ್ಯಗಳನ್ನು ವ್ಯಕ್ತಿತ್ವದ ಅವಿಭಾಜ್ಯ ಅಂಗವಾಗಿಸುವ ಸಾಮಾಜೀಕರಣಕ್ಕೆ ಒತ್ತು ಕೊಡಲಿಲ್ಲ. ಇದರ ಜೊತೆಗೆ ಸ್ತ್ರೀಯರಿಗೆ ವಿದ್ಯಾಭ್ಯಾಸದ ಅವಕಾಶವನ್ನು ನಿರಾಕರಿಸಿದ್ದು, ಬಾಲ್ಯವಿವಾಹ, ವಿಧವಾ ವಿವಾಹಕ್ಕೆ ನಕಾರ, ಇವೇ ಮುಂತಾದ ಸಾಮಾಜಿಕ ಪಿಡುಗುಗಳು ಹೆಚ್ಚಾಗಿ ಸ್ತ್ರೀಯರ ಸ್ಥಾನ ಇಳಿಮುಖವಾಗುತ್ತಾ ಹೋಯಿತು. ಮನು ಧರ್ಮಶಾಸ್ತ್ರದ ಪ್ರಕಾರ ವಿವಾಹ ಒಂದು ಪವಿತ್ರ ಬಂಧನ ಆದರೆ ಈ ಬಂಧನದ ಅಂಶ ಸ್ತ್ರೀಯರಿಗಷ್ಟೇ ಅನ್ವಯಿಸುವಂತಾಯಿತು. ಸ್ತ್ರೀಯು ಪತಿಯನ್ನೇ ಪರಮ ದೈವವೆಂದು ಸ್ವೀಕರಿಸಬೇಕೆಂಬ ನಿಯಮವನ್ನು ಹೇರಿ ಆಕೆಯ ಮಾನಸಿಕ ಹಾಗೂ ದೈಹಿಕ ಸ್ವಾತಂತ್ರ್ಯಗಳಿಗೆ ಅತಿಯಾದ ನಿರ್ಬಂಧಗಳನ್ನು ಹೇರಲಾಯಿತು. ಆಕೆ ಪುರುಷನ ಸೊತ್ತು, ಪರಾಧೀನೆ ಹಾಗೂ ಒಂದು ಸ್ವತಂತ್ರ ವ್ಯಕ್ತಿತ್ವವನ್ನು ಹೊಂದಲು ಅನರ್ಹಳು ಎಂಬ ಮೌಲ್ಯಗಳು ಜನಜನಿತವಾಗಿ ಹೆಣ್ಣಾಗಿ ಜನಿಸುವುದೇ ದೊಡ್ಡ ಕುತ್ತಾಗಿ ಪರಿಗಣಿಸುವಂತಾಯಿತು. ಹೆಣ್ಣು ಶಿಶುವಿನ ಜನನ ದುಃಖಸೂಚಕವಾದ ಸಂದರ್ಭವಾಗಿ ಪರಿಣಮಿಸಿ, ಬೇಡದ ಹೆಣ್ಣು ಸಂತಾನದ ನಾಶಕ್ಕಾಗಿ ಅನೇಕ ಪ್ರೋಷಕರು ಮುಂದಾದರು. ಶಿಕ್ಷಣದಿಂದ, ಸಾಮಾಜಿಕ - ಆರ್ಥಿಕ ಜೀವನದಲ್ಲಿ ಭಾಗವಹಿಸುವಿಕೆಯಿಂದ ವಂಚಿತಳಾದ ಸ್ತ್ರೀ ಜೀವನದ ಅಧಃಪತನ ಈ ಕಾಲದಲ್ಲಿ ಅತ್ಯಂತ ವ್ಯಾಪಕ ಮಟ್ಟದಲ್ಲಿ ಕಂಡುಬಂತು.

೧೧ ನೇ ಶತಮಾನದ ನಂತರ ಭಾರತದಲ್ಲಿ ಇಸ್ಲಾಂ ಸಂಸ್ಕೃತಿಯ ಪ್ರಭಾವ ಹೆಚ್ಚುತ್ತಾ ಹೋಯಿತು. ಭಾರತಕ್ಕೆ ಇಸ್ಲಾಂ ಧರ್ಮವು ಬಂದಾಗ ಅದು ತನ್ನದೇ ಆದಂಥ ಮೌಲ್ಯಗಳನ್ನು ಈ ದೇಶದಲ್ಲಿ ಪಸರಿಸಿತು. ಸ್ತ್ರೀಯರನ್ನು ಅತಿಯಾದ ನಿರ್ಬಂಧನೆಗಳಿಗೆ ಒಳಪಡಿಸುವ ಪರದಾ ಪದ್ಧತಿ ಅವರ ಚಲನ ಮತ್ತು ಅಭಿವೃದ್ಧಿಗಳ ಮೇಲೆ ಅತ್ಯಂತ ನಕಾರಾತ್ಮಕವಾದ ಪರಿಣಾಮಗಳನ್ನು ಬೀರಿತು. ಸ್ತ್ರೀಯ ಪ್ರಪಂಚವನ್ನು ಕುಟುಂಬಕ್ಕೆ ಸೀಮಿತಗೊಳಿಸಿದ ಪರದಾ ಪದ್ಧತಿ ಸಕ್ರಿಯ ಸಾಮಾಜಿಕ ಜೀವನದಿಂದ ಸ್ತ್ರೀಯರನ್ನು ದೂರವಿಟ್ಟಿದ್ದೇ ಅಲ್ಲದೆ ಸ್ತ್ರೀಯರು ಶಿಕ್ಷಣವನ್ನಾಗಲಿ, ಪ್ರಾಪಂಚಿಕ ಜ್ಞಾನವನ್ನಾಗಲಿ ಪಡೆಯಲಾಗದಂಥ ಪರಿಸ್ಥಿತಿಯನ್ನು ಸೃಷ್ಟಿಸಿತು. ಪರದೆಯನ್ನು ಬಳಸದ ಸ್ತ್ರೀಯರನ್ನು ಅಗೌರವದಿಂದ ಕಾಣುವ ಪ್ರವೃತ್ತಿ ಬೆಳೆಯಿತಾದ್ದರಿಂದ, ಮುಸ್ಲಿಂರಲ್ಲದ ಸ್ತ್ರೀಯರೂ ಕೂಡ ಪರದಾಪದ್ಧತಿಯನ್ನು ಅನುಸರಿಸತೊಡಗಿದರು. ಮುಸಲ್ಮಾನ ದೊರೆಗಳು ಭಾರತದ ಆಂತರಿಕ ನಂಬಿಕೆ, ಆಚರಣೆಗಳಲ್ಲಿ ಹೆಚ್ಚಿನ ಬದಲಾವಣೆಗಳನ್ನೇನೂ ತರುವ ಪ್ರಯತ್ನ ಮಾಡಲಿಲ್ಲ. ಅವರು ಸತಿ ಪದ್ಧತಿಯನ್ನು ತಿರಸ್ಕರಿಸಿದರೂ ಹಿಂದೂ ಪ್ರಜೆಗಳನ್ನು ಈ ಪಿಡುಗಿಗೆ ಬಲಿಯಾಗದಂತೆ ತಡೆಯುವ ತೀವ್ರವಾದ ಪ್ರಯತ್ನವನ್ನೇನೂ ಮಾಡಲಿಲ್ಲ. ಆದ

ಕಾರಣ ಮುಸಲ್ಮಾನರು ಬರುವಾಗ ಭಾರತದ ಸ್ತ್ರೀಯರಿಗಿದ್ದ ಎಲ್ಲಾ ಅನಾನುಕೂಲಗಳೊಂದಿಗೆ ಹೊಸದೊಂದು (ಪರದಾ ಪದ್ಧತಿ) ಸೇರಿಕೊಂಡಿತೇ ವಿನಃ ಸ್ತ್ರೀಯರ ಪರಿಸ್ಥಿತಿಯಲ್ಲಿ ಯಾವ ಗಮನಾರ್ಹವಾದ ಮಾರ್ಪಾಡುಗಳು ಉಂಟಾಗಲಿಲ್ಲ. ಇದೇ ಪರಿಸ್ಥಿತಿ ಬ್ರಿಟಿಷರು ಭಾರತಕ್ಕೆ ಬಂದ ನಂತರವೂ ಮುಂದುವರೆಯಿತು.

## ಆಧುನಿಕ ಭಾರತದಲ್ಲಿ ಮಹಿಳೆಯರ ಸ್ಥಾನ-ಬದಲಾವಣೆಯ ಯುಗದ ಪ್ರಾರಂಭ

ಸ್ತ್ರೀಯರ ವಿಷಯದಲ್ಲಷ್ಟೇ ಅಲ್ಲ, ದೇಶದಾದ್ಯಂತ ಸಾಮಾಜಿಕ ಜೀವನದಲ್ಲಿ ಅನೇಕ ಮೂಲಭೂತ ಮಾರ್ಪಾಡುಗಳನ್ನು ತರಲು ಪ್ರಯತ್ನಿಸಿದ ಬ್ರಿಟಿಷ್ ಆಳ್ವಿಕೆಯ ಕಾಲವನ್ನು ಭಾರತದಲ್ಲಿ ಆಧುನಿಕ ಯುಗದ ಪ್ರಾರಂಭ ಎಂದು ಗುರುತಿಸಬಹುದು. ಸಂಕೀರ್ಣವಾದಂಥ ಅಸಮಾನತೆಯನ್ನು ಆಧರಿಸಿ ರೂಪುಗೊಂಡಿದ್ದ ಭಾರತೀಯ ಸಾಮಾಜಿಕ-ಸಾಂಸ್ಕೃತಿಕ ವ್ಯವಸ್ಥೆಯಲ್ಲಿ ಬದಲಾವಣೆಗಳನ್ನು ತರುವುದು ಸುಲಭಸಾಧ್ಯವಾದ ಕಾರ್ಯವಾಗಿರಲಿಲ್ಲ. ವಿಭಿನ್ನವಾದ ಸಾಂಸ್ಕೃತಿಕ ಹಿನ್ನೆಲೆಯಿಂದ ಬಂದಿದ್ದ ಬ್ರಿಟಿಷರಿಗೆ ಇಲ್ಲಿನ ಪರಿಸ್ಥಿತಿಗಳನ್ನು ಅರ್ಥಮಾಡಿಕೊಳ್ಳುವುದೂ ಕೂಡ ಕಷ್ಟವಾಗಿತ್ತು. ಮಿಗಿಲಾಗಿ ಭಾರತದಲ್ಲಿ ಬ್ರಿಟಿಷ್ ಸಾಮ್ರಾಜ್ಯ ಸ್ಥಾಪನೆಯತ್ತ ತಮ್ಮ ಗಮನವನ್ನೆಲ್ಲ ಕೇಂದ್ರೀಕರಿಸಿದ್ದ ಬ್ರಿಟಿಷರು ಪ್ರಾರಂಭದಲ್ಲಿ ಭಾರತೀಯ ಸಮಾಜದ ವ್ಯವಹಾರಗಳಲ್ಲಾಗಲಿ, ಸಾಮಾಜಿಕ ನ್ಯಾಯವನ್ನು ಒದಗಿಸುವ ಪ್ರಯತ್ನಗಳಲ್ಲಾಗಲಿ ತಮ್ಮನ್ನು ತೊಡಗಿಸಿಕೊಳ್ಳಲಿಲ್ಲ. ಆದರೆ ದೇಶದಲ್ಲಿ ಅವರ ಆಳ್ವಿಕೆ ಸ್ಥಾಪಿತವಾದಾಗ, ದೇಶದ ಹಲವೆಡೆಗಳಲ್ಲಿ ಆಧುನಿಕತೆಯ ಗಾಳಿ ಬೀಸಿದಾಗ ಬ್ರಿಟಿಷರು ಭಾರತೀಯ ಸಾಮಾಜಿಕ ಜೀವನದಲ್ಲಿ ಬದಲಾವಣೆಗಳನ್ನು ತರುವಂಥ ಪ್ರಯತ್ನಗಳಲ್ಲಿ ಆಸಕ್ತಿಯನ್ನು ವಹಿಸಲೇಬೇಕಾಯ್ತು. ಬದಲಾವಣೆಯನ್ನು ತರಬೇಕೆಂಬ ಆಕಾಂಕ್ಷೆಗಳು ಪ್ರಗತಿಪರ ಧೋರಣೆಗಳನ್ನು ಹೊಂದಿದ ಹಲವಾರು ಭಾರತೀಯರಲ್ಲಿಯೂ ಮೂಡಿ ಅವರಿಂದಲೂ ಒತ್ತಾಸೆಗಳು ಬಂದವು. ೧೯ ನೇ ಶತಮಾನದ ಸಾಮಾಜಿಕ ಸುಧಾರಣೆಯ ಯುಗವೆಂದು ಗುರುತಿಸಲ್ಪಟ್ಟು ಸ್ತ್ರೀಯರ ಸಾಮಾಜಿಕ ಜೀವನದಲ್ಲಿ ಮಹತ್ತರವೆನಿಸಿದಂಥ ಅನೇಕ ಬದಲಾವಣೆಗಳು ಈ ಕಾಲದಲ್ಲಿ ಉಂಟಾದವು.

ಮಹಿಳೆಯರ ಜೀವನಕ್ಕೆ ಕುತ್ತಾಗಿದ್ದ ಪಿಡುಗುಗಳಲ್ಲಿ ಅತ್ಯಂತ ಭೀಕರವೆನಿಸಿದ್ದ ಸತಿ ಪದ್ಧತಿಯನ್ನು ೧೮೨೯ ರಲ್ಲಿ ಕಾನೂನು ರೀತ್ಯಾ ನಿಷೇಧಿಸುವುದರ ಮೂಲಕ ಬ್ರಿಟಿಷ್ ಸರ್ಕಾರ ಸ್ತ್ರೀ ವಿಮೋಚನಾ ಚಳುವಳಿಗೆ ನಾಂದಿ ಹಾಡಿತು. ೧೯ ನೇ ಶತಮಾನದ ಪ್ರಖ್ಯಾತ ಸಮಾಜ ಸುಧಾರಕರಾದ ರಾಜರಾಮ್ ಮೋಹನರಾಯ್‌ರವರು ಸತಿಯ ವಿರುದ್ಧ ಸಮರವನ್ನು ಸಾರಿ, ಈ ಅಮಾನುಷ ಪದ್ಧತಿಯನ್ನು ತೊಡೆದು ಹಾಕಲೇಬೇಕೆಂದು ಮಾಡಿದ ಸಂಕಲ್ಪಕ್ಕೆ ಆಗ ಭಾರತದ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ವಿಲಿಯಂ ಬೆಂಟಿಕ್ ಸಕಾರಾತ್ಮಕ ಪ್ರತಿಕ್ರಿಯೆಯನ್ನು ತೋರಿಸಿ ಆಗಿನ ಕಾಲಕ್ಕೆ ಕ್ರಾಂತಿಕಾರಿ ಎನಿಸುವ ಸತಿ ನಿಷೇಧ ಕಾಯಿದೆಯನ್ನು ಜಾರಿಗೆ ತಂದರು. ಆದರೆ ಧಾರ್ಮಿಕ ಮೂಲಭೂತವಾದಿಗಳು ಹಾಗೂ ಸಂಪ್ರದಾಯಶರಣರು ಈ ಕಾಯಿದೆಗೆ ವ್ಯಾಪಕ ಪ್ರತಿಭಟನೆಯನ್ನು ವ್ಯಕ್ತಪಡಿಸಿ

ಸತಿ ಪದ್ಧತಿ ಧರ್ಮಸಮ್ಮತವಿದೆ ಎಂಬ ವಾದವನ್ನು ಮಂಡಿಸಿದರು. ಇದಕ್ಕೆ ಮಣಿಯದ ಬ್ರಿಟಿಷ್ ಸರ್ಕಾರ ತಾನು ಜಾರಿಗೆ ತಂದ ಕಾಯಿದೆಯನ್ನು ಹಿಂದೆಗೆದುಕೊಳ್ಳಲು ನಿರಾಕರಿಸಿತು. ಹಾಗೆಂದ ಮಾತ್ರಕ್ಕೆ ಈ ಕಾಯಿದೆ ಸತಿಯ ಆಚರಣೆಗೆ ಸಂಪೂರ್ಣ ಇತಿಶ್ರೀ ಹಾಡಿತು ಎಂದು ಅರ್ಥೈಸುವ ಹಾಗಿಲ್ಲ. ಅಲ್ಲಲ್ಲಿ ಸತಿಯ ಪ್ರಕರಣಗಳು ಕೇಳಿ ಬರುತ್ತಲೇ ಇದ್ದವು ಹಾಗೂ ಸತಿಯನ್ನು ಉತ್ತೇಜಿಸುವವರಿಗೆ ಯಾವುದೇ ಶಿಕ್ಷೆ ಇರಲಿಲ್ಲವಾದ್ದರಿಂದ ಸತಿಯ ಆಚರಣೆ ಸಂಪೂರ್ಣವಾಗಿ ಕೊನೆಗೊಳ್ಳಲಿಲ್ಲ. ಸ್ವ ಇಚ್ಛೆಯಿಂದ ಸಹಗಮನ ಮಾಡುವ ಸ್ತ್ರೀಯನ್ನು ಅಡ್ಡಿಪಡಿಸಬಾರದು ಎಂಬ ಅಭಿಪ್ರಾಯವೂ ಜಾರಿಯಲ್ಲಿತ್ತು. ಸತಿಯ ನಿಷೇಧ ಪರಿಣಾಮಕಾರಿಯಾಗದಿರಲು ಮತ್ತೊಂದು ಕಾರಣವೂ ಇತ್ತು. ವಿಧವಾ ವಿವಾಹಕ್ಕೆ ಮಾನ್ಯತೆ ಇಲ್ಲವಾದ್ದರಿಂದ ಸಹಗಮನದಿಂದ ಉಳಿಸಲ್ಪಟ್ಟಿದ್ದ ಮಹಿಳೆಯರ ಜೀವನ ದುಸ್ತರವಾಯಿತು. ಹೆಣ್ಣುಮಕ್ಕಳು ಶಿಕ್ಷಣಾವಕಾಶಗಳಿಂದ ವಂಚಿತರಾಗಿದ್ದರಿಂದ ಇಡೀ ಜೀವನವನ್ನು ಕತ್ತಲೆಯಲ್ಲಿ ಕಳೆಯಬೇಕಾದಂಥ ಪ್ರಸಂಗ ಉಂಟಾಗಿ ದಿನನಿತ್ಯವೂ ಸಾಯುವುದಕ್ಕಿಂತ ಒಮ್ಮೆ ಸಾಯುವುದೇ ಮೇಲು ಎಂಬ ಭಾವನೆಯನ್ನು ಅನೇಕ ಸ್ತ್ರೀಯರು ಹೊಂದಿದ್ದರು. ಬಾಲವಿಧವೆಯರ ಪರಿಸ್ಥಿತಿಯಂತೂ ಅತ್ಯಂತ ದುಸ್ತರವಾಗಿತ್ತು.

ವಿಧವಾ ವಿವಾಹಕ್ಕೆ ಕಾನೂನಿನ ಅಂಕಿತವನ್ನು ಪಡೆಯುವುದರಲ್ಲಿ ಬಂಗಾಳದ ಸುಧಾರಕರಾದ ಈಶ್ವರ್‌ಚಂದ್ರ ವಿದ್ಯಾಸಾಗರ್ ಅವರು ವಹಿಸಿದ ಪಾತ್ರ ಮಹತ್ವವಾದುದು. ಉದ್ದಾಮ ಪಂಡಿತರೂ, ಸಕಲ ಶಾಸ್ತ್ರ ಪಾರಂಗತರೂ ಆಗಿದ್ದ ವಿದ್ಯಾಸಾಗರ್ ಅವರು ಧರ್ಮದ ಹೆಸರಿನಲ್ಲಿ ಸ್ತ್ರೀ ವಿರೋಧಿ ಅಮಾನುಷ ಕೃತ್ಯಗಳನ್ನು ಪೋಷಿಸುವ ಪರಂಪರೆಯನ್ನು ಪ್ರಶ್ನಿಸಿ, ಶಾಸ್ತ್ರಗಳನ್ನು ಸರಿಯಾಗಿ ಅರ್ಥೈಸಿದರೆ ನಮಗೆ ಅನೇಕ ಸತ್ಯಗಳು ತಿಳಿಯುತ್ತವೆ ಎಂದು ವಾದಿಸಿದರು. ವಿದ್ಯಾಸಾಗರ್ ಅವರು ವಿಧವಾ ವಿವಾಹದ ಪರ ನಡೆಸಿದ ಚಳುವಳಿಯ ಕಾರಣದಿಂದಾಗಿ ೧೮೫೬ ರಲ್ಲಿ ವಿಧವಾ ವಿವಾಹಕ್ಕೆ ಇದ್ದ ನಿಷೇಧವನ್ನು ಕಾನೂನಿನ ಮೂಲಕ ತೊಡೆದು ಹಾಕಲಾಯಿತು. ಈ ಕಾನೂನು ಜಾರಿಗೆ ಬಂದ ನಂತರ ವಿಧವಾ ವಿವಾಹಗಳು ಬಹುಸಂಖ್ಯೆಯಲ್ಲಿ ಜರುಗಲಿಲ್ಲವಾದರೂ ಹೆಣ್ಣು ಮಕ್ಕಳ ಬದುಕಿಗೆ ಹೊಸ ಅರ್ಥವನ್ನು ಕೊಡುವ ಗಮನಾರ್ಹವಾದ ಪ್ರಯತ್ನ ಇದಾಯ್ತು.

ಹಿಂದೂ ವಿವಾಹವನ್ನು ಕಾನೂನು ರೀತ್ಯಾ ನೊಂದಣಿಗೊಳಿಸುವ ೧೮೭೨ರ ನಾಗರೀಕ ವಿವಾಹ ಕಾಯಿದೆ, ೧೮೭೪ರಲ್ಲಿ ಜಾರಿಗೆ ಬಂದ ವಿವಾಹಿತ ಸ್ತ್ರೀಯರ ಆಸ್ತಿ ಕಾಯಿದೆ ಮತ್ತು ೧೯೨೯ ರಲ್ಲಿ ಅಸ್ತಿತ್ವಕ್ಕೆ ಬಂದ ಬಾಲ್ಯವಿವಾಹ ನಿಷೇಧ ಕಾಯಿದೆ (೧೪ ವರುಷದ ಕೆಳಗಿನ ಹೆಣ್ಣು ಮಕ್ಕಳ ಹಾಗೂ ೧೮ ವರುಷದ ಕೆಳಗಿನ ಗಂಡು ಮಕ್ಕಳ ವಿವಾಹವನ್ನು ನಿಷೇಧಿಸಿದ್ದು)- ಈ ಎಲ್ಲ ಪ್ರಯತ್ನಗಳೂ ಬ್ರಿಟಿಷ್ ಆಳ್ವಿಕೆಯ ಸಮಯದಲ್ಲಿ ಮಹಿಳೆಯರ ವಿಮೋಚನೆಗಾಗಿ ನಡೆದ ಮಹತ್ವದ ಮೈಲಿಗಲ್ಲುಗಳು. ಭಾರತಕ್ಕೆ ಸ್ವತಂತ್ರ ಬಂದ ನಂತರ ಈ ಪ್ರಯತ್ನಗಳು ಇನ್ನೂ ಹೆಚ್ಚು ಭರದಿಂದ ಸಾಗಿದವು.

## ಸ್ವತಂತ್ರ ಭಾರತದಲ್ಲಿ ಮಹಿಳೆಯರು

ಭಾರತೀಯ ಸಂವಿಧಾನ ತನ್ನ ೧೫ ನೇ ವಿಧಿಯಲ್ಲಿ ಲಿಂಗ ತಾರತಮ್ಯವನ್ನು ನಿಷೇಧಿಸುವುದರ ಮೂಲಕ ನಮ್ಮ ಸಮಾಜದಲ್ಲಿ ಸ್ತ್ರೀ-ಪುರುಷ ಸಮಾನತೆಯನ್ನು ಸ್ಥಾಪಿಸಿ, ಸ್ತ್ರೀಯರಿಗೆ ಸಮಾಜದ ಸರ್ವ ರಂಗಗಳಲ್ಲೂ ಸಮಾನ ಅವಕಾಶಗಳನ್ನು ನೀಡುವ ಪ್ರಯತ್ನಗಳಿಗೆ ಹೊಸದೊಂದು ತಿರುವನ್ನು ಕೊಟ್ಟಿತು. ಸಾರ್ವಜನಿಕ ಜೀವನದಲ್ಲಷ್ಟೇ ಅಲ್ಲದೆ, ಕುಟುಂಬ, ವಿವಾಹ, ಶಿಕ್ಷಣ ಮುಂತಾದ ಸಂಸ್ಥೆಗಳಲ್ಲೂ ಸ್ತ್ರೀಯರಿಗೆ ವಿಶೇಷ ಹಕ್ಕುಗಳನ್ನು ಸ್ವಾತಂತ್ರ್ಯಾನಂತರದಲ್ಲಿ ನೀಡಲಾಯಿತು. ಸ್ವತಂತ್ರ ಭಾರತದಲ್ಲಿ ಮಹಿಳೆಯರ ಸ್ಥಾನದ ಮೇಲೆ ವಿಶೇಷ ಪ್ರಭಾವವನ್ನು ಬೀರಿರುವಂಥ ಅಂಶಗಳಲ್ಲಿ ಕಾನೂನು ಕೂಡ ಮುಖ್ಯವಾದುದು ಎಂದರೂ ತಪ್ಪಾಗಲಾರದು.

ಸ್ವತಂತ್ರ ಭಾರತದಲ್ಲಿ ಸ್ತ್ರೀ ವಿಮೋಚನೆಗಾಗಿ ಜಾರಿಗೆ ಬಂದ ಕಾಯಿದೆಗಳಲ್ಲಿ ಪ್ರಮುಖವಾದವು.

೧೯೫೫ ರ ಹಿಂದೂ ಕಾಯಿದೆ (ಏಕ ಸಂಗಾತಿ ವಿವಾಹವನ್ನು ಅಂಗೀಕರಿಸಿ, ವಿವಾಹ ವಿಚ್ಛೇದನಕ್ಕೆ ಅವಕಾಶವನ್ನು ಕಲ್ಪಿಸಿದ್ದೇ ಅಲ್ಲದೆ ವಿವಾಹದ ವಯಸ್ಸನ್ನು ಸ್ತ್ರೀಗೆ ೧೫ ಎಂದೂ ಪುರುಷನಿಗೆ ೧೮ ಎಂದೂ ನಿಗದಿಪಡಿಸಿತು), ೧೯೫೬ ರ ಹಿಂದೂ ಉತ್ತರಾಧಿಕಾರಿ ಕಾಯಿದೆ (ಸ್ತ್ರೀಯರಿಗೆ ಆಸ್ತಿ ಹಕ್ಕನ್ನು ನೀಡಿದ್ದು, ಆದರೆ ವಾಸ್ತವದಲ್ಲಿ ಈ ಹಕ್ಕು ಸ್ವಯಾರ್ಜಿತ ಆಸ್ತಿಗೆ ಮಾತ್ರ ಅನ್ವಯಿಸುತ್ತಿದ್ದು ಪಿತ್ರಾರ್ಜಿತ ಆಸ್ತಿಯಲ್ಲಿ ಸ್ತ್ರೀಯರಿಗೆ ಸಮಪಾಲನ್ನು ನೀಡುವ ಬಗ್ಗೆ ಅನೇಕ ವಾದವಿವಾದಗಳು ಇಂದಿಗೂ ಇವೆ), ೧೯೬೧ ರಲ್ಲಿ ಜಾರಿಗೆ ಬಂದ ವರದಕ್ಷಿಣೆ ನಿಷೇಧ ಕಾಯಿದೆ (೧೯೮೪ ಮತ್ತು ೧೯೮೬ ರಲ್ಲಿ ಈ ಕಾಯಿದೆಗೆ ತಿದ್ದುಪಡಿಗಳೂ ಬಂದವು), ೧೯೬೧ರ ಪ್ರಸೂತಿಕಾ ಸೌಲಭ್ಯ ಕಾಯಿದೆ, ೧೯೭೧ರ ವೈದ್ಯಕೀಯ ಗರ್ಭನಿವಾರಣಾ ಕಾಯಿದೆ, ಸಮಾನ ವೇತನ ಕಾಯಿದೆ (೧೯೭೬). ೧೯೭೬ರ ಬಾಲ್ಯವಿವಾಹ ಪ್ರತಿಬಂಧಕ (ತಿದ್ದುಪಡಿ) ಕಾಯಿದೆ (ಈ ಕಾಯಿದೆಯ ಅನ್ವಯ ವಿವಾಹದ ಕನಿಷ್ಠ ವಯಸ್ಸು ಸ್ತ್ರೀಗೆ ೧೮ ಎಂತಲೂ, ಪುರುಷರಿಗೆ ೨೧ ಎಂದೂ ನಿರ್ಧರಿಸಲಾಗಿದೆ), ೧೯೮೪ ರ ಕುಟುಂಬ ನ್ಯಾಯಾಲಯಗಳ ಕಾಯಿದೆ, ೧೯೮೬ ರ ಸ್ತ್ರೀಯರ ಅಸಭ್ಯ ಪ್ರತಿನಿಧಿಸುವಿಕೆಯ ನಿಷೇಧ ಕಾಯಿದೆ ಮತ್ತು ೧೯೮೬ರ ಮುಸ್ಲಿಂ ಮಹಿಳೆಯರ (ವಿಚ್ಛೇಧನಾನಂತರದ) ಹಕ್ಕುಗಳ ರಕ್ಷಣಾ ಕಾಯಿದೆ.

ಸ್ವತಂತ್ರ ಭಾರತದಲ್ಲಿ ಮಹಿಳೆಯರ ಅಭಿವೃದ್ಧಿಗಾಗಿ ಅನೇಕ ಕ್ರಾಂತಿಕಾರಿ ಕಾಯಿದೆಗಳು ಅಸ್ತಿತ್ವಕ್ಕೆ ಬಂದಿದ್ದು ಒಂದು ಐತಿಹಾಸಿಕ ದೃಷ್ಟಿಕೋನದಿಂದ ಮಹತ್ವವೆನಿಸಿದರೂ, ವಾಸ್ತವದಲ್ಲಿ ಬಹುತೇಕ ಸ್ತ್ರೀಯರಿಗೆ ಈ ಕಾಯಿದೆಗಳ ಅಥವಾ ಇತರ ಅಭಿವೃದ್ಧಿ ಪ್ರಯತ್ನಗಳ ಪ್ರಯೋಜನ ಲಭಿಸಿಲ್ಲ. ಪುರುಷ ಪ್ರಧಾನ ಸಂಸ್ಕೃತಿ ಹಾಗೂ ಸ್ತ್ರೀಪರ ಪ್ರಯತ್ನಗಳ ನಡುವಣ ಸಂಘರ್ಷ ಸಮಕಾಲೀನ ಸಮಾಜದ ಒಂದು ಜ್ವಲಂತ ಸಮಸ್ಯೆ. ಸಾಮಾಜಿಕ ರಚನೆಯಲ್ಲಿ ಹಾಸುಹೊಕ್ಕಾಗಿರುವ ಲಿಂಗ ಅಸಮಾನತೆಯ ಬೇರುಗಳನ್ನು

ನಿರ್ಮೂಲನ ಮಾಡುವವರೆಗೂ ಕಾಯಿದೆಗಳಾಗಲಿ, ಅಭಿವೃದ್ಧಿ ಯೋಜನೆಗಳಾಗಲಿ ಈ ಸಮಾಜದ ಮೂಲಭೂತ ರಚನೆಯನ್ನು ಭೇದಿಸಲು ಸಾಧ್ಯವಿಲ್ಲ. ದೇಶದ ವಿವಿಧೆಡೆಗಳಲ್ಲಿ, ವಿವಿಧ ಪ್ರಮಾಣಗಳಲ್ಲಿ ಇಂದಿಗೂ ಸ್ತ್ರೀಯರು ನಾನಾ ರೀತಿಯ ದೌರ್ಜನ್ಯಗಳಿಗೆ ಒಳಗಾಗುತ್ತಿದ್ದಾರೆ. ಹೆಣ್ಣು ಭ್ರೂಣ ಹತ್ಯೆ, ಹೆಣ್ಣು ಶಿಶು ಹತ್ಯೆ, ಬಾಲ್ಯವಿವಾಹ, ವರದಕ್ಷಿಣೆಗಾಗಿ ಹಿಂಸೆ ಮತ್ತು ಕೊಲೆ, ಕೌಟುಂಬಿಕ ಕ್ರೌರ್ಯ, ದೇವದಾಸಿ ಮತ್ತು ಬಾಲ ವೇಶ್ಯಾ ಪದ್ಧತಿಗಳಂತ ಅಮಾನುಷ ಆಚರಣೆಗಳಿಗೆ ಹೆಣ್ಣು ಮಕ್ಕಳ ಬಲಿ, ಆಸ್ತಿ ಹಕ್ಕಿನಿಂದ ವಂಚನೆ, ವೃತ್ತಿ ಸ್ಥಳದಲ್ಲಿ ದೌರ್ಜನ್ಯ ಇವೇ ಮುಂತಾದ ಅನೇಕ ಆಚರಣೆಗಳು ಇಂದಿಗೂ ಜಾರಿಯಲ್ಲಿದ್ದು ಮಹಿಳೆಯರ ಉಳಿವು ಹಾಗೂ ಅಭಿವೃದ್ಧಿಗಳಿಗೆ ತೀವ್ರವಾದ ಧಕ್ಕೆಯನ್ನುಂಟು ಮಾಡುತ್ತಿವೆ.

ಒಂದು ಐತಿಹಾಸಿಕ ದೃಷ್ಟಿಕೋನದಿಂದ ವಿಶ್ಲೇಷಿಸಿದಾಗ ಕಳೆದು ಹೋದ ಶತಮಾನಗಳಲ್ಲಿ ಸ್ತ್ರೀಯರ ಬದುಕಿನಲ್ಲಿ ಅನೇಕ ಬದಲಾವಣೆಗಳು ಬಂದು ಹೋಗಿವೆ ಎನಿಸಿದರೂ, ಸಮಕಾಲೀನ ಸಮಾಜದ ವಾಸ್ತವಗಳ ಹಿನ್ನೆಲೆಯಲ್ಲಿ ಭಾರತದ ಮಹಿಳೆಯರ ಪರಿಸ್ಥಿತಿಯನ್ನು ಪರಿಶೀಲಿಸಿದಾಗ, ಈ ಬದಲಾವಣೆಗಳು ಎಲ್ಲ ಮಹಿಳೆಯರಿಗೂ ಏಕ ರೀತಿಯಲ್ಲಿ ಅನ್ವಯಿಸುತ್ತಿಲ್ಲ ಎಂಬ ವಿಷಯ ಸ್ಪಷ್ಟವಾಗುತ್ತದೆ. ಮಹಿಳೆಯರ ಪರಿಸ್ಥಿತಿ ಬದಲಾಗುತ್ತಿದೆ ಎಂದು ಹೇಳುವುದು ಹೆಚ್ಚು ಸೂಕ್ತವೇ ಹೊರತು, ಎಲ್ಲವೂ ಬದಲಾಗಿದೆ ಎಂದು ಹೇಳುವುದು ಅತಿಯಾದ ಉತ್ಪ್ರೇಕ್ಷೆಯಾದೀತು. ಕಾನೂನು ಬದಲಾಗಬಹುದು, ಸರ್ಕಾರಿ ನೀತಿ ಹಾಗೂ ಧೋರಣೆಗಳು ಬದಲಾಗಬಹುದು, ಆದರೆ ಸಾಂಸ್ಕೃತಿಕ ಮೌಲ್ಯಗಳು ಹಾಗೂ ನಂಬಿಕೆಗಳು ಬದಲಾಗುವುದು ಸುಲಭಸಾಧ್ಯವಲ್ಲ. ಸಂಸ್ಕೃತಿಯಲ್ಲಿ ಹಾಸುಹೊಕ್ಕಾಗಿರುವ ಲಿಂಗ ಪೂರ್ವಗ್ರಹಗಳು ಮಹಿಳೆಯರ ಅಭಿವೃದ್ಧಿಯ ಮೇಲೆ ನಕಾರಾತ್ಮಕ ಪರಿಣಾಮವನ್ನು ಬೀರುವುದರಿಂದ ಒಂದು ಸಾಂಸ್ಕೃತಿಕ ದೃಷ್ಟಿಕೋನದಿಂದಲೂ ಮಹಿಳೆಯರ ಸ್ಥಾನವನ್ನು ವಿಶ್ಲೇಷಿಸುವುದು ಅವಶ್ಯ.

## ಭಾರತದ ಮಹಿಳೆಯರ-ಒಂದು ಸಾಂಸ್ಕೃತಿಕ ವಿಶ್ಲೇಷಣೆ

ಸಂಸ್ಕೃತಿ ಎನ್ನುವ ಪರಿಕಲ್ಪನೆಯಲ್ಲಿ ಭೂತ, ವರ್ತಮಾನ ಮತ್ತು ಭವಿಷ್ಯ-ಈ ಮೂರು ಕಾಲಗಳೂ ಅಡಗಿವೆ. ಹಿಂದಿನಿಂದ ಬಂದ ನಂಬಿಕೆಗಳು, ಆಚರಣೆಗಳು, ಮೌಲ್ಯಗಳು, ಸಾಧನ-ಸಲಕರಣೆಗಳ ಜೊತೆ-ಜೊತೆಗೆ ವರ್ತಮಾನ ಕಾಲದಲ್ಲಿ ಕಂಡು ಬರುವ ಜೀವನ ಶೈಲಿಗಳು, ಜೀವನವನ್ನು ಕುರಿತ ದೃಷ್ಟಿಕೋನಗಳು ಹಾಗೂ ಹೊಸ ಹೊಸದಾಗಿ ತಲೆದೋರುತ್ತಿರುವ ಬದಲಾವಣೆಗಳು ಇವೆಲ್ಲವೂ ಸಂಸ್ಕೃತಿಯ ಅಂಗಗಳು. ಭೂತ ಮತ್ತು ವರ್ತಮಾನ ಕಾಲಗಳ ಸಂಸ್ಕೃತಿ ಭವಿಷ್ಯದಲ್ಲಿ ನಿರ್ಮಾಣವಾಗುವ ಸಂಸ್ಕೃತಿಯನ್ನೂ ಪ್ರಭಾವಿಸುತ್ತದೆ. ಹೀಗೆ ಸಂಸ್ಕೃತಿ ಎಂದರೆ ಹಿಂದಿನಿಂದ ಬಂದ, ಇಂದಿರುವ ಹಾಗೂ ಮುಂದೆ ಸೇರಿಕೊಳ್ಳಲಿರುವ ಈ ಎಲ್ಲ ಭಾವನೆಗಳ ಹಾಗೂ ಆಚರಣೆಗಳ ಒಂದು ಸಮ್ಮಿಶ್ರಣ. ಸಂಸ್ಕೃತಿಯ ಬಗೆಗಿನ ನಮ್ಮ ಜ್ಞಾನವನ್ನು ನಾವು ಪಡೆಯುವುದು ಕಲಿಕೆ ಅಥವಾ ಅನುಭವದಿಂದ. ಮಾನವ

ನಿರ್ಮಿತವಾದ, ಕಾಲದಿಂದ ಕಾಲಕ್ಕೆ ಮಾರ್ಪಾಡಾಗುವ ಅಥವಾ ಉಳಿದುಕೊಂಡು ಬಂದ ಎಲ್ಲ ಅಭ್ಯಾಸ, ಆಚರಣೆ ಹಾಗೂ ನಂಬಿಕೆಗಳು ಸಂಸ್ಕೃತಿ ಎನ್ನುವ ಒಂದು ವ್ಯವಸ್ಥೆಯನ್ನು ನಿರ್ಮಿಸುತ್ತವೆ. ಈ ಸಂಸ್ಕೃತಿಯೇ ನಮ್ಮ ಜೀವನ ಧೋರಣೆಗಳನ್ನೂ, ಜೀವನ ಕ್ರಮವನ್ನೂ ಅಥವಾ ಜೀವನದ ಬಗೆಗಿನ ದೃಷ್ಟಿಕೋನವನ್ನು ಪ್ರಭಾವಿಸುವುದು.

ಯಾವುದೇ ಸಂಸ್ಕೃತಿಯ ಪ್ರಮುಖ ಲಕ್ಷಣಗಳಲ್ಲೊಂದು ಅದು ಸ್ತ್ರೀ ಮತ್ತು ಪುರುಷರಿಗೆ ನೀಡುವ ಪಾತ್ರಗಳು, ಜವಾಬ್ದಾರಿಗಳು ಮತ್ತು ಅವುಗಳನ್ನು ಕುರಿತು ತಳೆಯುವ ದೃಷ್ಟಿಕೋನ. ಸ್ತ್ರೀಯ ಹಲವು ಪಾತ್ರಗಳು ಆಕೆಯ ಜೈವಿಕ ರಚನೆಯಿಂದಲೂ ನಿರ್ಧರಿಸಲ್ಪಡುತ್ತವೆ. ಉದಾಹರಣೆಗೆ, ತಾಯ್ತನ. ತಾಯ್ತನಕ್ಕೆ ಸಂಬಂಧಿಸಿದ ಜವಾಬ್ದಾರಿಗಳನ್ನು ಸ್ತ್ರೀಯರು ಹೊರುತ್ತಾರೆಂಬುದು ಎಲ್ಲ ಸಂಸ್ಕೃತಿಗಳ ವಿಚಾರದಲ್ಲೂ ನಿಜವಾದರೂ, ಆ ಕಾರಣಕ್ಕಾಗಿ ಸ್ತ್ರೀಯರು ಸಕ್ರಿಯ ಸಾಮಾಜಿಕ ಜೀವನದಿಂದ ದೂರವಿರಬೇಕೆಂಬ ಅಭಿಪ್ರಾಯ ಹಾಗೂ ಆಚರಣೆ ಸಂಸ್ಕೃತಿ ನಿರ್ಮಿಸಿರುವ ಒಂದು ಮಿಥ್ಯೆ. ಮಕ್ಕಳ ಲಾಲನೆ-ಪಾಲನೆ, ಗೃಹಕೃತ್ಯ ಮುಂತಾದವು ಸ್ತ್ರೀಯರೇ ಮಾಡಬೇಕಾದ ಕೆಲಸಗಳೆಂದೂ, ಮನೆಯ ಹೊರಗೆ ದುಡಿಯುವುದು, ಮನೆಯ ಹಾಗೂ ಸಮಾಜದ ಅಧಿಕಾರ ವ್ಯವಸ್ಥೆಯನ್ನು ನಿರ್ವಹಿಸುವುದು ಪುರುಷರ ಜವಾಬ್ದಾರಿಗಳೆಂದು ನಿರ್ಧರಿಸುವುದು ಸಂಸ್ಕೃತಿಯೇ ಹೊರತು, ಅವರವರ ದೈಹಿಕ ರಚನೆಗಳಲ್ಲ. ಕಾಲದಿಂದ ಕಾಲಕ್ಕೆ ಸ್ತ್ರೀಯರ ಸಾಮರ್ಥ್ಯಗಳು ಹಾಗೂ ದೌರ್ಬಲ್ಯಗಳನ್ನು ಕುರಿತು ಸೃಷ್ಟಿಯಾಗಿರುವ ಮಿಥ್ಯೆಗಳು ಇಂದಿಗೂ ಆಚರಣೆಯಲ್ಲಿವೆ. ಸ್ತ್ರೀಯರಿಗೆ ಸಮಾಜದಲ್ಲಿ ದೊರೆಯುವ ಅಥವಾ ದೊರೆಯದಿರುವ ಅವಕಾಶಗಳು ಇವೆರಡೂ ಆಯಾ ಸಮಾಜದಲ್ಲಿ ಅಸ್ತಿತ್ವದಲ್ಲಿರುವ ಸಾಂಸ್ಕೃತಿಕ ವ್ಯವಸ್ಥೆಯಿಂದ ಪ್ರಭಾವಿತವಾದವು. ಕುಟುಂಬದ ಸಂಪನ್ಮೂಲಗಳ ಹಂಚಿಕೆಯಲ್ಲಿ ಕಂಡುಬರುವ ತಾರತಮ್ಯವನ್ನೇ ತೆಗೆದುಕೊಳ್ಳೋಣ. ಹೆಣ್ಣು ಮಕ್ಕಳ ಶಿಕ್ಷಣ, ಉದ್ಯೋಗ ಹಾಗೂ ಅಭಿವೃದ್ಧಿಗಳ ಬಗ್ಗೆ ಅನೇಕ ಕುಟುಂಬಗಳಲ್ಲಿ ಕಂಡುಬರುವ ನಕಾರಾತ್ಮಕ ಧೋರಣೆಗಳು, ಹೆಣ್ಣು ಮಕ್ಕಳನ್ನು ಅತಿ ಸಣ್ಣ ವಯಸ್ಸಿನಲ್ಲಿಯೇ ವಿವಾಹ ಮಾಡುವುದು, ಅವರು ಪತಿಗೃಹದಲ್ಲಿ ಎಷ್ಟೇ ಹಿಂಸೆ ಅಥವಾ ಕ್ರೌರ್ಯಗಳಿಗೆ ಒಳಗಾದಾಗಲೂ ಅದನ್ನು ಸಹಿಸಿಕೊಳ್ಳಬೇಕೆಂಬ ಉಪದೇಶವನ್ನು ಮಾಡುವುದು, ಮನೆಯ ಒಳಗಿನ ಕೆಲಸದ ಸಂಪೂರ್ಣ ಜವಾಬ್ದಾರಿಯನ್ನು ಅವಳು ಹೆಣ್ಣೆಂಬ ಏಕೈಕ ಕಾರಣಕ್ಕಾಗಿ ಹೇರುವುದು ಇವೆಲ್ಲವೂ ಪುರುಷ ಪ್ರಧಾನ ಸಂಸ್ಕೃತಿಯ ಕೊಡುಗೆಗಳೇ ಆಗಿವೆ. ಹೆಣ್ಣಿಗೆ ಶಿಕ್ಷಣ ನೀಡಿದರೆ ಅದರ ಲಾಭ ತಮಗೆ ಸಿಗದು ಎನ್ನುವ ಅನೇಕ ಪೋಷಕರು ತಮ್ಮ ಹೆಣ್ಣು ಮಕ್ಕಳ ಸಹಜ ಪ್ರತಿಭೆಯನ್ನು ದಮನಮಾಡಲು ಹೇಸುವುದಿಲ್ಲ. ಅದೇ ಗಂಡು ಮಕ್ಕಳ ವಿಚಾರದಲ್ಲಿ ಇವರ ಧೋರಣೆಗಳೇ ಬೇರೆ. ಕೇವಲ ಕುಟುಂಬದಲ್ಲಷ್ಟೇ ಅಲ್ಲದೆ ಇತರ ಸಾಮಾಜಿಕ ಸಂಸ್ಥೆಗಳಲ್ಲೂ ಸ್ತ್ರೀಯನ್ನು ಕುರಿತ ನಕಾರಾತ್ಮಕ ಸಾಂಸ್ಕೃತಿಕ ಮೌಲ್ಯಗಳು ತಮ್ಮ ಪ್ರಭಾವವನ್ನು ಬೀರುತ್ತಿವೆ. ಹೆಣ್ಣು ಮನೆಯಲ್ಲಿ ಮಾಡುವ ಆದಾಯರಹಿತ ದುಡಿಮೆಯನ್ನು ಅಪ್ರಯೋಜಕವೆಂದು ಅಲ್ಲಗಳೆಯುವುದು, ಫಗುಪರ ಕೆಲಸವನ್ನು

ಉತ್ಪಾದಕವೆಂದೂ, ಮಹಿಳೆಯರ ಕೆಲಸವನ್ನು ಅನುತ್ಪಾದಕವೆಂದೂ ಪರಿಗಣಿಸುವುದು, ಮಹಿಳೆಯರು ಎಷ್ಟೇ ಶ್ರಮಜೀವಿಗಳಾದರೂ ಅವರನ್ನು ದೈಹಿಕವಾಗಿ ದುರ್ಬಲರೆಂದು ದೂರಿ ಸಲವು ಕೆಲಸಗಳು ಅವರಿಂದಾಗದು ಎಂಬ ತಪ್ಪು ತೀರ್ಮಾನಕ್ಕೆ ಬಂದು ಅಂಥ ಅವಕಾಶಗಳಿಂದ ಅವರನ್ನು ದೂರವಿಡುವುದು ಇವೆಲ್ಲವೂ ಸಂಸ್ಕೃತಿಯ ಕೊಡುಗೆಯೇ ಆಗಿದೆ. ಸ್ತ್ರೀಪ್ರಧಾನ ಸಂಸ್ಕೃತಿಯಲ್ಲಿ ಮಹಿಳೆಯರಿಗೆ ಗೌರವಯುತವಾದ ಸ್ಥಾನವಿದ್ದರೂ ಇಂದು ಅದರ ಪ್ರಭಾವ ಕಡಿಮೆಯಾಗುತ್ತಿದ್ದು, ಪುರುಷ ಪ್ರಾಧಾನ್ಯತೆಯನ್ನು ಎತ್ತಿ ಹಿಡಿಯುವ ಸಂಸ್ಕೃತಿಯೇ ಮೇಲುಗೈ ಪಡೆದಿದೆ. ಹೀಗೆ ಸಮಾಜದ ಪ್ರತಿಯೊಂದು ಸಂಸ್ಥೆಯಲ್ಲೂ ಲಿಂಗ ವ್ಯವಸ್ಥೆಗೆ ಸಂಬಂಧಿಸಿದ ಭಾವನೆಗಳು ಹಾಗೂ ಆಚರಣೆಗಳ ಮೇಲೆ ಸಂಸ್ಕೃತಿಯ ಪ್ರಭಾವ ಬಹುಮಟ್ಟಿಗೆ ಜಾಗೃತವಾಗಿದೆ.

ಭಾರತೀಯ ಸಮಾಜದಲ್ಲಿ ಲಿಂಗ ಸಮಾನತೆಯನ್ನು ಸ್ಥಾಪಿಸುವ ಯಾವುದೇ ಪ್ರಯತ್ನ ಎರಡು ಗುರಿಗಳನ್ನು ಏಕಕಾಲದಲ್ಲಿ ಸಾಧಿಸಬೇಕಾಗುತ್ತದೆ. ಮೊದಲನೆಯದು, ಕಾನೂನುಗಳು, ಅಭಿವೃದ್ಧಿ ಅವಕಾಶಗಳು, ಹೊಸ ಹೊಸ ದೃಷ್ಟಿಕೋನಗಳು ಇವುಗಳನ್ನು ರೂಪಿಸುವುದು. ಎರಡನೆಯದು, ನಮ್ಮ ಸಂಸ್ಕೃತಿಯ ಆಳದಲ್ಲಿ ಬೇರು ಬಿಟ್ಟು ಮೇಲು ಮೇಲಿನ ಪ್ರಯತ್ನಗಳಿಗೆ ಬಗ್ಗದ ಲಿಂಗ ಪೂರ್ವಗ್ರಹಗಳನ್ನು ಕಿತ್ತೊಗೆಯುವುದು. ಸಮಾಜದ ಮೂಲಭೂತ ರಚನೆಯಲ್ಲಿ ಬದಲಾವಣೆಗಳು ಕಂಡುಬಂದಾಗ ಮಾತ್ರ ಲಿಂಗ ಸಮಾನತೆಯನ್ನು ಆಧರಿಸಿದ ಸಮಾಜದ ನಿರ್ಮಾಣ ಸಾಧ್ಯ.



# ಮಾಂಗಲ್ಯಂ ತಂತು ನಾನೇನ ....

ಮನೋರಮಾ ಎಂ. ಭಟ್

ಸ್ತ್ರೀಯರನ್ನು ಅಬಲೆಯರು ಎಂದು ಕರೆದ ನಮ್ಮ ಸಮಾಜ ಆಕೆಗೆ ಆರ್ಥಿಕ ಸ್ವಾತಂತ್ರ್ಯವನ್ನು ಕೊಡಲಿಲ್ಲ. ಸರಿಯಾದ ಶಿಕ್ಷಣವನ್ನೂ ನೀಡದೆ ಸ್ತ್ರೀಯರು ಸಾವಿರಾರು ವರ್ಷಗಳಿಂದ ಅಜ್ಞಾನಿಗಳಾಗಿಯೇ ಉಳಿಯುವಂತೆ ಮಾಡಿತ್ತು. ಇತ್ತೀಚೆಗೆ ಕರ್ನಾಟಕ ಸರಕಾರವು ಮಗಳಿಗೂ ಮಗನಿಗಿರುವಂತೆ ಪಿತ್ರಾರ್ಜಿತದಲ್ಲಿ ಸಮಾನವಾದ ಹಕ್ಕನ್ನು ಕೊಟ್ಟಿದೆಯಾದರೂ ಆ ಹಕ್ಕು ನಿಜ ಜೀವನದಲ್ಲಿ ಸಹಜವಾಗಿ ದೊರಕಲು ಇನ್ನೂ ಆರಂಭವಾಗಿಲ್ಲ. ಹೆಣ್ಣು ಸಹಜವಾಗಿ ಭಾವನಾಜೀವಿ. ಆಕೆಗೆ ತವರಿನ ಸಂಬಂಧವು ಬಹಳ ಅಪ್ಯಾಯಮಾನ. ಈ ವಾತ್ಸಲ್ಯಗುಣವು ಹೆಣ್ಣು ಮಕ್ಕಳನ್ನು ಈಗಲೂ ಮುಗ್ಧರನ್ನಾಗಿ ಮಾಡುತ್ತದೆ. ತನ್ನ ಜನ್ಮಸಿದ್ಧ ಹಕ್ಕಿನ ಪಾಲಿಗಿಂತಲೂ ಹೆಚ್ಚು ಆಕೆಗೆ ಹೆತ್ತವರ, ಸಹೋದರರ ಪ್ರೀತಿ ವಿಶ್ವಾಸಗಳು ಬೇಕಾಗುತ್ತವೆ. ಈ ಕಾರಣಗಳಿಂದ ಹೆಣ್ಣು ತನ್ನ ಪಿತ್ರಾರ್ಜಿತದ ಹಕ್ಕಿಗಾಗಿ ಅಷ್ಟು ಹಾತೊರೆಯುವುದಿಲ್ಲ. ಆದರೆ, ಹಣಕ್ಕಿಂತಲೂ ಹೆಚ್ಚು ತಮ್ಮ ಜೀವನದಲ್ಲಿ ಹೆಣ್ಣು ಮಕ್ಕಳು ಮಹತ್ವವನ್ನು ಕೊಡುವ ವಿಷಯ ಒಂದಿದೆ. ಬಹುಶಃ ಅದನ್ನು ನಮ್ಮ ಸಾಮಾಜಿಕ ಮುಖಂಡರು ತಿಳಿಯಲಿಲ್ಲ. ಅಥವಾ ತಿಳಿದರೂ ಪುರುಷರು ಅದಕ್ಕೆ ಮಹತ್ವ ಕೊಡಲಿಲ್ಲ. ಸ್ತ್ರೀಯರ ಮತ್ತು ಪುರುಷರ ಬದುಕಿನಲ್ಲಿ ವೈವಾಹಿಕ ಜೀವನಕ್ಕೆ ಅತ್ಯಂತ ದೊಡ್ಡ ಸ್ಥಾನವೆಂದು ಎಲ್ಲರೂ ಒಪ್ಪುತ್ತಾರಷ್ಟೆ....

ಮೊತ್ತ ಮೊದಲು ವಿವಾಹವೆಂದರೆ ಏನು ಎಂದು ಸ್ವಲ್ಪ ತಿಳಿಯೋಣ. 'ವಿವಾಹ' ಎಂಬ ಶಬ್ದಕ್ಕೆ 'ವಿಶಿಷ್ಟಂ-ವಹನಂ' ಎಂದರೆ ವಿಶಿಷ್ಟ ರೀತಿಯ ಸೇರುವಿಕೆ ಎಂದು ಹೇಳುತ್ತಾರೆ. ವಿವಾಹವು ಧರ್ಮ ಪ್ರಜಾಸಂಪತ್ತಿಗಾಗಿ ಕೈಕೊಳ್ಳುವ ದಾಂಪತ್ಯ. ಒಂದೇ ದೇಹದ ಎರಡು ಅಂಶಗಳು ಒಂದಾಗುವುದೆಂದು ಈ ಶಬ್ದದ ಅರ್ಥ ಎಂದೂ ಬಲ್ಲವರು ಹೇಳುತ್ತಾರೆ. ವಿವಾಹ ಪೂರ್ವದಲ್ಲಿ ಹೆತ್ತವರ ಮನೆಗೆ ಸೇರಿದ ಹೆಣ್ಣು ವಿವಾಹದ ಅನಂತರ ಗಂಡಿನ ಮನೆಯ ಸದಸ್ಯೆಯಾಗುತ್ತಾಳೆ. ಇದನ್ನು ಸಮಾಜ ಮತ್ತು ಸರಕಾರ ಎರಡೂ ಮಾನ್ಯಮಾಡುತ್ತವೆ. ಕೆಲವರಲ್ಲಿ ವಿವಾಹವು 'ಅಗ್ನಿಸಾಕ್ಷಿ'ಯಾಗಿದ್ದರೆ, ಮತ್ತೆ ಕೆಲವರಲ್ಲಿ 'ಜಲಸಾಕ್ಷಿ'ಯಾಗಿ ವಿವಾಹ ನೆರವೇರುತ್ತದೆ. ವೈದಿಕರನ್ನು ಬರಮಾಡಿ ಅವರಿಂದ ವಿವಾಹ ಸಂಸ್ಕಾರಗಳನ್ನು ಮಾಡಿಸಿಕೊಳ್ಳುವುದು ಸಮಾಜದ ಕೆಲವು ವರ್ಗಗಳಿಗೆ ಮಾತ್ರ ಹಿಂದೆ ಸೀಮಿತವಾಗಿದ್ದರೆ, ಇತ್ತೀಚೆಗೆ ಇತರ ಹಿಂದೂ ಮತಾನುಯಾಯಿಗಳೂ ವೈದಿಕರನ್ನು ಆಮಂತ್ರಿಸಿ ಹೋಮ-ಹವನಗಳನ್ನು ಮಾಡಿಸಿ, ಮಂತ್ರ- ಶ್ಲೋಕಗಳ ಸಮ್ಮುಖದಲ್ಲಿ

ಬಾಳಸಂಗಾತಿಗಳಾಗುತ್ತಾರೆ. ಆದರೂ ನಾವು ವಿವಾಹದಲ್ಲಿ ವರನು ವಧುವಿನ ಕೊರಳಿಗೆ ಮಾಂಗಲ್ಯವನ್ನು ಕಟ್ಟುವಾಗ ಹೇಳುವ ಸರಳ, ಸುಂದರ ಶ್ಲೋಕವನ್ನು ಗಮನಿಸುವುದೇ ಇಲ್ಲ. ಅವರ ಅರ್ಥವನ್ನಂತೂ ತಿಳಿಯುವುದೇ ಇಲ್ಲ. ವರನು ತನ್ನ ಕೈಯಲ್ಲಿ ಮಾಂಗಲ್ಯವನ್ನು ಹಿಡಿದುಕೊಂಡು ಹೀಗೆ ಹೇಳುತ್ತಾನೆ- " ಮಾಂಗಲ್ಯ ತಂತು ನಾನೇನ... ಮಮ ಜೀವನ ಹೇತುನಾ ... ಕಂಠೇ ಬಧ್ನಾಮಿ ಸುಭಗೇ .... ತ್ವಂ ಜೀವ ಶರದಃಶತಂ" ಕನ್ನಡದಲ್ಲಿ ಈ ಶ್ಲೋಕವನ್ನು ಹೀಗೆ ಅನುವಾದಿಸಬಹುದು- " ಈ ಮಂಗಲಸೂತ್ರವನ್ನು ನಾನು ನನ್ನ ಜೀವನದ ಶುಭ ಸಂಕೇತವಾಗಿ, ಅಥವಾ ನನ್ನ ಜೀವನದ ಸಾರ್ಥಕತೆಗಾಗಿ, ಮತ್ತು ಪರಿಪೂರ್ಣತೆಗಾಗಿ, ಎಲೈ ಶುಭಾಂಗಿಯೇ, ನಿನ್ನ ಕೊರಳಲ್ಲಿ ಕಟ್ಟುತ್ತಿದ್ದೇನೆ. ಇದರ ಜೊತೆಯಲ್ಲಿ ನೀನು ನೂರು ವರ್ಷ ಕಾಲ ಬಾಳು". ಪುರುಷನು ತನ್ನ ಧಾರ್ಮಿಕ ಜೀವನದಲ್ಲಿ ಪರಿಪೂರ್ಣತೆಯನ್ನು ಹೊಂದಬೇಕಾದರೆ ಆತನಿಗೆ ಪತ್ನಿ ಬೇಕು. ಆತ ನಡೆಸುವ ಎಲ್ಲಾ ಪೂಜೆ ಪುನಸ್ಕಾರಗಳಲ್ಲಿ ಆತನಿಗೆ ಪತ್ನಿ ಬೇಕೇ ಬೇಕು. ಪತಿ ಇಲ್ಲದ ಪತ್ನಿಗೆ ಹೇಗೆ ನಮ್ಮ ಧಾರ್ಮಿಕ ಜಗತ್ತಿನಲ್ಲಿ ಸ್ಥಾನ ಇಲ್ಲವೋ ಹಾಗೆಯೇ ಪತ್ನೀ ರಹಿತನಾದವನೂ ಧಾರ್ಮಿಕ ಜಗತ್ತನ್ನು ಪ್ರವೇಶಿಸಲಾರ. ಆದರೂ.... ನಮ್ಮ ಸಮಾಜ ಪುರುಷ ಪ್ರಧಾನವಲ್ಲವೇ? ಪತ್ನಿಯು ಕಾಲವಾದಾಗ ಪತಿ ತಾನು ವಿವಾಹ ಯೋಗ್ಯನೆಂದು ತಾನೇ ಭ್ರಮಿಸಿಕೊಂಡು ಅಥವಾ ತಾನೇ ನಿರ್ಧರಿಸಿಕೊಂಡು ಅರುವತ್ತು ದಾಟಿದವನೂ ಎರಡನೇ ವಿವಾಹವನ್ನು ಮಾಡಿಕೊಂಡು ಪುನಃ ಗೃಹಸ್ಥಾಶ್ರಮವನ್ನು ಪ್ರವೇಶಿಸಿ, 'ವಿಧುರ'ನಿಗೆ ಇರುವ ಧಾರ್ಮಿಕ ಕಟ್ಟುಕಟ್ಟಳೆಗಳಿಂದ ಜಾರಿಕೊಳ್ಳುತ್ತಾನೆ.

ಆದರೆ.... "ನನ್ನ ಜೀವನದ ಬದುಕಿನ ಪರಿಪೂರ್ಣತೆಗಾಗಿ ಈ ಮಂಗಲಸೂತ್ರವನ್ನು ನಿನ್ನ ಕಂಠದಲ್ಲಿ ಕಟ್ಟುತ್ತಿದ್ದೇನೆ. ನೀನು ಇದರ ಜೊತೆಗೆ ನೂರು ವರ್ಷ ಕಾಲ ಸುಖವಾಗಿ ಬಾಳು" ಎನ್ನುವ ಆಶಯವನ್ನು ಹೊತ್ತ ಮಂಗಲಸೂತ್ರವನ್ನು- ದುರದೃಷ್ಟವಶಾತ್ ಆತ ನಿಧನ ಹೊಂದಿದರೆ, ನಮ್ಮ 'ಧರ್ಮ' ಆ ಹೆಣ್ಣಿನ ಕಂಠದಿಂದ ಮಾಂಗಲ್ಯವನ್ನೂ, ಅದರ ಜೊತೆಗೆ- ವಿವಾಹಕ್ಕೂ ಹಣೆಯಲ್ಲಿರುವ ಕುಂಕುಮಕ್ಕೂ ಮುಡಿಯಲ್ಲಿರುವ ಹೂಗಳಿಗೂ ಏನೇನೂ ಸಂಬಂಧವಿಲ್ಲದೆ ಇದ್ದರೂ ಇವುಗಳನ್ನು ತೆಗೆಯತಕ್ಕದ್ದು ಎಂದು ವಿಧಿಸಿದ್ದು ಯಾಕೆ? ಈ ಪ್ರಶ್ನೆಯನ್ನು ಎಂದಾದರೂ ನಿಮಗೆ ನಿವೇ ಹಾಕಿಕೊಂಡಿದ್ದೀರಾ?

ಪತ್ನಿಯಿಂದ ಹುಟ್ಟಿದ ಮಕ್ಕಳಿಗೆ ತಂದೆ ಸತ್ತಾಗ ಯಾವ ರೀತಿಯ ಅಸ್ಪೃಶ್ಯತೆಯೂ ಕಾಡದೆ ಇರುವಾಗ ಕುಟುಂಬವನ್ನು ಉದ್ಧರಿಸಿ, ವಂಶವನ್ನು ಬೆಳೆಯಿಸಿಕೊಟ್ಟ ಆ ಬಡಪಾಯಿ ಸ್ತ್ರೀಯು ಮಾತ್ರ ಧಾರ್ಮಿಕವಾಗಿ, ಸಾಮಾಜಿಕವಾಗಿ ಯಾವಜ್ಜೀವವೂ ನೋವನ್ನು ಉಣ್ಣಬೇಕೆ? ಆಕೆ ಅಸ್ಪೃಶ್ಯಳಾಗಬೇಕೆ? ಅಮಂಗಲೆಯಾಗಬೇಕೆ?

ಗೌರವವನ್ನು ಕೊಟ್ಟು ಸ್ವೀಕರಿಸುವುದು ಪ್ರಜ್ಞಾವಂತರ ಲಕ್ಷಣ. ಇದರಲ್ಲಿ ಒತ್ತಾಯದ ಅಗತ್ಯವಿಲ್ಲ. ನಾನು ನಿರೀಕ್ಷಿಸುವುದು ಕೇವಲ ಮಾನವೀಯತೆ- ಸಹೃದಯತೆ-ಸಹಕಾರ ಇಷ್ಟು ಮಾತ್ರ. ಸ್ತ್ರೀಯರನ್ನು ಮನುಷ್ಯರೆಂದು ಪರಿಗಣಿಸುವುದನ್ನು ಮಾತ್ರ.

ಸ್ತ್ರೀಯರ ಶೋಷಣೆಯಲ್ಲಿ ವೈಧವ್ಯದ ಆಚರಣೆಯು ಅತ್ಯಂತ ಅಮಾನವೀಯವಾದದ್ದು - ನನಗೆ ಮತ್ತು ನನ್ನಂತೆ ವಿಚಾರ ಮಾಡುವ ಮಂದಿಗೆ, ವಿಧವೆಯನ್ನು ಸಮಾಜ ಕಾಣುವ ರೀತಿ ಮನಕ್ಕೆ ಸದಾ ಚುಚ್ಚುತ್ತದೆ.

ಹಾಗೆ ನೋಡಿದರೆ 'ಧರ್ಮ' ದ ಪ್ರಕಾರ ವಾಗ್ದಾನವಿತ್ತು ಪತ್ನಿಯ ಕೊರಳಿಗೆ ಕಟ್ಟಿದ ಮಂಗಲಸೂತ್ರದ ಮೇಲೆ ಆಕೆಗೆ ಸಂಪೂರ್ಣ ಒಡೆತನದ ಹಕ್ಕು ಇದೆಯಲ್ಲವೆ?

ಆದರೂ ಧರ್ಮ (ಶ್ರುತಿ) ಒಂದು, ಶಾಸ್ತ್ರ ಮತ್ತೊಂದು, ರೂಢಿಯೇ ಇನ್ನೊಂದು, ಎನ್ನುವುದನ್ನೂ ಕೇಳಿರುವ ನಾನು ಮೊತ್ತಮೊದಲು ಧರ್ಮ ಎಂಬುದನ್ನು ವಿದ್ವಾಂಸರು ಹೇಗೆ ವ್ಯಾಖ್ಯಾನಿಸಿದ್ದಾರೆಂದು ಹೇಳಬೇಕು. ಧರ್ಮ ಎಂದರೆ ಕೇವಲ ಶ್ರುತಿ ಮತ್ತು ಸ್ಮೃತಿವಾಕ್ಯಗಳಿಂದ ಪೂರ್ಣವಾಗುವುದಿಲ್ಲ. ಅದಕ್ಕೆ ಸದಾಚಾರವೂ ಪುಷ್ಟಿಯನ್ನು ಕೊಡಬೇಕು. ಶ್ರುತಿ ಸ್ಮೃತಿಃ ಸದಾಚಾರಃ ಸ್ವಸ್ಯಚಃ ಪ್ರಿಯಮಾತ್ಮನಃ ಎಂದು ಧರ್ಮದ ಲಕ್ಷಣವನ್ನು ಹೇಳಿದ ಪ್ರಾಚೀನರಿಗೆ ಕಾಲದ ಅವಶ್ಯಕತೆಯನ್ನು ಹೊಂದಿಕೊಂಡು ಧರ್ಮದ ಸ್ವರೂಪವೂ ಬದಲಾಗಬೇಕಾದೀತೆಂಬ ಪ್ರಜ್ಞೆ ಇತ್ತು. 'ಸ್ವಸ್ಯಚಃ ಪ್ರಿಯಮಾತ್ಮನಃ' ಎಂದರೆ ಕೇವಲ ತನ್ನ ಮನಸ್ಸಿಗೆ ಪ್ರಿಯವಾದದ್ದು ಎಂದರ್ಥವಲ್ಲ. ಒಂದು ಸಮಾಜದ ಆರೋಗ್ಯಕರವಾದ ಬೆಳವಣಿಗೆಗೆ ಅಗತ್ಯವಾದ 'ಮಾನವೀಯತೆ' ಎಂದೇ ನಾನು ತಿಳಿಯುತ್ತೇನೆ. ಇಂತಹ ಮಾನವೀಯತೆ ಇಲ್ಲದಿದ್ದರೆ 'ಸರ್ವೇಜನಾಃ ಸುಖಿನೋ ಭವಂತು' ಎಂಬ ಮಾತು ಕೇವಲ ಬಾಯ್ಬಡಕತನವಾಗುತ್ತದೆ.



# ವಚನ ಚಳುವಳಿಯ ನಂತರ ವೀರಶೈವ ಸಮಾಜದ ಮಹಿಳೆಯ ಸ್ಥಿತಿ-ಗತಿ

ವನಮಾಲಾ ಕಟ್ಟೀಗೌಡರ

ಮೂಲತಃ ದ್ರಾವಿಡ ಪರಂಪರೆಯ ಜೀವನ ವಿಧಾನದಿಂದ ರೂಪು ತಳೆದ ಭಾರತೀಯ ಸಂಸ್ಕೃತಿ ಆರ್ಯರ ಆಗಮನದಿಂದ ಅನೇಕ ಬದಲಾವಣೆಗಳಿಗೆ ಒಳಗಾಗಬೇಕಾಯಿತು. ತತ್ಪರಿಣಾಮವಾಗಿ ಒಂದು ಹೊಸ ಸಮ್ಮಿಶ್ರ ಸಂಸ್ಕೃತಿ ರೂಪು ತಳೆಯಿತು. ಮೊದಲಿದ್ದ 'ಮಾತೃಪ್ರಧಾನ' ಕುಟುಂಬ ವ್ಯವಸ್ಥೆ ಅಳಿದು 'ಪಿತೃಪ್ರಧಾನ' ಕುಟುಂಬ ವ್ಯವಸ್ಥೆ ಚಾಲ್ತಿಗೆ ಬಂತು. ಸಮಾಜದಲ್ಲಿ ಮಹಿಳೆಯರು ಎರಡನೆಯ ದರ್ಜೆಯ ಪ್ರಜೆಗಳಾಗಿ ಬದುಕಬೇಕಾದ ಅನಿವಾರ್ಯತೆ ತಲೆದೋರಿತು. ಇದನ್ನು 'ಮಹಿಳೆಯ ಸಾಮಾಜಿಕ ಸ್ಥಿತ್ಯಂತರದ ಮೊದಲ ಘಟ್ಟ' ಎನ್ನಬಹುದು. ಇಲ್ಲಿಂದ ಮುಂದೆ ಮಹಿಳೆ 'ಆಟಕ್ಕುಂಟು ಲೆಕ್ಕಕ್ಕಿಲ್ಲ' ಎಂಬಂತಹ ವಿಚಿತ್ರ ನಿಯಮಗಳಡಿ ತನ್ನ ಅಸ್ತಿತ್ವಹರಣಗೊಳಿಸಿಕೊಂಡು 'ಪರಾವಲಂಬಿ' ಬದುಕನ್ನು ನಡೆಸಬೇಕಾಯಿತು. ಇಂತಹ ಒಂದು ಸಂಕೀರ್ಣ ಪರಿಸ್ಥಿತಿಯಲ್ಲಿ ಬದುಕುತ್ತಿದ್ದ ಮಹಿಳೆಗೆ ತನ್ನ ಅಭಿವ್ಯಕ್ತಿಯನ್ನು ಅನಾವರಣಗೊಳಿಸಲು, ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ಕರ್ನಾಟಕದಲ್ಲಿ ನೆರವಾದದ್ದು ಹನ್ನೆರಡನೇ ಶತಮಾನದ ವಚನ ಚಳುವಳಿ. ಹನ್ನೆರಡನೇ ಶತಮಾನ ಕನ್ನಡ ನಾಡಿನ ಸಾಹಿತ್ಯ, ಸಮಾಜ, ಧಾರ್ಮಿಕ ಪರಂಪರೆಗೆ ತನ್ನದೇ ಆದ ಒಂದು ಕ್ರಾಂತಿಕಾರಕ ಕೊಡುಗೆಯನ್ನಿತ್ತಿದೆ. ಜಿಡ್ಡುಗಟ್ಟಿದ್ದ ಸಾಮಾಜಿಕ ಪರಂಪರೆಯನ್ನು ವೈಚಾರಿಕ ಮೂಸೆಯಲ್ಲಿ, ಸಮಾನತೆಯ ನೆಲೆಗಟ್ಟಿನ ಮೇಲೆ ಕಟ್ಟಲು ಅದು ಶ್ರಮಿಸಿದೆ. ಅಲ್ಲಿಯವರೆಗೂ ತೆರೆಮರೆಗೆ ಸಂದು ಹೋದ ಮಹಿಳೆಯನ್ನು ವೇದಿಕೆಗೆ ಕರೆತಂದು, ಪುರುಷರಿಗೆ ಸರಿಸಮಾನವಾದ ಸ್ಥಾನಮಾನ ನೀಡಿದ್ದು ಈ ಚಳುವಳಿಯ ಹಿರಿಮೆ. ಅಂತೆಯೇ ವಚನ ಚಳುವಳಿಯಲ್ಲಿ ಪುರುಷರಷ್ಟೇ ಸ್ತ್ರೀಯರೂ ಸಕ್ರಿಯವಾಗಿ ಪಾಲ್ಗೊಂಡು ತಮ್ಮ ಪ್ರತಿಭೆ, ಪಾಂಡಿತ್ಯ ತೋರಲು ಸಾಧ್ಯವಾಯಿತು.

ಕನ್ನಡ ನಾಡಿನ ಮೊದಲ ಕವಯತ್ರಿ ಅಕ್ಕಮಹಾದೇವಿ ವಚನ ಚಳುವಳಿಯಲ್ಲಿ ಮಿಂಚಿದ ಒಂದು ವಿಶಿಷ್ಟ ಪ್ರಭೆ. ಕಾಳವ್ವೆ, ಸೋಮವ್ವೆ, ನೀಲಮ್ಮ, ಗಂಗಾಂಬಿಕೆ, ಅಕ್ಕ ನಾಗಮ್ಮ, ಮುಕ್ತಾಯಕ್ಕ, ಲಕ್ಕಮ್ಮ.... ಮುಂತಾದ ಅನೇಕ ವಚನಕಾರ್ತಿಯರು ಅನುಭವ ಮಂಟಪದಲ್ಲಿ ಪುರುಷರಿಗೆ ಸಮಾನ ವೇದಿಕೆಯಲ್ಲಿ ಪಾಲ್ಗೊಂಡು ವಚನಗಳ ಮೂಲಕ ನಿರ್ಭೀತಿಯಿಂದ ತಮ್ಮ ಅಭಿಪ್ರಾಯಗಳನ್ನು ಮಂಡಿಸುತ್ತಿದ್ದರು ಎಂಬುದನ್ನು ತಿಳಿದಾಗ ವಚನ ಚಳುವಳಿ ಸ್ತ್ರೀಯರಿಗೆ ನೀಡಿದ ಸಮಾನತೆಯ ಅರಿವಾದೀತು. "ಈಸಕ್ಕಿಯಾಸೆ

ನಿಮಗೇಕೆ?'' ಎಂದು ಗಂಡನ ಅತಿಯಾಸೆಯನ್ನು ಖಂಡಿಸಿದ ಲಕ್ಕಮ್ಮ ತನ್ನ ಪತಿ ಮಾರಯ್ಯನೊಂದಿಗೆ ಅನ್ಯೋನ್ಯತೆ ಸಾಧಿಸಿಯೂ ಗಂಡನ ನೆರಳಿನಿಂದ ದೂರ ನಿಂತು ತನ್ನದೇ ಆದ ವ್ಯಕ್ತಿತ್ವವನ್ನು ರೂಪಿಸಿಕೊಂಡವಳು. ಇನ್ನು ಅಕ್ಕಮಹಾದೇವಿಯಾದರೋ ಸಂಪ್ರದಾಯದ ಸಂಕೋಲೆಗಳನ್ನು ಧಿಕ್ಕರಿಸಿ ಶತಶತಮಾನಗಳಿಂದಲೂ ಶೋಷಣೆಗೊಳಗಾದ ಸ್ತ್ರೀಯರ ಪ್ರತಿಭಟನೆಯ ಧ್ವನಿಗೆ ನಾಂದಿ ಹಾಡಿದವಳು. ಆ ಮೂಲಕ 'ಮಹದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ' ಎಂದು ಅನುಭವ ಮಂಟಪದ ಶರಣ ಸಮೂಹದಿಂದ ಪ್ರಶಂಸೆಗೆ ಪಾತ್ರಳಾದವಳು.

ಹೀಗೆ ಸಮಾನತೆಯ ಪರಿಕಲ್ಪನೆಯಲ್ಲಿ ಮೂಡಿ ಬಂದ ವಚನ ಚಳುವಳಿ ಸ್ತ್ರೀ ಸಮಾನತೆಯನ್ನು ಎತ್ತಿ ಹಿಡಿದ ಪರಿಣಾಮವಾಗಿ ವೀರಶೈವ ಧರ್ಮದಲ್ಲಿ ಮಹಿಳೆಯರಿಗೆ ಸಮಾನ ಅವಕಾಶಗಳು ಲಭಿಸಿ ಅವಳು ಎಲ್ಲ ಕ್ಷೇತ್ರಗಳಲ್ಲಿಯೂ ತನ್ನ ಪ್ರತಿಭೆ, ಶಕ್ತಿ, ಸಾಮರ್ಥ್ಯಗಳನ್ನು ತೋರಲು ಸಾಧ್ಯವಾಯಿತು. ನಮ್ಮ ಭಾರತೀಯ ಸಾಮಾಜಿಕ ಪರಂಪರೆಯಲ್ಲಿ ಮೊಟ್ಟ ಮೊದಲ ಬಾರಿಗೆ ಮಹಿಳೆಯರಿಗೆ ಸಮಾನತೆಯನ್ನು ಕಲ್ಪಿಸಿಕೊಟ್ಟ ಹಿರಿಮೆಗೆ ಪಾತ್ರವಾದ ವೀರಶೈವ ಸಮಾಜ ನಂತರದ ದಿನಗಳಲ್ಲೂ ಆ ಸಮಾನತೆಯನ್ನು ಉಳಿಸಿಕೊಂಡು ಬಂದಿದೆಯೆ? ವಚನ ಚಳುವಳಿಯ ನಂತರವೂ ವೀರಶೈವ ಸಮಾಜದಲ್ಲಿ ಮಹಿಳೆಯರ ಸ್ಥಿತಿ ಗತಿಗಳು ಮೊದಲಿನ ಹಾಗಿದೆಯೆ? ವಚನ ಚಳುವಳಿಯ ಸ್ತ್ರೀ ಸಮಾನತೆಯ ಪ್ರಕ್ರಿಯೆಯ ಹಿನ್ನೆಲೆಯಲ್ಲಿ ಉದ್ಭವಿಸುವ ಈ ರೀತಿಯ ಕುತೂಹಲಕಾರಿ ಪ್ರಶ್ನೆಗಳಿಗೆ ಪ್ರಸ್ತುತ ಸಾಮಾಜಿಕ ವ್ಯವಸ್ಥೆ ಯಾವ ಬಗೆಯ ಉತ್ತರಗಳನ್ನು ಕೊಡಲು ಶಕ್ಯವಾಗಿದೆ? ಇದಕ್ಕಾಗಿ ನಾವು ಮತ್ತೆ ಮತ್ತೆ ವಚನ ಚಳುವಳಿಯ ವೈಫಲ್ಯದತ್ತಲೇ ನೋಡಬೇಕಾಗುತ್ತದೆ. ಯಾಕೆಂದರೆ ವಚನ ಚಳುವಳಿ ಸ್ತ್ರೀಯರನ್ನೊಳಗೊಂಡು ಬೆಳೆದ ಚಳುವಳಿಯಾದ್ದರಿಂದ ಅದರ ವೈಫಲ್ಯದೊಂದಿಗೆ ಮಹಿಳೆಯ ಸಾಮಾಜಿಕ ಹಿನ್ನಡೆಯ ವಿದ್ಯಮಾನಗಳು ಪುನರಾಗಮನಗೊಂಡಿವೆ.

ಕಲ್ಯಾಣದ ಕ್ರಾಂತಿಯ ಘಟನೆಗಳಾದ ಬಿಜ್ಜಳನ ಅವಸಾನ, ಬಸವಣ್ಣನವರ ನಿರ್ಗಮನ..., ಮುಂತಾದವುಗಳು ಅಸಂಖ್ಯ ಶರಣರ ಮಾರಣ ಹೋಮಕ್ಕೆ ಕಾರಣವಾಗಿ ವಚನ ಚಳುವಳಿಗೆ ತೀವ್ರತರದ ಪೆಟ್ಟು ನೀಡಿದವು. ಅನುಭವ ಮಂಟಪದ ಶರಣ ಪ್ರಮುಖರೆಲ್ಲ ದಿಕ್ಕಿಗೊಬ್ಬರು ಚದುರಿ, ಇತಿಹಾಸದ ಸ್ವರ್ಣ ಪುಟಗಳಲ್ಲಿ ದಾಖಲಾಗಬೇಕಾಗಿದ್ದ ಐತಿಹಾಸಿಕ ಕ್ರಾಂತಿಯ ಕಾಲಘಟ್ಟವೊಂದು ಸದ್ದಿಲ್ಲದೇ ಸರಿದುಹೋಯಿತು. ಯಾವ ಸಾಮ್ರಾಜ್ಯಶಾಹಿ- ಪುರೋಹಿತಶಾಹಿ ಶಕ್ತಿಗಳ ಕುತಂತ್ರದಿಂದ ವಚನ ಚಳುವಳಿ ವೈಫಲ್ಯ ಕಂಡಿತೋ ಅವೇ ಶಕ್ತಿಗಳು ಮತ್ತೆ ಆಡಳಿತ-ಧಾರ್ಮಿಕ ಅಧಿಕಾರವನ್ನು ತಮ್ಮ ವಶಕ್ಕೆ ತೆಗೆದುಕೊಂಡು ಮುಂಚೂಣಿಗೆ ಬಂದ ಪರಿಣಾಮವಾಗಿ ವಚನ ಚಳುವಳಿಯ ನಂತರದ ಕಾಲಘಟ್ಟದಲ್ಲಿ ವೀರಶೈವ ಸಮಾಜದಲ್ಲಿ ಮಹಿಳೆಗೆ ಮುಖ್ಯವಾಗಿ ಹಲವು ಪೂಜಾ ವಿಧಿಗಳಲ್ಲಿನ ಸ್ವಾತಂತ್ರ್ಯವೊಂದನ್ನು ಬಿಟ್ಟರೆ ಉಳಿದಂತೆ ಅವಳ ಪಾತ್ರ

ತೀರ ಗೌಣವಾಯಿತು. ಪಟ್ಟಣದ ಹಲವು ಮಹಿಳೆಯರನ್ನು ಹೊರತುಪಡಿಸಿದರೆ ವೀರಶೈವ ಸಮಾಜದ ಮಹಿಳೆ ಇಂದಿಗೂ ದ್ವಿತಿಯ ದರ್ಜೆಯ ಪ್ರಜೆಯಾಗಿಯೇ ಬದುಕುತ್ತಿದ್ದಾಳೆ. ಗಂಡ- ಮನೆ-ಮಕ್ಕಳು ಇವಿಷ್ಟೇ ಅವಳ ಪ್ರಪಂಚವಾಗಿ ಹಲವಾರು ಮೂಲಭೂತ ಸೌಲಭ್ಯಗಳಿಗೂ ಹೋರಾಡಬೇಕಾದ ಪರಿಸ್ಥಿತಿಯಿದೆ.

ಹೆಣ್ಣು ಮಗು ಜನಿಸಿದರೆ ಸಣ್ಣ ಮುಖ ಮಾಡಿ ಆ ಮಗುವನ್ನು ಸ್ವಾಗತಿಸುವುದರ ಮೂಲಕ ಕುಟುಂಬ ಬಾಂಧವರು ಮೌನವಾಗಿ ತಮ್ಮ ಅಸಂತೋಷವನ್ನು ವ್ಯಕ್ತಪಡಿಸುತ್ತಾರೆ. ಮತ್ತು ಮುಂದಿನದಾದರೂ ಗಂಡು ಮಗುವಾದೀತು ಎಂಬ ನಿರೀಕ್ಷೆಯಲ್ಲಿ ತಮ್ಮ ಅಸಂತೋಷವನ್ನು ಮರೆಯುತ್ತಾರೆ! ಗ್ರಾಮೀಣ ವೀರಶೈವ ಸಮಾಜದಲ್ಲಿ ಹೆರಿಗೆ ಮಾಡಿಸಲು ಬಂದ 'ಸೂಲಗಿತ್ತಿ'ಗೆ ಹಾಗೂ ಬಾಣಂತಿಯ 'ಮೈಲಿಗೆ' ಬಟ್ಟೆ ಶುಚಿ ಮಾಡುವ 'ಅಗಸಗಿತ್ತಿಗೆ' ಉಡಕ್ಕಿ ಹಾಕುವ ಒಂದು ಪದ್ಧತಿಯಿದೆ. ಮಗು ಹುಟ್ಟಿದ ತಕ್ಷಣ ಆ ಮಗುವಿನ ಸೋದರ ಮಾವ ಸೂಲಗಿತ್ತಿಯಿಂದ ಮಗು ಗಂಡೋ-ಹೆಣ್ಣೋ ತಿಳಿದುಕೊಂಡು 'ಗಂಗಾಳಬಾರಿಸಿ' ಕುಟುಂಬ ಬಾಂಧವರಿಗೆ ಮಗುವಿನ ಜನನದ ಸುದ್ದಿ ಸಾರುತ್ತಾನೆ. ನಂತರ ಹೆರಿಗೆ ಮಾಡಿಸಿದ ಸೂಲಗಿತ್ತಿಗೆ, ಬಾಣಂತಿ ಬಟ್ಟೆ ಶುಚಿ ಮಾಡಿದ ಅಗಸಗಿತ್ತಿಗೆ ಅದೇ ಗಂಗಾಳದಿಂದ ಕಾಳುಗಳನ್ನು ತುಂಬಿ ಹೆಣ್ಣು ಮಗು ಜನಿಸಿದ್ದರೆ ನಾಲ್ಕು ಗಂಗಾಳ ಕಾಳು ಉಡಿ, ಗಂಡು ಮಗುವಾಗಿದ್ದರೆ ಐದು ಗಂಗಾಳ ಕಾಳು ಉಡಿ ಹಾಕುತ್ತಾರೆ. ಹೀಗೆ ವೀರಶೈವ ಸಮಾಜದಲ್ಲಿ ಹುಟ್ಟಿನಿಂದಲೇ ತಾರತಮ್ಯ ಎದುರಿಸುವ ಹೆಣ್ಣು ಮಗು ಆ ತಾರತಮ್ಯದ ಜೊತೆ ಜೊತೆಗೆ ಬೆಳವಣಿಗೆ ಪ್ರಾರಂಭಿಸುತ್ತದೆ.

ಶಿಕ್ಷಣ ಕ್ಷೇತ್ರದಲ್ಲಿಯೂ ಸಹ ಮಹಿಳೆಯರಿಗೆ ತಾರತಮ್ಯ ತೋರಲಾಗುತ್ತಿದೆ. ಪುರುಷರಿಗೆ ಶಿಕ್ಷಣ ಕ್ಷೇತ್ರದಲ್ಲಿ ಆಯ್ಕೆಗೆ ಹೇರಳವಾಗಿ ಅವಕಾಶ ಕಲ್ಪಿಸುವ ಪಾಲಕರು ಮಹಿಳೆಗೆ ಮಾತ್ರ 'ಯಾವುದೋ ಒಂದು ಡಿಗ್ರಿ ಮುಗಿಸಿದರಾಯಿತು' ಎಂಬ ಉದಾಸೀನ ಭಾವ ತಳೆಯುತ್ತಾರೆ. ಅದೂ ಅವಳು ಒಂದು 'ಡಿಗ್ರಿ' ಅಂತ ಮುಗಿಸಬೇಕಾಗಿರುವುದು ಮುಂದೆ ಅವಳನ್ನು ಮದುವೆಯಾಗುವ ವರನಿಗೋಸ್ಕರ!

ಮದುವೆಯ ಹಲವಾರು ಕಾರ್ಯಕ್ರಮಗಳಲ್ಲಿ ಅದೂ ವಿಶೇಷವಾಗಿ 'ಗುಗ್ಗಳ' ಕಾರ್ಯದಲ್ಲಿ ಮಹಿಳೆಯರಿಗೆ ಪ್ರವೇಶವನ್ನು ನಿಷೇಧಿಸಲಾಗಿದೆ. ಗುಗ್ಗಳದ ಅಗ್ನಿಕುಂಡಗಳನ್ನು ಅವರು ಮುಟ್ಟುವಂತಿಲ್ಲ. ಆ ಅಗ್ನಿಕುಂಡಗಳನ್ನು ಸಿದ್ಧಪಡಿಸುವಾಗ ಅಲ್ಲಿ ಮಹಿಳೆಯರು ಇರಕೂಡದು ಎಂಬ ನಿಯಮವನ್ನು ಇಂದಿಗೂ ಪಾಲಿಸಲಾಗುತ್ತಿದೆ. ಮುಟ್ಟಾದ ಮಹಿಳೆಯರು, ತೊನ್ನು ಹತ್ತಿದವರು ಅಶುಭ ವ್ಯಕ್ತಿಗಳು ಎಂದು ಭಾವಿಸಿ ಅವರ ನೆರಳು ಗುಗ್ಗಳ ಕುಂಡಗಳ ಮೇಲೆ, ಹಾಗೂ ಅವುಗಳನ್ನು ಹೊತ್ತ 'ಪುರುವಂತರ' ಮೇಲೆ ಬೀಳಕೂಡದೆಂದು ಅವರನ್ನು ದೂರವಿಡುವ ಪರಿಪಾಠವಿದೆ.

ಪುರೋಹಿತಶಾಹಿ ನಿಲುವುಗಳನ್ನು ಧಿಕ್ಕರಿಸಿದ ಶರಣರು ಸರಳ ವಿವಾಹಕ್ಕೆ ಮಹತ್ವನೀಡಿ ಒಂದು ಅಗ್ರಪಂಕ್ತಿ ಹಾಕಿಕೊಟ್ಟ ಹಿನ್ನೆಲೆಯ ಪ್ರಸ್ತುತ ಸಮಾಜದಲ್ಲಿ ಮದುವೆಯ ಸಂದರ್ಭ

ಹೋಮ-ಹವನದ ಬದಲು ಪಂಚಕಲಶಗಳನ್ನು ಹೂಡಿ ವೈದಿಕ ಮಂತ್ರ-ಪೂಜಾ ವಿಧಿಗಳ ಮೂಲಕ ಮಠದಯ್ಯ, ಅಥವಾ ಜಂಗಮ ಪ್ರಮುಖ ಪುರೋಹಿತರ ಸಮ್ಮುಖದಲ್ಲಿ ಮದುವೆಗಳು ಅದ್ಧೂರಿಯಾಗಿ ನೆರವೇರುತ್ತವೆ! ಇನ್ನು ವರದಕ್ಷಿಣೆಯ ಪಿಡುಗಂತೂ ಭೀಕರವಾಗಿ ಅಸಹ್ಯ ಹುಟ್ಟಿಸುವಂತಿದೆ. ಮುಖ್ಯವಾಗಿ ಮಹಿಳೆಯ ಬದುಕಿನ ಒಂದು ಪ್ರಮುಖ ಘಟ್ಟವಾದ 'ವಿವಾಹ' ದಲ್ಲಿ ಅವಳ ಆಯ್ಕೆಗೆ ಸ್ವಾತಂತ್ರ್ಯ ತೀರ ಕಡಿಮೆ.

ವಿಧವಾ ವಿವಾಹ ಅಲ್ಲೊಂದು ಇಲ್ಲೊಂದು ನಡೆದರೂ ಅವರು ಯಾವ ಮಂಗಲ ಕಾರ್ಯದಲ್ಲೂ ಭಾಗವಹಿಸುವಂತಿಲ್ಲ. ಕತ್ತಲ ಕೋಣೆಯಲ್ಲಿ ವಿಧವೆಗೆ ತಾಳಿ ಕಟ್ಟುವುದರ ಮೂಲಕ ನಡೆಯುವ ವಿಧವಾ ವಿವಾಹಗಳನ್ನು 'ಉಡುಕಿ' ಎಂದು ಕರೆದು ಅವರನ್ನು ಅಸಹಜವಾಗಿ ಕಾಣಲಾಗುತ್ತಿದೆ. ಆದರೆ ಪುರುಷರಿಗೆ ಮಾತ್ರ ಈ ನಿರ್ಬಂಧಗಳಿಲ್ಲ!

ಕುಟುಂಬ ಸಮಾಜದ ಚಿಕ್ಕ ಹಾಗೂ ಪ್ರಮುಖ ಘಟಕ. ಸಮಾಜವೊಂದು ಸುಸ್ಥಿತಿಯಲ್ಲಿದೆಯೆಂದಾದರೆ ಅದಕ್ಕೆ ಅಡಿಪಾಯ ಸ್ವಾಸ್ಥ್ಯ ಕುಟುಂಬವೇ. ತನ್ನ ಇಚ್ಛೆಗೆ ವಿರುದ್ಧವಾಗಿ ತನ್ನನ್ನು ಮದುವೆಯಾಗಿ ಹದ್ದು ಮೀರಿದ ನಡುವಳಿಕೆಯಿಂದ ಬಲಾತ್ಕರಿಸಲು ಬಂದ ಕೌಶಿಕನನ್ನು ಧಿಕ್ಕರಿಸಿ ತನ್ನ ಮನೋಸಾಮ್ರಾಜ್ಯದ ಪತಿ ಚೆನ್ನಮಲ್ಲಿಕಾರ್ಜುನನನ್ನರಸುತ್ತ ಕಲ್ಯಾಣಕ್ಕೆ ಬಂದ ಅಕ್ಕಮಹಾದೇವಿಯನ್ನು ಅನುಭವ ಮಂಟಪದ ಶರಣರು 'ಸಾಕ್ಷಾತ್ ಕಪಿಲಸಿದ್ಧ ಚನ್ನಮಲ್ಲಿಕಾರ್ಜುನ' ಎಂದು ಪರಿಭಾವಿಸಿ ಮನ್ನಣೆಯನ್ನಿತ್ತರು. ಇಂದು ಗಂಡನ ಅವಗುಣಗಳನ್ನು ಟೀಕಿಸುವ, ಖಂಡಿಸುವ ಮಹಿಳೆ ಸಮಾಜದ ದೃಷ್ಟಿಯಲ್ಲಿ 'ಖಳನಾಯಕಿಯೇ' ಆಗಿಬಿಡುತ್ತಾಳೆ. ಗಂಡನಿಂದ ಪರಿತ್ಯಕ್ತೆಯಾದ, ಗಂಡ ಸತ್ತು ವಿಧವೆಯಾದ, ಹಲವಾರು ಕಾರಣಗಳಿಗಾಗಿ ಅವಿವಾಹಿತೆಯಾಗುಳಿದ ಮಹಿಳೆಯರನ್ನು ಸಮಾಜ ನೋಡುವ ದೃಷ್ಟಿಯೇ ವಿಚಿತ್ರವಾಗಿರುತ್ತದೆ.

ಇನ್ನು ಹಳ್ಳಿಗಳಲ್ಲಿ ವಾಸಿಸುವ ಮಹಿಳೆಯರ ಸ್ಥಿತಿಯಂತೂ ತೀರ ಶೋಚನೀಯ. ಅವಳು ಹೊಲ-ಮನೆಗಳಲ್ಲಿ ದನದ ಹಾಗೆ ದುಡಿಯಬೇಕಾಗಿದೆ. ಶ್ರಮವಿಭಜನೆಯ ಅಲಿಖಿತ ಸಿದ್ಧಾಂತದೊಂದಿಗೆ ದುಡಿಯುವ ಗ್ರಾಮೀಣ ಸಮಾಜದಲ್ಲಿ ದುಡಿಮೆಯ ಹೆಚ್ಚಿನ ಹೊರೆ ಮಹಿಳೆಯ ಮೇಲೆಯೇ!

೨೧ನೇ ಶತಮಾನಕ್ಕೆ ಅಡಿ ಇಡಲು ಸಜ್ಜಾಗಿರುವ ದುಡಿಯುವ ಪಟ್ಟಣವಾಸಿ ಸುಶಿಕ್ಷಿತ ಮಹಿಳೆ ಮನೆ-ಆಫೀಸು ಹೀಗೆ ಎರಡೆರಡು ಕಡೆ ಶೋಷಣೆಗೆ ಒಳಗಾಗುತ್ತಿದ್ದಾಳಲ್ಲದೇ ಅನೇಕ ಸಂದರ್ಭಗಳಲ್ಲಿ ಅವಳ ಪ್ರತಿಭೆ- ಪಾಂಡಿತ್ಯಗಳೇ ಅವಳಿಗೆ ಮುಳುವಾಗುವ ವಿಷಮ ಪರಿಸ್ಥಿತಿಗಳಿವೆ. ಹಳ್ಳಿಯ ಮಹಿಳೆಯರು ಇನ್ನೂ ಒಂದು ಹೆಜ್ಜೆ ಮುಂದು ಎಂಬಂತೆ ಅಜ್ಞಾನ, ಅನಕ್ಷರತೆ, ಬಡತನ, ಮೂಢನಂಬಿಕೆಗಳ ದಾಸಾನುದಾಸರಾಗಿ ಭೀಕರ ಸ್ವರೂಪದ ಶೋಷಣೆ ಅನುಭವಿಸುತ್ತಿದ್ದಾರೆ. ಪುರುಷ ಪ್ರಧಾನ ವ್ಯವಸ್ಥೆ ರೂಪಿಸಿದ ಅವರ ಈ ಬದುಕಿಗೆ ಒಂದು ಸ್ಪಂದನವಿಲ್ಲ, ಸಂವೇದನೆಯಿಲ್ಲ, ತನ್ನದೇ ಆದ ಭಾವ- ಲಯಗಳಿಲ್ಲ, ಅಭಿರುಚಿಗಳಿಲ್ಲ ಅವರ ಬದುಕು ಜಿಡ್ಡುಗಟ್ಟಿದ ವ್ಯವಸ್ಥೆಯಡಿ ನಿಂತ ನೀರಾಗಿದೆ. ಮಲೆತು ನಾರುತ್ತಿವೆ. ಈ

ಹಿನ್ನೆಲೆಯಲ್ಲಿ ಅವಳ ಶ್ರೇಯೋಭಿವೃದ್ಧಿಗೆ ಪುರುಷ ಮನಗಳು ಮಿಡಿಯುತ್ತಿವೆಯಾದರೂ ಅವುಗಳ ಸಂಖ್ಯೆ ತೀರ ಗೌಣವಾಗಿದೆ.

ಒಟ್ಟಿನಲ್ಲಿ ಹನ್ನೆರಡನೆಯ ಶತಮಾನದ ವಚನ ಚಳುವಳಿ ಮಹಿಳೆಯ ಬದುಕಿಗೆ ಅಭೂತಪೂರ್ವ ಚಾಲನ ಶಕ್ತಿಯನ್ನು ತಂದುಕೊಟ್ಟಿತಾದರೂ ನಂತರದ ದಿನಗಳಲ್ಲಿ ಅದರ ವೈಫಲ್ಯದೊಂದಿಗೆ ಅದರ ಪ್ರಭಾವವೂ ಕಡಿಮೆಯಾಗುತ್ತ ಹೋಗಿ, ಮತ್ತೆ ಪುರುಷ ಪ್ರಧಾನ ಚಿಂತನೆಗಳು ವಿಜೃಂಭಿಸಿ ಮಹಿಳೆಯ ಬದುಕು ಮತ್ತೆ ಮೊದಲಿನ ಸ್ಥಿತಿಗೇ ಬಂದು ನಿಂತಿರುವುದು ಸುಸ್ಪಷ್ಟ. ವೀರಶೈವ ಸಮಾಜಕ್ಕೆ ಉಳಿದ ಸಮಾಜಗಳಿಗಿಂತ ಭಿನ್ನ ಪರಂಪರೆಯೊಂದನ್ನು ಹಾಕಿಕೊಟ್ಟ ಶರಣರ ಆಶಯಗಳ ಹಿನ್ನೆಲೆಯಲ್ಲಿ ಮಹಿಳೆಯ ಇಂದಿನ ಈ ಸ್ಥಿತಿಗತಿಗಳು ತುಂಬ ಆಘಾತಕಾರಿಯಾಗಿವೆ. ಈ ನಿಟ್ಟಿನಲ್ಲಿ ಮಹಿಳೆ ಎಚ್ಚೆತ್ತುಕೊಂಡು ಶರಣರ ಆಶಯಗಳನ್ನು ಮತ್ತೆ ಮೇಲ್ಮೆಗೆ ತರಬೇಕಾಗಿದೆ. ಅದಕ್ಕಾಗಿ ಈ ಸಮಾಜದ ಮಹಿಳೆ ಇನ್ನೊಂದು ಶರಣ ಚಳುವಳಿಗಾಗಿ ಕಾದು ಕೂರುವಂತಿಲ್ಲ. ದಿನದಿಂದ ದಿನಕ್ಕೆ ಜಗತ್ತಿನಾದ್ಯಂತ ಪರಿಸ್ಥಿತಿಗಳು ತೀವ್ರಗತಿಯಲ್ಲಿ ಬದಲಾಗುತ್ತಲಿವೆ. ವೀರಶೈವ ಸಮಾಜದ ಮಹಿಳೆ ಈ ಎಲ್ಲಾ ಶೋಷಣೆಗಳ ವಿಮುಕ್ತಿಗಾಗಿ, ಸ್ವಾಭಿಮಾನದ, ಸಮಾನತೆಯ ಬದುಕಿಗಾಗಿ ಸ್ವತಃ ತಾನೇ ಹೋರಾಟ ನಡೆಸಬೇಕಾಗಿದೆ. ಈ ದಿಶೆಯಲ್ಲಿ ಮೊದಲ ಹೆಜ್ಜೆಯಾಗಿ ಅವಳು ಶಿಕ್ಷಣದತ್ತ ಗಮನಹರಿಸಿ ಸಂಘಟನಾ ಚಾತುರ್ಯ ಬೆಳೆಸಿಕೊಳ್ಳಬೇಕು. ಸಂಘಟಿತ ಮಹಿಳೆಯರಲ್ಲಿ ಒಗ್ಗಟ್ಟಿನ ಭಾವಮೂಡಿ ಅವರು ಗ್ರಾಮೀಣ ಮಟ್ಟದಿಂದ ಮೊದಲ್ಗೊಂಡು ರಾಷ್ಟ್ರಮಟ್ಟದ ಮಹಿಳಾ ಸಂಘಟನೆಗಳೊಂದಿಗೆ ಸಕ್ರೀಯವಾಗಿ ಪಾಲ್ಗೊಂಡು, ತಮ್ಮ ಹೋರಾಟದ ಗೊತ್ತು-ಗುರಿಗಳನ್ನು ನಿರ್ಧರಿಸಿಕೊಳ್ಳಲು ಸಾಧ್ಯವಾಗುತ್ತದೆ.



# ಕುಟುಂಬ ಯೋಜನೆ ಮತ್ತು ಮಹಿಳೆ

ಮಹಿಳೆಯ ಆರೋಗ್ಯಕ್ಕೆ ಸಂಬಂಧಿಸಿದ ಹಲವು ಪ್ರಧಾನ ಸಮಸ್ಯೆಗಳು ಅವಳು ಬದುಕುತ್ತಿರುವ ಸಮಾಜ ವ್ಯವಸ್ಥೆಯ ಕೊಡುಗೆಗಳಾಗಿವೆ. ಮನು ಸಂತಾನವನ್ನು ಹೊರುವ, ಹೆರುವ, ಸಂಗೋಪನ ಮಾಡುವ ನಿಸರ್ಗದತ್ತ ಕರ್ತವ್ಯಗಳನ್ನು ನಿರ್ವಹಿಸಬೇಕಾದ ಅವಧಿಯಲ್ಲಿ ಹೆಣ್ಣು ತನ್ನ ವಯಸ್ಸು, ಆಯಸ್ಸು, ಆರೋಗ್ಯಗಳನ್ನು ಮುಡಿಪಿಟ್ಟು ನಡೆಯುವುದಂತೂ ಇದ್ದದ್ದೇ. ಈ ಕಷ್ಟಕರ ಹೊಣೆಗಾರಿಕೆಯನ್ನು ನಿರ್ವಹಿಸುವ ಹೆಣ್ಣಿಗೆ ಈ ಸಮಾಜ ಕೃತಜ್ಞವಾಗಿರಬೇಕು : ಜೊತೆಗೆ ಈ ಕಷ್ಟವು ಸಹ್ಯವೆನಿಸುವ ಬಗೆಯ ನೆರವು ನೀಡಲು ಮುಂದಾಗಬೇಕು. ಆದರೆ ಸಮಾಜ ವ್ಯವಸ್ಥೆಯು ಈ ಮಾನವೀಯತೆಯನ್ನು ತೋರುವ ಬದಲು ಪ್ರಗತಿ ಹಾಗೂ ಅಭಿವೃದ್ಧಿ ಯೋಜನೆಗಳ ಹೆಸರಿನಲ್ಲಿ ಅವಳನ್ನು ಇನ್ನಷ್ಟು ಮತ್ತಷ್ಟು ಶೋಷಿಸುತ್ತಿದೆ. ಅಲ್ಲದೆ ಈ ಶೋಷಣೆಗೇ ಮಹಿಳೆಯ ಪ್ರಗತಿ, ಅಭಿವೃದ್ಧಿ ಎಂಬ ಅಭಿದಾನವನ್ನೂ ಕೊಡುತ್ತದೆ.

ಜಗತ್ತಿನ ಜನಸಂಖ್ಯೆ ಈ ಭೂಮಿಯು ಭರಿಸಲಾರದಷ್ಟು ಮಿತಿಮೀರಿ ಬೆಳೆಯುತ್ತಿದೆ ಎಂಬ ವಾಸ್ತವದೊಂದಿಗೇ ಇದನ್ನು ನಿಯಂತ್ರಣ ಕ್ಕೊಳಪಡಿಸಿ ಪ್ರಕೃತಿಯು ಈ ಸವಾಲನ್ನು ಎದುರಿಸಬೇಕೆಂಬ ಪ್ರಯತ್ನವನ್ನೂ ವಿಜ್ಞಾನ ನಡೆಸಲಾರಂಭಿಸಿದೆ. ಒಳ್ಳೆಯದೇ. ಕುಟುಂಬ ಯೋಜನೆಯ ಬಗೆಗೆ ವಿಸ್ಮಯ ಹುಟ್ಟಿಸುವ ಪ್ರಯೋಗಗಳನ್ನು, ಸಂಶೋಧನೆಗಳನ್ನು ನಡೆಸುತ್ತಾ ಆಶಾದಾಯಕವಾಗಿ ಮುನ್ನಡೆ ಯುತ್ತಲೂ ಇದೆ. ಕಿಕ್ಕಿರಿದ ಜನಸಂಖ್ಯೆಯಿಂದಾಗಿ ಬಳಲುತ್ತಿರುವ ದೇಶಗಳಂತೂ ಇವುಗಳ ಫಲಿತಾಂಶಗಳನ್ನು ಹಿಂದು ಮುಂದೆ ನೋಡದೆ ಜಾರಿಗೊಳಿಸುತ್ತಿವೆ. ಇವುಗಳ ಪರಿಣಾಮಗಳಾದರೋ ದಶಕಗಳ ನಂತರದಲ್ಲಷ್ಟೇ ಅನುಭವ ಗೋಚರವಾಗತೊಡಗುವಂಥವು. ಇಂಥವುಗಳನ್ನು ಕುರಿತ ಅನೇಕ ಸಾಮಾಜಿಕ ಅಧ್ಯಯನಗಳು ಈಗೀಗಷ್ಟೇ ಆರಂಭಗೊಂಡಿವೆ. ಈ ಪೈಕಿ ಕುಟುಂಬ ಯೋಜನೆಗೆ ಸಂಬಂಧಿಸಿದ ವೈಜ್ಞಾನಿಕ ಸಂಶೋಧನೆಗಳು, ಪ್ರಯೋಗಗಳು ವಾಸ್ತವದಲ್ಲಿ ಮಹಿಳೆಯನ್ನು ಪರಿಗಣಿಸಿರುವ ರೀತಿಯ ಬಗೆಗೆ ಅನೇಕ ಸಂದೇಹಗಳು ಕಾಣಿಸಿಕೊಳ್ಳುತ್ತಿವೆ. ಸ್ತ್ರೀ ಪುರುಷರ ಭಾಗವಹಿಸುವಿಕೆ ಜನಸಂಖ್ಯೆಯ ವೃದ್ಧಿಯಲ್ಲಾಗಲೀ, ನಿಯಂತ್ರಣದಲ್ಲಾಗಲೀ ಸಮಾನ

ಹೊಣೆಗಾರಿಕೆಯದ್ದೆಂಬ ನಿಲುವಿನಿಂದ ಈ ಕುಟುಂಬ ಯೋಜನೆಯ ಕಾರ್ಯಕ್ರಮುಗಳು ರೂಪುಗೊಳ್ಳುತ್ತಿಲ್ಲವೆಂಬುದು ವಿಷಾದನೀಯ. ಜನನ ನಿಯಂತ್ರಣ ಎಂಬ ಮಾತೇ ಪ್ರಕೃತಿಗೆ ಸವಾಲೆಸೆದು ನಿಂತ ಕಾರ್ಯಚರಣೆ. ಹಾಗಾಗಿ ಅಷ್ಟೇ ಪ್ರಮಾಣದ ಕಷ್ಟನಷ್ಟ ಹಾಗೂ ಅಪಾಯಗಳೂ ಇದರಲ್ಲಿ ಇದ್ದೇ ಇವೆ. ಏರುತ್ತಿರುವ ಜನಸಂಖ್ಯೆ ನಮ್ಮೆದುರು ನಿಂತಿರುವ ದೊಡ್ಡ ಪ್ರಶ್ನೆಯಾದ್ದರಿಂದ ಸಾಧ್ಯವಿದ್ದಷ್ಟು ಉಪಾಯಗಳನ್ನಂತೂ ಕಂಡುಕೊಳ್ಳಲೇಬೇಕು. ಇಷ್ಟರ ಮಟ್ಟಿಗೆ ಯಾವ ವಿರೋಧವೂ ಇಲ್ಲ. ಆದರೆ ಈ ಸಂಬಂಧದ ವೈಜ್ಞಾನಿಕ ಸಂಶೋಧನೆಗಳು ರೂಪಿಸುವ ಎಲ್ಲ ಅಪಾಯಕಾರಿ ಕಾರ್ಯಚರಣೆಗಳಲ್ಲೂ ಮಹಿಳೆಯನ್ನು ಪ್ರಯೋಗ ಪಶುವೆಂಬಂತೆ ಪರಿಗಣಿಸಲಾಗಿದೆ ಎಂಬುದು ದುಃಖದ ಸಂಗತಿ. ಪುರುಷನ ಹಿತರಕ್ಷಣೆಯನ್ನು ಪ್ರಧಾನವಾಗಿ ಕಾಯುವ ಈ ವಿಜ್ಞಾನ ಶಾಖೆಯನ್ನು ಮಹಿಳೆ ಎಷ್ಟು ನಂಬಬಹುದೋ ಅನುಮಾನಾಸ್ಪದ.

ನಿಸರ್ಗವು ಹೆಣ್ಣಿನ ಮೇಲೆ ಸಂತಾನ ನಿರ್ವಹಣೆಯ ಬಹುಪಾಲು ಹೊಣೆಯನ್ನು ಹೇರಿದೆ. ಇದೀಗ ಸಮಾಜ ವ್ಯವಸ್ಥೆಯು ಸಂತಾನ ನಿಯಂತ್ರಣದ ಕಾರ್ಯಾಚರಣೆಯಲ್ಲಿ ಅವಳನ್ನು ಪ್ರಯೋಗ ಪಶುವನ್ನಾಗಿ ಬಳಸುತ್ತಿದೆ. ಮನುಕುಲದ ಒಟ್ಟು ಒಳಿತಿನ ಬಗೆಗೆ ಮಹಿಳೆಯೇನೂ ವಿರೋಧವನ್ನೆತ್ತುತ್ತಿಲ್ಲ. ಆದರೆ ಮಹಿಳೆಯ ಒಳಿತನ್ನೂ ಕುರಿತು ಚಿಂತಿಸುವ ಜವಾಬ್ದಾರಿ ಈ ಸಮಾಜದ್ದಲ್ಲವೇ?

ಪ್ರಸ್ತುತದಲ್ಲಿ ಕುಟುಂಬ ಯೋಜನೆಯು ಮಹಿಳೆಯ ಎದುರು ಒಂದು ಪ್ರಶ್ನೆಯಾಗಿ, ಸಮಸ್ಯೆಯಾಗಿ ನಿಂತಿದೆ. ಈ ಯೋಜನೆಯಲ್ಲಿ ಪಾಲ್ಗೊಳ್ಳಲೇಬೇಕಾದ ಹಲವು ಅನಿವಾರ್ಯಗಳೂ ಅವಳೆದುರು ಇವೆ. ಇಂತಹ ಅವಳ ಸಮಕಾಲೀನ ಪ್ರಶ್ನೆಯನ್ನು ಕುರಿತ ಚರ್ಚೆಯನ್ನಿಲ್ಲಿ ವಿಸ್ತಾರವಾಗಿ ಮಂಡಿಸಲು ಪ್ರಯತ್ನಿಸಲಾಗಿದೆ. ಸ್ತ್ರೀರೋಗ ತಜ್ಞರಾದ ಡಾ. ಎಚ್. ಗಿರಿಜಮ್ಮನವರು, ಅಭಿವೃದ್ಧಿ ಅಧ್ಯಯನತಜ್ಞ ಡಾ. ಶೇಷಾದ್ರಿಯವರು ಈ ಚರ್ಚೆಗಳನ್ನು ಮಂಡಿಸಿದ್ದಾರೆ. ಕುಟುಂಬ ಯೋಜನೆಯ ಫಲಾನುಭವಿಗಳೆಂದು ಜನಸಾಮಾನ್ಯರ ಅಭಿಪ್ರಾಯ ಗಳನ್ನು ಟಿಪ್ಪಣಿಗಳಲ್ಲಿ ಕೊಡಲಾಗಿದೆ. ಈ ಒಟ್ಟು ಚರ್ಚೆ ಮಹಿಳೆಯರ ಚಿಂತನೆಗಳನ್ನು ಪ್ರಚೋದಿಸಲಿ ಎಂಬುದು ಈ ಪ್ರಯತ್ನದ ಮುಖ್ಯ ಆಶಯ.

(ಸಂ.)

# ಕುಟುಂಬ ಯೋಜನೆ ಮತ್ತು ಮಹಿಳೆ

ಡಾ. ಬಿ. ಶೇಷಾದ್ರಿ

"The suppression of women from participation in social, political and economic life hurts the pepole as a whole, not just women. The emancipation of women is an integral part of social progress, not just a 'women's issue' "

Jean Dreze and Amartya Sen. (1995)

ಜನಸಂಖ್ಯೆಯು ಬೆಳವಣಿಗೆಯು ಗತಿಯನ್ನು ಮತ್ತು ಜನನ ಪ್ರಮಾಣವನ್ನು ನಿಯಂತ್ರಿಸಲು ಅವುಗಳನ್ನು ಕೆಳಮಟ್ಟಕ್ಕೆ ಇಳಿಸಲು ಭಾರತವು ರೂಪಿಸಿರುವ ಜನಸಂಖ್ಯಾನೀತಿ ಹಾಗೂ ಅದರ ಪ್ರಧಾನ ಸಾಧನವಾಗಿರುವ ಕುಟುಂಬ ಯೋಜನೆಯು ಲಿಂಗಸಮಾನತೆ, ಮಾನವ ಹಕ್ಕುಗಳು, ಸಂತಾನೋತ್ಪತ್ತಿ ಹಕ್ಕುಗಳು, ಸಂತಾನೋತ್ಪತ್ತಿ ಆರೋಗ್ಯ ಮತ್ತು ಸಂತಾನೋತ್ಪತ್ತಿ ಜವಾಬ್ದಾರಿಯನ್ನು ಸಂಪೂರ್ಣವಾಗಿ ಹೊತ್ತಿರುವ ಮಹಿಳೆಯರಿಗೆ 'ಅತೀತ' ವಾಗಿರುವ ಸಂಗತಿ ನಮ್ಮ ಮುಂದಿದೆ. ಜನಸಂಖ್ಯೆಯು ಬೆಳವಣಿಗೆಯ ಗತಿಯನ್ನು ನಿಯಂತ್ರಿಸಲು ಮತ್ತು ಜನನ ಪ್ರಮಾಣವನ್ನು ಕಡಿಮೆ ಮಾಡಲು ಭಾರತವು ಹಮ್ಮಿಕೊಂಡಿರುವ ಪ್ರಧಾನ ಕಾರ್ಯಕ್ರಮವಾದ ಕುಟುಂಬ ಯೋಜನೆಯು ಅನೇಕ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಂಗತಿಗಳಾದ ಶಿಶುಮರಣ ಪ್ರಮಾಣ, ಮಕ್ಕಳ ಮರಣ ಪ್ರಮಾಣ, ತಾಯಂದಿರ ಮರಣ ಪ್ರಮಾಣ, ಮಹಿಳೆಯರ ಶಿಕ್ಷಣ, ಅವರ ಉದ್ಯೋಗ, ಅವರ ದುಡಿಮೆಯ ಅವಕಾಶಗಳು, ಮಹಿಳೆಯರ ಸಬಲೀಕರಣ ಮತ್ತು ಸಂತಾನೋತ್ಪತ್ತಿ ವಿಷಯದಲ್ಲಿ ಮಹಿಳೆಯರಿಗೆ ಸ್ವಾಯತ್ತತೆ ಮುಂತಾದ ಸಂಗತಿಗಳಿಂದಲೂ ಅದು 'ಅತೀತ'ವಾಗಿದೆ. ನಮ್ಮ ದೇಶದಲ್ಲಿ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಂಗತಿಗಳನ್ನು ನಿಭಾಯಿಸಲು ಅಧಿಕಾಧಿಕವಾಗಿ ಅಭಿವೃದ್ಧಿ ಕಾರ್ಯಕ್ರಮಗಳ ಮೂಲಕ ಪ್ರಯತ್ನಿಸಲಾಗುತ್ತಿದೆ. ಜನಸಂಖ್ಯೆಯು ಬೆಳವಣಿಗೆಯನ್ನು ನಿಯಂತ್ರಿಸಲು ಅನುಸರಿಸುತ್ತಿರುವ ಕುಟುಂಬ ಯೋಜನೆ ಕಾರ್ಯಕ್ರಮ ಮತ್ತು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಸಂಗತಿಗಳಿಂದ ಮುಪ್ಪುರಿಗೊಂಡಿರುವ ಅಭಿವೃದ್ಧಿ ಕಾರ್ಯಕ್ರಮ– ಇವೆರಡನ್ನು ಪ್ರಜ್ಞಾಪೂರ್ವಕವಾಗಿ ಸಂಯೋಜಿಸುವ ಪ್ರಯತ್ನ ಮಾತ್ರ ನಡೆಯಲಿಲ್ಲ. ಅಭಿವೃದ್ಧಿಶೀಲ ದೇಶಗಳಲ್ಲಿ ಜನಸಂಖ್ಯೆಯ ಬೆಳವಣಿಗೆ ಮತ್ತು ಅಭಿವೃದ್ಧಿ ಪ್ರಕ್ರಿಯೆಗಳ

ನಡುವೆ ಇರುವ ಕಾರ್ಯಕಾರಣ ಸಂಬಂಧವನ್ನು ಗುರುತಿಸಲಾಗಿದೆ. ಇಂದು ಆಚರಣೆಯಲ್ಲಿರುವ ಜನಸಂಖ್ಯಾನೀತಿ ಹಾಗೂ ಕುಟುಂಬ ಯೋಜನೆ ಕಾರ್ಯಕ್ರಮ-ಇವುಗಳು ಜನಸಂಖ್ಯೆಯ ಮಿತಿಮೀರಿದ ಬೆಳವಣಿಗೆಯು ಅಭಿವೃದ್ಧಿಗೆ ಮಾರಕವೆಂದು ಮತ್ತು ಅದರ ಬೆಳವಣಿಗೆಯ ನಿಯಂತ್ರಣವು ಅಭಿವೃದ್ಧಿಗೆ ಪೂರಕವೆಂದು ಭಾವಿಸಿವೆ. ಜನಸಂಖ್ಯೆಯ ಬೆಳವಣಿಗೆ ಗತಿಯಲ್ಲಿ ಉಂಟಾಗುವ ಕಡಿತವು ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದ ಅಪೇಕ್ಷಣೀಯ ಎಂದು ನಂಬಲಾಗಿದೆ.

ಜನಸಂಖ್ಯಾ ನೀತಿ, ಕುಟುಂಬ ಯೋಜನೆ, ಅಭಿವೃದ್ಧಿಗಳನ್ನು ಕುರಿತಂತೆ ನಮ್ಮ ಗ್ರಹಿಕೆಗಳು, ನಮ್ಮ ಪರಿಭಾಷೆ, ವೈಚಾರಿಕ ಆಕೃತಿಗಳು ಮುಂತಾದವು ಕಾಲದಿಂದ ಕಾಲಕ್ಕೆ ಬದಲಾಗುತ್ತಲೇ ಬಂದಿವೆ. ಆದರೆ ಮಾನವ ಸಂತತಿಯ ಮುಂದುವರಿಕೆಗೆ ಜೀವನಾಡಿಯಾಗಿರುವ ಮಹಿಳೆಯರು ಮಾತ್ರ ಸಮಾಜದಲ್ಲಿ ನಿಕೃಷ್ಟೀಕರಣಕ್ಕೆ ಒಳಗಾಗಿದ್ದಾರೆ. ಒಂದು ಸಮಾಧಾನದ ಸಂಗತಿಯೆಂದರೆ ಅಭಿವೃದ್ಧಿ ಕಾರ್ಯಕ್ರಮಗಳನ್ನು ಲಿಂಗೀಕರಣಕ್ಕೆ ಒಳಪಡಿಸಿದ ಬೆರಳೆಣಿಕೆ ದೇಶಗಳಲ್ಲಿ ಭಾರತವೂ ಒಂದಾಗಿದೆ. ಇಷ್ಟಾದರೂ ಇಲ್ಲಿ ಲಿಂಗಸಮಾನತೆಯೆಂಬುದು ಗಗನಕುಸುಮವಾಗಿಯೆ ಉಳಿದಿದೆ. ಪುರುಷ ಪ್ರಧಾನ ಕೌಟುಂಬಿಕ ವ್ಯವಸ್ಥೆ ಮತ್ತು ಸಂಪ್ರದಾಯವಾದಿ ನಡವಳಿಕೆಗಳು ವ್ಯಾಪಕವಾಗಿ ನೆಲೆಯೂರಿರುವ ಭಾರತದಂತಹ ಸಮಾಜದಲ್ಲಿ ಮಹಿಳೆಯರು ದೈನ್ಯತೆ, ವಿಧೇಯತೆ, ಅಧೀನತೆಯ ಭಾವಗಳನ್ನು ಅಂತರ್ಗತಗೊಳಿಸಿಕೊಂಡಿರುವ, ಸಾವಯವಗೊಳಿಸಿ ಕೊಂಡಿರುವ ದುರಂತವನ್ನು ಕಾಣಬಹುದಾಗಿದೆ. ವಿಶ್ವದಲ್ಲಿ ಕುಟುಂಬ ಯೋಜನೆಯನ್ನು ಅಧಿಕೃತ ಸರ್ಕಾರಿ ಕಾರ್ಯಕ್ರಮವಾಗಿ ಜಾರಿಗೆ ತಂದ ಪ್ರಥಮ ದೇಶವೆಂಬ ಕೀರ್ತಿಗೆ ಭಾರತವು ಭಾಜನವಾಗಿದೆ. ಈ ಕಾರ್ಯಕ್ರಮದ ಕೇಂದ್ರಬಿಂದು ಮತ್ತು ಗಮನ ಜನನ ಪ್ರಮಾಣವನ್ನು ತಗ್ಗಿಸುವುದು ಮತ್ತು ಜನಸಂಖ್ಯೆಯ ಮಿತಿಮೀರಿದ ಬೆಳವಣಿಗೆಯನ್ನು ತಡೆಯುವುದಾಗಿದೆ. ಆದರೆ ಈ ಬಗೆಯ ಕಾರ್ಯಕ್ರಮಗಳಿಂದ ಮಹಿಳೆಯರ ಹಕ್ಕುಗಳ ಮೇಲೆ, ಸಂತಾನೋತ್ಪತ್ತಿ ಆರೋಗ್ಯದ ಮೇಲೆ, ಸಂತಾನೋತ್ಪತ್ತಿ ಹಕ್ಕುಗಳ ಮೇಲೆ ಉಂಟಾಗುವ ಪರಿಣಾಮ-ದುಷ್ಪರಿಣಾಮಗಳ ಬಗ್ಗೆ ಮಾತ್ರ ಇಲ್ಲಿ ಕಿಂಚಿತ್ತೂ ಕಾಳಜಿಯಿಲ್ಲ. ಇದಕ್ಕಿಂತ ಮುಖ್ಯವಾಗಿ ಜನಸಂಖ್ಯೆಯ ನಿಯಂತ್ರಣವನ್ನು ಕುರಿತಂತೆ ನಮ್ಮ ದೃಷ್ಟಿಕೋನವು ಅಧಿಕಾಧಿಕವಾಗಿ 'ಆಕ್ರಮಣಕಾರಿಗಳ ವಿಚಾರ ಪ್ರಣಾಳಿಕೆ'ಯನ್ನು ಆಧರಿಸಿದೆಯೆ ವಿನಾ ಸಹಭಾಗಿತ್ವವಾದಿ-ಸಹಕಾರವಾದಿ ವಿಚಾರ ಪ್ರಣಾಳಿಕೆಯನ್ನು ಆಧರಿಸಿಲ್ಲ.

ಜನಸಂಖ್ಯೆಯ ಬೆಳವಣಿಗೆ ಗತಿಯನ್ನು ತಡೆಯಲು-ತಗ್ಗಿಸಲು ಭಾರತವು ಅಳವಡಿಸಿಕೊಂಡಿರುವ ಜನಸಂಖ್ಯಾನೀತಿ ಮತ್ತು ಅದರ ಪ್ರಮುಖ ಅಂಗವಾಗಿರುವ ಕುಟುಂಬ ಯೋಜನೆಯು ಕಾಂಡಾರ್‌ಸೆಟ್ ಪ್ರಣೀತ ಸಹಕಾರಿವಾದಿ- ಸಹಭಾಗಿತ್ವವಾದಿ ಕ್ರಮಗಳಿಗೆ ಪ್ರತಿಯಾಗಿ ಮಾಲ್ಥಸ್‌ಪ್ರಣೀತ ಬಲಪ್ರಯೋಗವಾದಿ ಕ್ರಮಗಳಿಗೆ ಜೋತು

ಬಿದ್ದಿರುವಂತೆ ಕಾಣುತ್ತಿದೆ. (ಅಮರ್ತ್ಯಸೇನ್.೧೯೯೫) ಮಹಿಳೆಯರು, ಅದರಲ್ಲೂ ಮೂಕರೂ, ಮುಗ್ಧರೂ ಆಗಿರುವ ಮಹಿಳೆಯರು ಕುಟುಂಬ ಯೋಜನೆಗೆ ಸಂಬಂಧಿಸಿದ ಎಲ್ಲ ಬಗೆಯ ಗರ್ಭನಿರೋಧಕ ವಿಧಾನಗಳಿಗೆ ಬಲಿಪಶುಗಳಾಗಿದ್ದಾರೆ.

ಸಂತಾನೋತ್ಪತ್ತಿ ವಿಷಯಗಳಿಗೆ ಸಂಬಂಧಿಸಿದಂತೆ ನಿರ್ಣಯ ತೆಗೆದುಕೊಳ್ಳುವಲ್ಲಿ ಮಹಿಳೆಗೆ, ಕೌಟುಂಬಿಕವಾಗಿಯಾಗಲಿ ಮತ್ತು ಸಾಮಾಜಿಕವಾಗಿಯಾಗಲಿ ನಿರ್ಣಾಯಕ ಪಾತ್ರ ವಹಿಸಲು ಸಾಧ್ಯವಾಗುತ್ತಿಲ್ಲ. ಜನಸಂಖ್ಯಾ ನೀತಿ ಮತ್ತು ಕುಟುಂಬ ಯೋಜನೆ ಕಾರ್ಯಕ್ರಮಗಳಲ್ಲಿ ಅಂತರ್ಗತವಾಗಿರುವ ಲಿಂಗಸಂಬಂಧಿ ತಾರತಮ್ಯ, ಲಿಂಗ ಅಸಮಾನತೆ, ಸ್ತ್ರೀಯರ ದಮನ ಮುಂತಾದ ಜ್ವಲಂತ ಸಂಗತಿಗಳ ಬಗ್ಗೆ ಸಮಾಜವು ಔದಾಸೀನ್ಯವನ್ನೇನು ತಳೆದಿಲ್ಲ. ಮಹಿಳೆಯರನ್ನು ಕುರಿತಂತೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ನಾಲ್ಕು ವಿಶ್ವ ಸಮಾವೇಶಗಳು ನಡೆದಿವೆ. ೧೯೯೫ ರಲ್ಲಿ ಬೀಜಿಂಗ್‌ನಲ್ಲಿ ನಡೆದ ಸಮಾವೇಶದಲ್ಲಿ 'ಲಿಂಗ ಸಮಾನತೆ'ಯನ್ನು ಕೇಂದ್ರವಿಷಯವನ್ನಾಗಿ ಮಾಡಲಾಗಿತ್ತು.

ಇಷ್ಟೆಲ್ಲ ನಡೆದರು ಸಂತಾನೋತ್ಪತ್ತಿ ವಿಷಯದಲ್ಲಿ ಮಾತ್ರ ಮಹಿಳೆಯರು ನೇಪಥ್ಯದಲ್ಲಿ ಉಳಿದುಬಿಟ್ಟದ್ದಾರೆ. ಅಭಿವೃದ್ಧಿಯ ವಿಷಯ ಕುರಿತಂತೆ ಮಹಿಳೆ ಅದರ ಸಾಧನವಾಗಿ ಮುಂದುವರಿದಿದ್ದಾಳೆ ವಿನಾ ಅವಳು ಅದರ 'ಸಾಧ್ಯ' ವೂ ಆಗಿದ್ದಾಳೆ ಎಂಬ ಅರಿವು ಇನ್ನೂ ಮೂಡಿಲ್ಲ. ಸಂವಿಧಾನದ ಪೀಠಿಕಾ ಭಾಗದಲ್ಲಿ ಮತ್ತು ರಾಜ್ಯ ನಿರ್ದೇಶನ ತತ್ವಗಳಲ್ಲಿ ಅಡಕವಾಗಿರುವ ಸಮಾನತೆ ಸಂಬಂಧಿ ಸೂತ್ರಗಳಿಗೆ ಅಭಿವೃದ್ಧಿ ಕ್ಷೇತ್ರದಲ್ಲಾಗಲಿ ಅಥವಾ ಕುಟುಂಬಯೋಜನೆಯಲ್ಲಾಗಲಿ ಮಹಿಳೆಯರ 'ನಿಯೋಗವಾದಿ' ಪಾತ್ರದ ಮೇಲೆ ಯಾವುದೇ ಬಗೆಯ ಪರಿಣಾಮ ಬೀರುವುದು ಸಾಧ್ಯವಾಗಿಲ್ಲ.

ಪ್ರಸ್ತುತ ಅಧ್ಯಯನ ಪ್ರಬಂಧದಲ್ಲಿ ಕುಟುಂಬಯೋಜನೆ ಕಾರ್ಯಕ್ರಮದ ಲಿಂಗಸಂಬಂಧಿ ಸ್ವರೂಪವನ್ನು ಹಿಡಿದಿಡಲು ಪ್ರಯತ್ನಿಸಲಾಗಿದೆ. ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯ ಒಂದು ವಿಸ್ತೃತರೂಪವೇ ಕುಟುಂಬಯೋಜನೆ ಎಂಬುದನ್ನು ತೋರಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಕುಟುಂಬಯೋಜನೆ ಕಾರ್ಯಕ್ರಮದ ಮೂಲದಲ್ಲಿ ಪುರುಷಶಾಹಿತ್ವವು ಚಾಲಕಶಕ್ತಿಯಾಗಿ ಕೆಲಸ ಮಾಡುತ್ತಿರುವ ಸಂಗತಿಯನ್ನು ಇಲ್ಲಿ ಚರ್ಚಿಸಲಾಗಿದೆ. ನಮ್ಮ ದೇಶದಲ್ಲಿ ಇಂದು ಆಚರಣೆಯಲ್ಲಿರುವ ಕುಟುಂಬಯೋಜನೆ ಕಾರ್ಯಕ್ರಮವು ಮಾಲ್ಥಸ್‌ವಾದಿ ವಿಚಾರಗಳಿಂದ ಸಂಪೂರ್ಣವಾಗಿ ಪ್ರಭಾವಿತಗೊಂಡಿರುವುದನ್ನು ತೋರಿಸುವುದರ ಜೊತೆಗೆ ಅದನ್ನು 'ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆ' ನೆಲೆಯಲ್ಲಿ ವಿಶ್ಲೇಷಿಸಲು ಪ್ರಯತ್ನಿಸಲಾಗಿದೆ.

ಈ ಪ್ರಬಂಧವು ಒಟ್ಟು ಮೂರು ಭಾಗಗಳನ್ನು ಒಳಗೊಂಡಿದೆ. ಮೊದಲನೆಯ ಭಾಗದಲ್ಲಿ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ವಿವರಿಸುವುದರ

ಜೊತೆಗೆ ಕುಟುಂಬಯೋಜನೆ ಕಾರ್ಯಕ್ರಮವು ಯಾಕೆ ಮಹಿಳೆಯರನ್ನೇ ಸಂಪೂರ್ಣವಾಗಿ ತಬ್ಬಿಕೊಂಡಿದೆ ಎಂಬ ಸಂಗತಿಯನ್ನು ವಿಶ್ಲೇಷಿಸಲಾಗಿದೆ. ಎರಡನೆಯ ಭಾಗದಲ್ಲಿ ಕುಟುಂಬಯೋಜನೆ ಕಾರ್ಯಕ್ರಮದ ಮಾಲ್ಥಸ್‌ವಾದಿ ಸ್ವರೂಪವನ್ನು, ಅದರ ಇತಿ - ಮಿತಿಗಳನ್ನು ಚರ್ಚಿಸಲಾಗಿದೆ. ಮೂರನೆಯ ಭಾಗದಲ್ಲಿ ಮಾನವ ಅಭಿವೃದ್ಧಿ ವಿಚಾರ ಪ್ರಮಾಣಿಕೆಯನ್ನು ಆಧರಿಸಿರುವ ಜನಸಂಖ್ಯಾ ನೀತಿ ಕೇರಳದಂತಹ ರಾಜ್ಯದಲ್ಲಿ ಹೇಗೆ ಯಶಸ್ವಿಯಾಗಿದೆ ಮತ್ತು ಅದು ಇತರ ರಾಜ್ಯಗಳಿಗೂ ಸೂಕ್ತವಾಗಿರುವ ಸಂಗತಿಯನ್ನು ಚರ್ಚಿಸಲಾಗಿದೆ.

## ಭಾಗ-೧

ಜನಸಂಖ್ಯೆಯಲ್ಲಿ ಮಹಿಳೆಯರು ಸರಿಸುಮಾರು ಅರ್ಧದಷ್ಟಿರುವುದು ಒಂದು ವಾಸ್ತವಿಕ ಸಂಗತಿ. ಕುಟುಂಬದ ಸದಸ್ಯರಾಗಿ ಅವರು ತಮ್ಮ ಕಾರ್ಯ ನಿರ್ವಹಿಸುತ್ತಿರುವುದು, ಹೊಸ ತಲೆಮಾರಿನ ಸೃಷ್ಟಿಕರ್ತರೂ ಆಗಿರುವುದು, ಸರಕು-ಸೇವೆಗಳನ್ನು ಉತ್ಪಾದಿಸುತ್ತಿರುವುದು, ಉದ್ಯೋಗಿಗಳಾಗಿರುವುದು, ನಾಗರಿಕರಾಗಿರುವುದು, ಪಾರ್ಲಿಮೆಂಟಿನಲ್ಲಿ, ವಿಧಾನಸಭೆಗಳಲ್ಲಿ, ಪಂಚಾಯತ್‌ಗಳಲ್ಲಿ ಜನಪ್ರತಿನಿಧಿಗಳಾಗಿರುವುದು – ಮುಂತಾದವುಗಳೆಲ್ಲವೂ ಸಾಮಾಜಿಕ ವಾಸ್ತವಗಳಾಗಿವೆ. ದುರಂತವೆಂದರೆ ಸಂತಾನೋತ್ಪತ್ತಿ ಸಂಬಂಧಿ ವಿಷಯಗಳಲ್ಲಿ ಅವಳಿಗೆ ಸ್ವಾಯತ್ತತೆ ಇಲ್ಲ. ಆಕೆಯ ದುಡಿಮೆಯನ್ನು ಉದ್ಯೋಗವೆಂದು ಸಮಾಜ ಒಪ್ಪಿಕೊಂಡಿಲ್ಲ. ರಾಷ್ಟ್ರೀಯ ದುಡಿಮೆಯ ಭಾರದಲ್ಲಿ ಶೇ ೫೩ ರಷ್ಟನ್ನು ಆಕೆ ನಿಭಾಯಿಸುತ್ತಿದ್ದಾಳೆ. ಆಕೆಯ ದುಡಿಮೆಯಲ್ಲಿ ಕೇವಲ ೧/೩ರಷ್ಟು ಮಾತ್ರ ಆರ್ಥಿಕ ಮಾಪನಕ್ಕೆ ಒಳಗಾಗಿದೆ. ಜಾಗತಿಕ ಮಟ್ಟದಲ್ಲಿ ಆಕೆಯ ಅವ್ಯಕ್ತ ದುಡಿಮೆಯ ಮೌಲ್ಯ '೧೧ ಟ್ರಿಲಿಯನ್ ಡಾಲರ್' ಎಂದು ಅಂದಾಜು ಮಾಡಲಾಗಿದೆ. ತಾಯಂದಿರ ಮರಣ ಪ್ರಮಾಣ ಭಾರತದಲ್ಲಿ ಅತ್ಯಧಿಕ ಮಟ್ಟದಲ್ಲಿದೆ. ಅಭಿವೃದ್ಧಿಶೀಲ ದೇಶಗಳಲ್ಲಿ ೧೫ರಿಂದ ೪೫ ವರ್ಷಗಳ ವಯೋಮಾನದ ಮಹಿಳೆಯರಲ್ಲಿ ಶೇ ೮೦ ರಷ್ಟು ಮಹಿಳೆಯರು ಅನಿಮಿಯಾ-'ರಕ್ತ ಹೀನತೆ' ಯಿಂದ ನರಳುತ್ತಿದ್ದಾರೆ. ಅನೇಕ ಹೆಣ್ಣು ಮಕ್ಕಳು ಭ್ರೂಣದ ಹಂತದಲ್ಲೇ ಸಾವಿಗೀಡಾಗುತ್ತವೆ ಅಥವ ಕೊಲೆಗೆ ಈಡಾಗುತ್ತವೆ. ಉಳಿದವರಲ್ಲಿ ಅನೇಕರು ಜನಿಸಿದ ಮೇಲೆ ಸಾವಿಗೀಡಾಗುತ್ತಾರೆ ಇಲ್ಲವೆ ಕೊಲೆಗೆ ಈಡಾಗುತ್ತಾರೆ. ಬದುಕಿನ ಎಲ್ಲ ಸಂಗತಿಗಳಲ್ಲೂ ಅಂದರೆ ಭ್ರೂಣವಾಗಿ ತಾಯಿ ಗರ್ಭ ಸೇರಿದಾಗಿನಿಂದ, ಕೊನೆಯಲ್ಲಿ ಭೂಮಿಯ ಗರ್ಭ ಸೇರುವವರೆಗೆ ಅವಳು ತಾರತಮ್ಯ ಮತ್ತು ದಮನಕ್ಕೆ ಒಳಗಾಗುತ್ತಿದ್ದಾಳೆ. ಲಿಂಗ ಪರಿಮಾಣವು ಅವಳಿಗೆ ಪ್ರತಿಕೂಲವಾಗಿದೆ. ಅವರ ಸಂಖ್ಯೆ ಸಾಪೇಕ್ಷವಾಗಿ ಕಡಿಮೆಯಾಗುತ್ತಿದೆ. ಬದುಕಿನ ಎಲ್ಲ ಹಂತಗಳಲ್ಲೂ ಒಂದೋ ಅವರು 'ಇಲ್ಲ' ವಾಗುತ್ತಿದ್ದಾರೆ, 'ಕಳೆದು' ಹೋಗುತ್ತಿದ್ದಾರೆ. 'ಪಲ್ಲಟ' ಗೊಳ್ಳುತ್ತಿದ್ದಾರೆ, ಇಲ್ಲವೆ 'ದೈನೇಸಿ' ಬದುಕನ್ನು ಬದುಕುತ್ತಿದ್ದಾರೆ. ಮನೆಗಳಲ್ಲಿ ಸಾಕಷ್ಟು ಆಹಾರ ಲಭ್ಯವಿದ್ದರೂ

ಮಹಿಳೆಯರಲ್ಲಿ ಶೇ ೯೦ರಷ್ಟು ಅಲ್ಪಪೌಷ್ಟಿಕತೆ- ಅಪೌಷ್ಟಿಕತೆಗಳಿಂದ ನರಳುತ್ತಿದ್ದಾರೆ. ಆಹಾರವನ್ನು ಸಿದ್ಧಪಡಿಸುವವರು-ವಿತರಿಸುವವರು ಅವರುಗಳಾಗಿದ್ದರು. ಅದರ ಅನುಭೋಗದಲ್ಲಿ ಆಕೆಗೆ ಸಮಾನ ಪಾಲು ದೊರೆಯುತ್ತಿಲ್ಲ. ಇದು ತೀವ್ರ ಸ್ವರೂಪದ ಆತಂಕಕ್ಕೆ, ತಲ್ಲಣಕ್ಕೆ ಕಾರಣವಾಗಿದೆ. ಈ ಕಾರಣದಿಂದಾಗಿಯೆ ಕುಟುಂಬಯೋಜನೆ ಕುರಿತಂತೆ ನಮ್ಮ ಧೋರಣೆಗಳು ಬದಲಾಗಬೇಕಾದ ಪ್ರಮೇಯ ಬಂದಿದೆ.

ಸಂತಾನೋತ್ಪತ್ತಿಗೆ ಸಂಬಂಧಿಸಿದ ಸಂಗತಿಗಳನ್ನು ಕುರಿತಂತೆ ನಿರ್ಣಯಗಳನ್ನು ರಾಜಕೀಯ ಕಾರ್ಯ ನಿರ್ವಹಣಾಧಿಕಾರಿಗಳು ತೆಗೆದುಕೊಂಡರೆ, ಅವುಗಳನ್ನು ಆಡಳಿತಾತ್ಮಕ ಕಾರ್ಯ ನಿರ್ವಹಣಾಧಿಕಾರಿಗಳು ಯಾಂತ್ರಿಕವಾಗಿ ಅನುಷ್ಠಾನಗೊಳಿಸುತ್ತಿದ್ದಾರೆ. ಇಂತಹ ಸನ್ನಿವೇಶದಲ್ಲಿ ಮೇಲಿನಿಂದ ಹೇರಲ್ಪಡುವ ನಿರ್ಣಯಗಳು ಮಹಿಳೆಯರ ವ್ಯಕ್ತಿಗತ ಹಾಗೂ ಸಾಮಾಜಿಕ ಹಿತಾಸಕ್ತಿಗಳನ್ನು ಕಾಪಾಡಬಲ್ಲವೆ?-ಎಂಬುದನ್ನು ಮಹಿಳೆಯರು ತೂಗಿ ನೋಡಬೇಕಾಗಿದೆ. ಅಂತಹ ಸಾಮರ್ಥ್ಯವನ್ನು, ಸ್ವಾಯತ್ತತೆಯನ್ನು ಮಹಿಳೆಯರು ಗಳಿಸಿಕೊಳ್ಳಬೇಕಾಗಿದೆ. ಜನಸಂಖ್ಯಾನೀತಿ ಮತ್ತು ಕುಟುಂಬ ಯೋಜನಾ ಕಾರ್ಯಕ್ರಮಗಳ ಮೂಲದಲ್ಲಿ ಪುರುಷಶಾಹಿತ್ವ (patriarchy)ವು ಕೆಲಸಮಾಡುತ್ತಿದೆ. ಇದನ್ನು ಮಹಿಳೆಯರು ಮೊದಲು ಅರ್ಥಮಾಡಿಕೊಳ್ಳಬೇಕಾಗಿದೆ.

### ಕುಟುಂಬ ಯೋಜನೆ ಮತ್ತು ಪುರುಷಶಾಹಿತ್ವ

ನಮ್ಮ ಸಮಾಜದ ಸಂದರ್ಭದಲ್ಲಿ ಪರಂಪರೆ ಹಾಗೂ ಆಧುನಿಕತೆಗಳೆರಡೂ ಪುರುಷಶಾಹಿತ್ವವನ್ನು ಅಂತರ್ಗತ ಮಾಡಿಕೊಂಡಿವೆ. ಲಿಂಗ ತಾರತಮ್ಯ ಧೋರಣೆಗಳು ಎರಡೂ ಪ್ರಕ್ರಿಯೆಗಳಲ್ಲಿ ಮಡುಗಟ್ಟಿಕೊಂಡಿವೆ. ಆಧುನಿಕತೆಯನ್ನು ಪ್ರಸರಿಸುತ್ತಿರುವ ಎಲ್ಲ ಸಾಧನಗಳು, ಉದಾಹರಣೆಗೆ ಕುಟುಂಬಯೋಜನೆಯನ್ನು ಸೇರಿಸಿಕೊಂಡು, ಪುರುಷಶಾಹಿತ್ವದಿಂದ ನರಳುತ್ತಿರುವುದನ್ನು ನೋಡಬಹುದಾಗಿದೆ. ಕುಟುಂಬ ಯೋಜನೆಯು ಇಂದು ಸಂಪೂರ್ಣವಾಗಿ ಮಹಿಳೆಯರಿಗೆ ಸಂಬಂಧಿಸಿದ ಸಂಗತಿಯಾಗಿದ್ದರೆ, ಅದರ ಮೂಲದಲ್ಲಿ ಪುರುಷಶಾಹಿತ್ವವು ಚಾಲಕ ಶಕ್ತಿಯಾಗಿ ಕೆಲಸ ಮಾಡುತ್ತಿರುವುದನ್ನು ಕಾಣಬಹುದು. ಕೋಷ್ಟಕ-೧ ರಲ್ಲಿ ಕರ್ನಾಟಕ ರಾಜ್ಯದ ಸಂತಾನಹರಣ ಶಸ್ತ್ರಚಿಕಿತ್ಸೆಯಲ್ಲಿನ ಲಿಂಗಸ್ವರೂಪವನ್ನು ತೋರಿಸಿದೆ. ೧೯೮೯-೯೦ ರಲ್ಲಿ ರಾಜ್ಯದಲ್ಲಿ ಸಂತಾನಹರಣ ಶಸ್ತ್ರಚಿಕಿತ್ಸೆಗೆ ಒಳಗಾದ ಜನರ ಸಂಖ್ಯೆ ೨೮.೫೩ ಲಕ್ಷ. ಇವರಲ್ಲಿ ಮಹಿಳೆಯರ ಪ್ರಮಾಣ ಶೇ೯೯.೨೩. ೧೯೯೩-೯೪ ರಲ್ಲಿ ಸಂತಾನಹರಣ ಶಸ್ತ್ರಚಿಕಿತ್ಸೆಗೊಳಗಾದವರಲ್ಲಿ ಮಹಿಳೆಯರ ಪ್ರಮಾಣ ಶೇ ೯೯.೮೯. ೧೯೮೯-೯೦ ರಲ್ಲಿ ಸಂತಾನಹರಣ ಶಸ್ತ್ರಚಿಕಿತ್ಸೆಗೆ ಒಳಗಾದ ಪುರುಷರ ಸಂಖ್ಯೆ ೨೨೦೦೦ ಇದ್ದುದ್ದು ೧೯೯೩-೯೪ರಲ್ಲಿ ೪೦೦೦ಕ್ಕೆ ಇಳಿದಿದೆ. ಆದರೆ ಶಸ್ತ್ರಕ್ರಿಯೆಗೊಳಗಾಗುತ್ತಿರುವ ಮಹಿಳೆಯರ ಸಂಖ್ಯೆಯು ವರ್ಷದಿಂದ ವರ್ಷಕ್ಕೆ ಏರಿಕೆಯಾಗುತ್ತಲೇ ನಡೆದಿದೆ.

ಸಂತಾನೋತ್ಪತ್ತಿ ಶಕ್ತಿಯನ್ನು ಪುರುಷತ್ವದ ಒಂದು ಹೆಗ್ಗುರತನ್ನಾಗಿ ಪರಿಗಣಿಸಲಾಗಿದೆ. ಈ ಸಂತಾನೋತ್ಪತ್ತಿ ಶಕ್ತಿಯ ಪ್ರದರ್ಶನವು ಮಹಿಳೆಯರ ಮೂಲಕವೇ ನಡೆಯಬೇಕಾಗಿದೆ. ಪುರುಷವರ್ಗದ ಸಂತಾನೋತ್ಪತ್ತಿ ಶಕ್ತಿಯ ಅಟ್ಟಹಾಸದಲ್ಲಿ ಹೆಣ್ಣು ಕೇವಲ ಒಂದು ಸಾಧನವಾಗಿದ್ದಾಳೆ. ಸಾಮಾಜಿಕ ಹಾಗೂ ಕೌಟುಂಬಿಕ ನೆಲೆಗಳಲ್ಲಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರವನ್ನು ಪುರುಷವರ್ಗ ಹೇಗೆ ತನ್ನ ಮನಾಪಲಿ ಮಾಡಿಕೊಂಡಿದೆಯೋ ಅದೇ ರೀತಿ ಸಂತಾನೋತ್ಪತ್ತಿ ವಿಷಯದಲ್ಲಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರವು ಗಂಡಿನದ್ದಾಗಿದೆ. ಪುರುಷಶಾಹಿತ್ವದ ಆಜ್ಞಾಧಾರಕಳಾಗಿರುವ ಸ್ಥಿತಿ ಮಹಿಳೆಯದ್ದಾಗಿದೆ. ಸಂತಾನೋತ್ಪತಿ ವಿಷಯಕ್ಕೆ ಸಂಬಂಧಿಸಿದಂತೆ ನಿರ್ಣಯ ತೆಗೆದುಕೊಳ್ಳುವ ಕಾರ್ಯದಲ್ಲಿ ಹೆಣ್ಣಿನ ಸಹಭಾಗಿತ್ವ ಶೂನ್ಯವೆಂದರೂ ನಡೆಯುತ್ತದೆ. ಕುಟುಂಬದ ಪುರುಷವರ್ಗ ಅಥವಾ ಕುಟುಂಬದ ಹಿರಿಯ ಮಹಿಳೆಯರ ನಿರ್ಣಯಕ್ಕೆ ಅನುಸಾರವಾಗಿ ಹದಿಹರೆಯದ ಮಹಿಳೆಯರು ನಡೆಯಬೇಕಾದ ದುಸ್ಥಿತಿ ನಮ್ಮ ಸಮಾಜದಲ್ಲಿದೆ.

**ಕುಟುಂಬ ಯೋಜನೆ ಮತ್ತು ಸಂತಾನಹರಣ ಶಸ್ತ್ರಚಿಕಿತ್ಸೆ : (ಲಿಂಗವಾರು)**

**ಕೋಷ್ಟಕ-೧**

| ವರ್ಷ | ಕುಟುಂಬ ಕಲ್ಯಾಣ ಕೇಂದ್ರಗಳ ಸಂಖ್ಯೆ | ಸಂತಾನಹರಣ ಶಸ್ತ್ರಚಿಕಿತ್ಸೆ (ಸಾವಿರಗಳಲ್ಲಿ) | | | | ಮಹಿಳೆಯರ ಶೇಕಡ ಪ್ರಮಾಣ |
|---|---|---|---|---|---|---|
| | | ಗುರಿ | ಮಹಿಳೆಯರು | ಪುರುಷರು | ಒಟ್ಟು | |
| ೧೯೮೯-೯೦ | ೪೬೭ | ೩೧೧೦ | ೨೮೩೧ | ೨೨ | ೨೮೫೩ | ೯೯.೨೩ |
| ೧೯೯೦-೯೧ | ೪೬೭ | ೩೬೨೦ | ೨೮೧೩ | ೧೧ | ೨೮೨೪ | ೯೯.೬೧ |
| ೧೯೯೧-೯೨ | ೪೬೭ | ೩೪೫೦ | ೩೦೦೯ | ೭ | ೩೦೧೬ | ೯೯.೭೭ |
| ೧೯೯೨-೯೩ | ೪೭೪ | ೩೬೦೦ | ೩೩೦೯ | ೫ | ೩೩೧೪ | ೯೯.೮೯ |
| ೧೯೯೩-೯೪ | ೪೬೦ | ೩೮೦೦ | ೩೫೫೯ | ೪ | ೩೫೬೩ | ೯೯.೮೯ |

ಮೂಲ : Statistical Abstract of Karnataka 1993-94, Table: 28.5 p-347. Directorate of Economics and Statistics. Bangalore 1997.

ಕುಟುಂಬ ಯೋಜನೆ ಎಂಬುದು ಸಂತಾನಹರಣ ಶಸ್ತ್ರಚಿಕಿತ್ಸೆಗೆ, ಮಹಿಳೆಯರು ಉಪಯೋಗಿಸುವ ಗರ್ಭನಿರೋಧಕ ವಿಧಾನಗಳಿಗೆ ಮೀಸಲುಗೊಂಡಿರುವಂತೆ ಕಾಣುತ್ತಿದೆ. ಸಂತಾನಹರಣ ಶಸ್ತ್ರಚಿಕಿತ್ಸೆಯಲ್ಲಿ ನೂರಕ್ಕೆ ತೊಂಬತ್ತರಷ್ಟು ಮಹಿಳೆಯರು ಭಾಗವಹಿಸುತ್ತಿದ್ದಾರೆ. ಗರ್ಭನಿರೋದಕ ವಿಧಾನಗಳನ್ನು ಕುರಿತಂತೆ ತಾಂತ್ರಿಕ ಸಂಶೋಧನೆಗಳು

ಮಹಿಳೆಯರನ್ನು ಗುರಿಯಾಗಿಟ್ಟುಕೊಂಡೆ ನಡೆಯುತ್ತಿವೆ. ಕುಟುಂಬ ಯೋಜನೆಗೆ ಸಂಬಂಧಪಟ್ಟ ತಾಂತ್ರಿಕ ಪರಿಶೋಧಗಳಿಗೆ ಮಹಿಳೆಯರು ಬಲಿಪಶುಗಳಾಗುತ್ತಿದ್ದಾರೆ. ಕುಟುಂಬಯೋಜನೆಯು ಏಕೆ ಹೀಗೆ ಮಹಿಳಾ ವರ್ಗವನ್ನು ಮಾತ್ರ ಒಳಗೊಂಡಿರುವ ಕಾರ್ಯಕ್ರಮವಾಗಿ ಬಿಟ್ಟಿದೆ? ಜೈವಿಕವಾಗಿ ೪೫ವರ್ಷಗಳ ನಂತರ ಮಹಿಳೆಯು ಸಂತಾನೋತ್ಪತ್ತಿ ಸಾಮರ್ಥ್ಯ-ಫಲವಂತಿಕೆ ಮುಗಿದು ಹೋಗಿ ಬಿಡುತ್ತದೆ. ಆದರೆ ಪುರುಷರಿಗೆ ಸಂಬಂಧಿಸಿದಂತೆ ಫಲವಂತಿಗೆ ಸಾಮರ್ಥ್ಯವು ೪೫ವರ್ಷಗಳ ನಂತರವೂ ಸಕ್ರಿಯವಾಗಿರುತ್ತದೆ.ಇಷ್ಟಾದರೂ ಸಹ ಕುಟುಂಬಯೋಜನೆ ಕೇವಲ ಮಹಿಳೆಯರನ್ನು ಮಾತ್ರ ಗುರಿಯನ್ನಾಗಿ ಮಾಡಿಕೊಂಡಿರುವುದೇಕೆ?

'ಸಂತಾನಹರಣ ಶಸ್ತ್ರಚಿಕಿತ್ಸೆ' ಎಂಬುದನ್ನು ಸಮಾಜವು ಪುರುಷತ್ವದ ನಾಶವೆಂದೆ ಭಾವಿಸಿಬಿಟ್ಟಿದೆ. ಸಂತಾನಹರಣ ಶಸ್ತ್ರಕ್ರಿಯೆಗೆ ಒಳಗಾದ ಪುರುಷನನ್ನು 'ಬೀಜ ಹೊಡೆಸಿಕೊಂಡ ಹೋರಿ'ಗೆ ಹೋಲಿಸುವುದು ರೂಢಿಯಲ್ಲಿದೆ. ಸಂತಾನೋತ್ಪತ್ತಿ ಪ್ರಕ್ರಿಯೆಯಲ್ಲಿ ಸಾಧನವಾಗಿ ಕೆಲಸ ಮಾಡುವ ಮಹಿಳೆಯರಿಗೆ ಮಾತ್ರ ಕುಟುಂಬಯೋಜನೆಯನ್ನು ಅನ್ವಯ ಮಾಡುತ್ತಿರುವುದು ಆಶ್ಚರ್ಯ ಹುಟ್ಟಿಸಬೇಕಾಗಿಲ್ಲ. ಸಂತಾನಹರಣ ಶಸ್ತ್ರಚಿಕಿತ್ಸೆಯನ್ನು ಸಂಪೂರ್ಣವಾಗಿ ಮಹಿಳೆಯರಿಗೆ ವಹಿಸಿಬಿಟ್ಟು, ಪುರುಷಶಾಹಿತ್ವವು ವಿಜೃಂಭಿಸುತ್ತಿರುವುದನ್ನು ನಾವು ನೋಡಬಹುದಾಗಿದೆ. ಪುರುಷಶಾಹಿತ್ವವನ್ನು ಮೈಗೂಡಿಸಿಕೊಂಡಿರುವ ತಂತ್ರಜ್ಞಾನ ಕ್ಷೇತ್ರದಲ್ಲಿ ಗರ್ಭನಿರೋಧಕ ವಿಧಾನಗಳ ಬಗ್ಗೆ ನಡೆಯುತ್ತಿರುವ ತಾಂತ್ರಿಕ ಪರಿಶೋಧನೆಗಳು ಮಹಿಳೆಯರನ್ನು ಗುರಿಯನ್ನಾಗಿಸಿಕೊಂಡಿರುವುದು ಆಕಸ್ಮಿಕವಲ್ಲ.

ಪುರುಷಶಾಹಿತ್ವದ ಎರಡು ಮುಖ್ಯ ಸಂಗತಿಗಳೆಂದರೆ ಹೆಣ್ಣಿನ ಮೇಲೆ ಅಧಿಕಾರ ಚಲಾಯಿಸುವುದು ಮತ್ತು ಸಂತಾನೋತ್ಪತ್ತಿ ವಿಷಯದಲ್ಲಿ ನಿರ್ಣಯ ತೆಗೆದುಕೊಳ್ಳುವ ಅಧಿಕಾರದ ಮನಾಪಲಿ. ಈ ಎರಡು ಉದ್ದೇಶಗಳನ್ನು ಈಡೇರಿಸಿಕೊಳ್ಳಲು ಕುಟುಂಬ ಯೋಜನೆಯು ಅತ್ಯಂತ ಉಪಯುಕ್ತವಾದ ಸಾಧನವಾಗಿಬಿಟ್ಟಿತು. ಸಾಂಪ್ರದಾಯಿಕವಾಗಿ ಸಮಾಜದಲ್ಲಿ ಹಾಗೂ ಕುಟುಂಬವಲಯದಲ್ಲಿ ಪ್ರಚಲಿತದಲ್ಲಿರುವ ಲಿಂಗತಾರತಮ್ಯ-ಲಿಂಗಅಸಮಾನತೆಗಳನ್ನು ಕುಟುಂಬ ಯೋಜನೆಯು ಊರ್ಜಿತಗೊಳಿಸುವ ಮತ್ತು ಗಟ್ಟಿಗೊಳಿಸುವ ಒಂದು ಸಾಧನವಾಗಿಬಿಟ್ಟಿದೆ.

ಕುಟುಂಬಯೋಜನೆಯು ಕೇವಲ ಹೆಣ್ಣನ್ನು ಮಾತ್ರ ಗುರಿಯನ್ನಾಗಿಸಿಕೊಂಡಿರಲು ಹಾಗೂ ಪುರುಷರನ್ನು ಅದು ಒಳಗೊಳ್ಳದಿರುವುಕ್ಕೆ ಇನ್ನೊಂದು ಮುಖ್ಯ ಕಾರಣ ಹೀಗಿದೆ. ದುಡಿಮೆಯನ್ನು ಪುರುಷನಿಗೆ ಸಂಬಂಧಿಸಿದ ಒಂದು ಸಂಗತಿಯನ್ನಾಗಿ ಮಾಡಲಾಗಿದೆ. ದುಡಿಮೆ-ದುಡಿಮೆಗಾರ ಇವೆಲ್ಲ ಪುರುಷನಿಗೆ ಸಂಬಂಧಪಟ್ಟ ಸಂಗತಿಗಳಾಗಿ ಬಿಟ್ಟಿವೆ. ಮಹಿಳೆಯರ ದುಡಿಮೆಯನ್ನು ದುಡಿಮೆಯೆಂದು ಸಮಾಜ ಪರಿಗಣಿಸುತ್ತಿಲ್ಲ. ಮಹಿಳೆಯರ ದುಡಿಮೆ ಸಪ್ಲಿಮೆಂಟರಿ ಅಥವಾ ಆನುಷಂಗಿಕವಾದುದೇ ವಿನಾ ಪ್ರಧಾನವಾದುದಲ್ಲ. ಕುಟುಂಬ ಯೋಜನೆಯು ದುಡಿಮೆಗೆ ಮಾರಕವಾಗುತ್ತದೆ ಎಂಬ ಭ್ರಮೆಯನ್ನು

ಹುಟ್ಟಿಸಲಾಗಿದೆ. ದುಡಿಮೆಗೆ ಸಂವಾದಿಯಾಗಿರುವ ಪುರುಷರು ಕುಟುಂಬಯೋಜನೆಗೆ ಸಂಬಂಧಿಸಿದ ಶಸ್ತ್ರಕ್ರಿಯೆಗೆ ಒಳಗಾಗುವುದು ಸಾಧ್ಯವಿಲ್ಲ. ಏಕೆಂದರೆ ಶಸ್ತ್ರಕ್ರಿಯೆಯಿಂದ ಸಮಾಜದ ದುಡಿಮೆಗೆ ಧಕ್ಕೆ ಉಂಟಾಗುತ್ತದೆ ಎಂದು ಭಾವಿಸಲಾಗಿದೆ. ಕುಟುಂಬ ಯೋಜನೆಗೆ ಮಹಿಳೆಯರು ಒಳಗಾದರೆ ದುಡಿಮೆಗೆ ಯಾವುದೇ ಧಕ್ಕೆ ಉಂಟಾಗುವುದಿಲ್ಲ ಎಂದು ವಾದಿಸಲಾಗುತ್ತಿದೆ. ಈ ಬಗೆಯ ವಾದಗಳಿಂದಾಗಿ, ನಂಬಿಕೆ-ಗ್ರಹಿಕೆಗಳಿಂದಾಗಿ ಕುಟುಂಬಯೋಜನೆ ಸಂಪೂರ್ಣವಾಗಿ ಮಹಿಳೆಯರಿಗೆ ಸಂಬಂಧಪಟ್ಟ ಸಂಗತಿಯಾಗಿಬಿಟ್ಟಿದೆ.

ಜನಸಂಖ್ಯೆಯ ಮಿತಿಮೀರಿದ ಬೆಳವಣಿಗೆಯನ್ನು ನಿಯಂತ್ರಿಸಲು ಕುಟುಂಬಯೋಜನೆ ಅನಿವಾರ್ಯ ಮತ್ತು ಅತ್ಯಗತ್ಯ ಎಂಬುದು ಜನರ ಮನಸ್ಸಿನಲ್ಲಿ ಅಚ್ಚೊತ್ತಿದಂತೆ ಗಟ್ಟಿಯಾಗಿ ನೆಲೆಯೂರಿದೆ. ಕುಟುಂಬಯೋಜನೆಯನ್ನು ಅನುಸರಿಸುವುದು, ಸಣ್ಣ ಕುಟುಂಬ ಮುಂತಾದವು ಆಧುನಿಕ ಮೌಲ್ಯಗಳೆಂದು ಸಮಾಜ ಒಪ್ಪಿಕೊಂಡಿದೆ. ಸರೀಕರ ಮುಂದೆ ತಲೆ ಎತ್ತಿ ಸಮಾನ ಸ್ಥಾನದಲ್ಲಿ ನಿಲ್ಲಲು ಸಣ್ಣ ಕುಟುಂಬ ಅಗತ್ಯವಾದ ಸಂಗತಿಯಾಗಿದೆ. ಪುರುಷಶಾಹಿತ್ವಕ್ಕೆ ಕಂಟಕವಾಗಿರುವ ಕುಟುಂಬಯೋಜನೆಯನ್ನು ಪುರುಷವರ್ಗವು ಅನುಸರಿಸುವುದು ಸಾಧ್ಯವಿಲ್ಲ. ಆದರೆ ಕುಟುಂಬ ಯೋಜನೆಯನ್ನು ಅನುಸರಿಸುವುದು ಅನಿವಾರ್ಯವಾಗಿದೆ. ಪುರುಷಶಾಹಿತ್ವಕ್ಕೆ ತನ್ನ ಅಧಿಕಾರ ಮತ್ತು ಅಧಿಪತ್ಯ ಉಳಿಯಬೇಕು ಮತ್ತು ಕುಟುಂಬಯೋಜನೆಯು ಅನುಷ್ಠಾನಗೊಳ್ಳಬೇಕು. ಈ ಕಾರಣದಿಂದಾಗಿ ಕುಟುಂಬಯೋಜನೆಯನ್ನು ಮಹಿಳೆಯರ ಜವಾಬ್ದಾರಿಯನ್ನಾಗಿ ಮಾಡಲಾಗಿದೆ.

## ಭಾಗ-೨

### ಕುಟುಂಬ ಯೋಜನೆಯ ಮಾಲ್ಥಸ್‌ವಾದಿ ಸ್ವರೂಪ

ಜನಸಂಖ್ಯೆಯ ಬೆಳವಣಿಗೆ ಕುರಿತಂತೆ ಚಿಂತನೆ ನಡೆಸಿದ, ಸಿದ್ಧಾಂತ ರೂಪಿಸಿದ, ಒಂದು ಪರಿಭಾಷೆಯನ್ನು ಕಟ್ಟಿದ ಕೀರ್ತಿ ಮಾಲ್ಥಸ್‌ಗೆ ಸಲ್ಲಬೇಕು. ಮಾಲ್ಥಸ್, ಮಾಲ್ಥಸ್‌ವಾದಿ, ನವ-ಮಾಲ್ಥಸ್‌ವಾದಿ ವಿಚಾರಗಳನ್ನು, ಸಿದ್ಧಾಂತಗಳನ್ನು, ಕಾರ್ಯನೀತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ನಮಗೆ ಕೆಲವು ಮುಖ್ಯ ಸಂಗತಿಗಳು ಅರಿವಿಗೆ ಬರುತ್ತವೆ: ಜನಸಂಖ್ಯೆಯ ಗಾತ್ರ ಮತ್ತು ಅಭಿವೃದ್ಧಿಗಳ ನಡುವೆ ವಿಲೋಮ ಸಂಬಂಧವಿದೆ; ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸುವುದು ಅಭಿವೃದ್ಧಿಯನ್ನು ಸಾಧಿಸಲು ಅತ್ಯಂತ ಅಗತ್ಯ: ಜನಸಂಖ್ಯೆಯ ಬೆಳವಣಿಗೆ ಗತಿಯನ್ನು ಸ್ವಇಚ್ಛೆಯಿಂದ ಕೂಡಿರುವ ಕುಟುಂಬ ಯೋಜನೆಯಿಂದ ಕಡಿಮೆ ಮಾಡಲು ಸಾಧ್ಯವಿಲ್ಲ; ಬಲಪ್ರಯೋಗವಾದಿ- ಉಗ್ರವಾದಿ ಕ್ರಮಗಳಿಂದ ಮಾತ್ರ ಜನಸಂಖ್ಯೆಯ ಬೆಳವಣಿಗೆ ಗತಿಯನ್ನು ನಿಯಂತ್ರಿಸಬಹುದು: ಆಹಾರೋತ್ಪನ್ನದ ಬೆಳವಣಿಗೆ ಗತಿಯು ಜನಸಂಖ್ಯೆಯ ಬೆಳವಣಿಗೆ ಗತಿಗಿಂತ ಅಧಿಕವಾಗಿಬಿಡುತ್ತದೆ. ಈ ವೈಚಾರಿಕ ಆಕೃತಿ-ವಿಚಾರ ಪ್ರಣಾಳಿಕೆಯು ಕೇವಲ 'ಸಂಖ್ಯೆ'ಯ ವ್ಯಸನವನ್ನು ಹಚ್ಚಿಕೊಂಡಿರುವುದರಿಂದ ಲಿಂಗಸಮಾನತೆ, ಮಾನವ ಹಕ್ಕುಗಳು, ಸಂತಾನೋತ್ಪತ್ತಿ ಆರೋಗ್ಯ, ಸಂತಾನೋತ್ಪತ್ತಿ ಹಕ್ಕುಗಳು, ಮಹಿಳೆಯರ ಸಬಲೀಕರಣ,

ಕುಟುಂಬ ಯೋಜನೆಯಲ್ಲಿ ಮಹಿಳಾ ಶಿಕ್ಷಣದ ನಿರ್ಣಾಯಕ ಪಾತ್ರ, ಅದರ ಉಪಕರಣವಾದಿ ಹಾಗೂ ಅಂತಸ್ಥವಾದಿ ಪಾತ್ರ, ಸಂತಾನೋತ್ಪತ್ತಿ ವಿಷಯಕ್ಕೆ ಸಂಬಂಧಿಸಿದಂತೆ ನಿರ್ಣಯ ತೆಗೆದುಕೊಳ್ಳುವಲ್ಲಿ ಸ್ವಾಯತ್ತತೆಯ ಮಹತ್ವ, ಮನೆಯಿಂದ ಹೊರಗೆ ಮಹಿಳೆಯರಿಗೆ ದುಡಿಯುವ ಅವಕಾಶ ಮುಂತಾದವುಗಳ ಬಗ್ಗೆ ಕುರುಡಾಗಿದೆ.

ಮಾಲ್ಥಸ್‌ವಾದಿ ವಿಚಾರ ಪ್ರಣಾಳಿಕೆ ಮತ್ತು ಅದನ್ನು ಆಧರಿಸಿರುವ ಅಭಿವೃದ್ಧಿ ಸಿದ್ಧಾಂತಗಳು ಲಿಂಗ ನಿರಪೇಕ್ಷ ಧೋರಣೆಯನ್ನು ಅಂತರ್ಗತ ಮಾಡಿಕೊಂಡಿವೆ. ಈ ಬಗೆಯ ವೈಚಾರಿಕ ಆಕೃತಿಯಲ್ಲಿ ಲಿಂಗ ಸಂಬಂಧಗಳು ಮುಖ್ಯವಾಗುವುದೆ ಇಲ್ಲ. ಇಲ್ಲಿ ಮಹಿಳೆಯು ಅಭಿವೃದ್ಧಿಯ 'ಸಾಧನ' ವಾಗಿದ್ದಾಳೆ ವಿನಾ ಅವಳು ಅದರ 'ಸಾಧ್ಯ'ವೂ ಹೌದು, ಅದರ 'ಗುರಿ'ಯೂ ಹೌದು, ಅದರ ಫಲದ ಪಾಲುದಾರಳೂ ಹೌದು ಎಂಬ ಅರಿವು ಇಲ್ಲಿ ಇಲ್ಲ. ಮಾಲ್ಥಸ್‌ವಾದಿ ವಿಚಾರಧಾರೆಗೆ ಜನಸಂಖ್ಯೆಯ ಗಾತ್ರವನ್ನು ಕಡಿಮೆಮಾಡುವುದು, ಜನಸಂಖ್ಯೆಯ ಮಿತಿಮೀರಿದ ಬೆಳವಣಿಗೆಯನ್ನು ತಗ್ಗಿಸುವುದು ಪ್ರಧಾನವಾದ ಸಂಗತಿಯಾಗಿ ಬಿಟ್ಟಿದೆ. ಜನಸಂಖ್ಯಾ ನೀತಿ ಎಂಬುದು ಅತ್ಯಂತ ಸೀಮಿತ ನೆಲೆಯಲ್ಲಿ ಕುಟುಂಬ ಯೋಜನೆಗೆ ಮತ್ತು ಕುಟುಂಬ ಯೋಜನೆಯು ಕೇವಲ ಸಂತಾನಹರಣಶಸ್ತ್ರಚಿಕಿತ್ಸೆಗೆ, ಗರ್ಭನಿರೋಧಕ ವಿಧಾನಗಳಿಗೆ ಅಂಟಿಕೊಂಡಿರುವುದನ್ನು ನೋಡಬಹುದಾಗಿದೆ. ಮಾಲ್ಥಸ್‌ವಾದಿ ವಿಚಾರ ಧಾರೆಯ ತೀವ್ರ ಪ್ರಭಾವದಿಂದ 'ಜನಸಂಖ್ಯೆ' ಎಂಬ ನುಡಿಯಲ್ಲಿ 'ಸಂಖ್ಯೆ' ಯು ಮುಖ್ಯವಾಗಿ 'ಜನ' ಆನುಷಂಗಿಕವಾಗಿ ಬಿಟ್ಟದೆ. ಮೂಲದಲ್ಲಿ ಜನಸಂಖ್ಯೆ ಎಂದರೆ ಒಂದು ನಿರ್ದಿಷ್ಟ ಪ್ರದೇಶದಲ್ಲಿ ಬದುಕುತ್ತಿರುವ 'ಜನರು' ಎಂಬ ಅರ್ಥವಿತ್ತು. ಆದರೆ ಮಾಲ್ಥಸ್‌ವಾದಿ ಪರಿಭಾಷೆಯಲ್ಲಿ ಅದರ ಅರ್ಥಮೀಮಾಂಸೆಯು ಬದಲಾಗಿಬಿಟ್ಟದೆ. ಮಾಲ್ಥಸ್‌ವಾದಿ-ನವಮಾಲ್ಥಸ್‌ವಾದಿ ವಿಚಾರ ಪ್ರಣಾಳಿಕೆಗೆ ಜನರ ಆರೋಗ್ಯ, ಜನರ ಬದುಕು, ಬವಣೆ, ಹಸಿವು, ಬಡತನಗಳು ಮುಖ್ಯವಾಗಲೇ ಇಲ್ಲ. ಮಾಲ್ಥಸ್‌ವಾದಿ ವಿಚಾರಧಾರೆ ಪ್ರಕಾರ ಇವೆಲ್ಲವು ಜನಸಂಖ್ಯೆಯ ತೀವ್ರಗತಿ ಬೆಳವಣಿಗೆಯ ಪರಿಣಾಮ. ಉಗ್ರರೂಪದ ಮಾಲ್ಥಸ್ ವಾದಿ-ನವ ಮಾಲ್ಥಸ್‌ವಾದಿ ವಿಚಾರ ಧಾರೆಯು ಜನಸಂಖ್ಯೆಯ ವಿಪರೀತ ಬೆಳವಣಿಗೆಗೆ ಬಡವರನ್ನು, ದುರ್ಬಲರನ್ನು, ಮಹಿಳೆಯರನ್ನು ಕಾರಣವನ್ನಾಗಿ ಮಾಡಿಬಿಟ್ಟಿದೆ.

**ಜನರು ಮೂಢರು!**

ಮಾಲ್ಥಸ್‌ಗೆ, ಮಾಲ್ಥಸ್ ವಾದಿಗಳಿಗೆ, ನವಮಾಲ್ಥಸ್‌ವಾದಿಗಳಿಗೆ ಜನರ ಅರಿವಿನ ಬಗ್ಗೆ ವಿವೇಕದ ಬಗ್ಗೆ ನಂಬಿಕೆ ಇಲ್ಲ. ದಂಪತಿಗಳು – ಕುಟುಂಬಗಳು ಸಂತಾನೋತ್ಪತ್ತಿ ಸಂಗತಿಗಳ ಬಗ್ಗೆ ವಿವೇಕಯುತ ತೀರ್ಮಾನ ತೆಗೆದುಕೊಳ್ಳಬಲ್ಲರು, ಸ್ವಇಚ್ಛೆಯಿಂದ ಸಂತಾನೋತ್ಪತ್ತಿ ವಿಷಯದಲ್ಲಿ ಸಮಾಜಕ್ಕೆ 'ಅಹಿತ'ವಾಗದ ರೀತಿಯಲ್ಲಿ ತೀರ್ಮಾನ ತೆಗೆದುಕೊಳ್ಳಬಲ್ಲರು ಎಂಬುದರ ಬಗ್ಗೆ ಮಾಲ್ಥಸ್‌ವಾದಿ ಸಂಕಥನದಲ್ಲಿ ಅವಕಾಶವೇ ಇಲ್ಲ. ಈ ಬಗೆಯ ನಿಲುವಿನಿಂದಾಗಿ ಮಾಲ್ಥಸ್‌ವಾದಿ ಸಂಕಥನ ಕೆಲವು ವಿಚಿತ್ರ ತೀರ್ಮಾನಗಳನ್ನು ಪ್ರತಿಪಾದಿಸತೊಡಗಿದೆ. ಮಾಲ್ಥಸ್‌ನ ವಿಚಾರಗಳಿಂದ ಪ್ರಭಾವಿತರಾದ ಉಗ್ರ

ಮಾಲ್ಥುಸ್‌ವಾದಿಗಳು ಬಡತನವನ್ನು ನಿವಾರಿಸುವ ಕಾರ್ಯಕ್ರಮಗಳನ್ನು, ಬಡವರಿಗೆ ಪರಿಹಾರ ನೀಡುವ ಕ್ರಮಗಳನ್ನು ರದ್ದುಪಡಿಸಬೇಕು ಎಂದು ವಾದಿಸುತ್ತಿದ್ದಾರೆ. ಏಕೆಂದರೆ ಇಂತಹ ಕಾರ್ಯಕ್ರಮಗಳು -ಪರಿಹಾರ ಜನಸಂಖ್ಯೆಯ ಏರಿಕೆಗೆ ಕಾರಣವಾಗುತ್ತದೆ. ನಮ್ಮ ದೇಶದಲ್ಲಿ ಆಚರಣೆಯಲ್ಲಿರುವ ಕುಟುಂಬ ಯೋಜನೆ ಮೂಲದಲ್ಲೂ ಮಾಲ್ಥುಸ್‌ವಾದಿ ಪ್ರತಿಗಾಮಿ ವಿಚಾರಗಳು ಕೆಲಸ ಮಾಡುತ್ತಿವೆ. ನಮ್ಮ ಕುಟುಂಬಯೋಜನೆ ಕಾರ್ಯಕ್ರಮವು ಬಲವಂತವಾದಿ ಕ್ರಮಗಳನ್ನು ಅಂತರ್ಗತ ಮಾಡಿಕೊಂಡಿದೆ. ನಮ್ಮ ದೇಶದ ಕೆಲವು ರಾಜ್ಯಗಳಲ್ಲಿ (ರಾಜಸ್ಥಾನ ಮತ್ತು ಹರಿಯಾಣ) ಎರಡಕ್ಕಿಂತ ಹೆಚ್ಚು ಮಕ್ಕಳನ್ನು ಪಡೆದಿರುವ ತಂದೆ-ತಾಯಿಂದಿರನ್ನು ಪಂಚಾಯತ್ ಚುನಾವಣೆಗಳಲ್ಲಿ ಸ್ಪರ್ಧಿಸಲು ಅನರ್ಹರನ್ನಾಗಿ ಮಾಡಲಾಗಿದೆ.

## ಭಾಗ-೩

### ಜನಸಂಖ್ಯಾ ನೀತಿ-ಮಾನವ ಅಭಿವೃದ್ಧಿ ಮಾದರಿ

ಕುಟುಂಬ ಯೋಜನೆ ಕಾರ್ಯಕ್ರಮವು ಮೂಲಭೂತವಾಗಿ ಮಾಲ್ಥುಸ್‌ವಾದಿ ನೆಲೆಯನ್ನು ಹೊಂದಿದೆ ಎಂಬುದನ್ನು ಮತ್ತು ಅದು ಬಲಪ್ರಯೋಗವಾದಿಯಾಗಿದೆ ಎಂಬ ಅಂಶವನ್ನು ಹಿಂದಿನ ಭಾಗಗಳಲ್ಲಿ ನೋಡಿದ್ದೇವೆ. ಈ ಭಾಗದಲ್ಲಿ ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸಲು ಇರುವ ಪರಿಣಾಮಕಾರಿ ಪರ್ಯಾಯ ಮಾರ್ಗದ ಬಗ್ಗೆ ಚರ್ಚಿಸಲಾಗಿದೆ. ಮಾಲ್ಥುಸ್‌ವಾದಿ ಪ್ರಣೀತ ಉಗ್ರ ಜನಸಂಖ್ಯಾ ನೀತಿಗೆ ಇಂದು 'ಚೀನ' ಉದಾಹರಣೆಯಾದರೆ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯನ್ನು ಆಧರಿಸಿದ ಜನಸಂಖ್ಯಾ ನೀತಿಯಿಂದ ಯಶಸ್ಸು ಸಾಧಿಸಿರುವ 'ಕೇರಳ' ಇನ್ನೊಂದು ಉದಾಹರಣೆಯಾಗಿದೆ. ಅಮರ್ತ್ಯಸೇನ್ ಅವರು 'ಚೀನ ಮಾದರಿ' ಮತ್ತು 'ಕೇರಳ ಮಾದರಿ'ಗಳನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಿ 'ಕೇರಳ ಮಾದರಿ'ಯು ಹೇಗೆ 'ಚೀನ ಮಾದರಿ'ಗಿಂತ ಉತ್ತಮವಾಗಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಒಂದು ಉಪನ್ಯಾಸದಲ್ಲಿ ಅವರು ಹೇಳಿರುವಂತೆ ಬಲವಂತವಾದಿ ಉಗ್ರ ಕುಟುಂಬಯೋಜನೆ ಕಾರ್ಯಕ್ರಮವು 'ಸಾಧಿಸುವುದು ಕಡಿಮೆ: ನಾಶಪಡಿಸುವುದು ಅಧಿಕ' (it achieves little and destroys a lot).

ಚೀನಾ ದೇಶವು ಬಲವಂತವಾದಿ ಕುಟುಂಬಯೋಜನೆ ಕಾರ್ಯನೀತಿ ಮೂಲಕ, 'ಒಂದೇ ಮಗು' ನೀತಿಯ ಮೂಲಕ ಜನಸಂಖ್ಯೆಯ ಬೆಳವಣಿಗೆಯನ್ನು ನಿಯಂತ್ರಿಸಿರುವ ರೀತಿ, ಜನನ ಪ್ರಮಾಣವನ್ನು ಕೆಳಮಟ್ಟಕ್ಕೆ ತಂದಿರುವ ಬಗೆಯು ಎಲ್ಲ ರೀತಿಯ ಹೊಗಳಿಕೆಗೆ, ಅಭಿನಂದನೆಗೆ ಪಾತ್ರವಾಗಿದೆ. ಚೀನಾ ಮಾದರಿಯನ್ನು ಭಾರತವು ಅಳವಡಿಸಿಕೊಳ್ಳಬೇಕು ಎಂಬ ಸಲಹೆಗಳೂ ಪ್ರಬಲವಾಗಿ ಮಂಡಿತವಾಗುತ್ತಿವೆ. ೧೯೭೯ ರ ನಂತರ ಚೀನಾ ದೇಶವು ಕುಟುಂಬಯೋಜನೆಗೆ ಸಂಬಂಧಿಸಿದಂತೆ ಉಗ್ರವೂ, ಕಠಿಣವೂ ಆದ ಕ್ರಮಗಳನ್ನು ಜಾರಿಗೊಳಿಸುತ್ತಾ ಬಂದಿದೆ.

ಈ ಬಗೆಯ ಕ್ರಮಗಳ ಮೂಲಕ ಚೀನ 'ಅದ್ಭುತ' ವೆನ್ನಬಹುದಾದ ಸಾಧನೆಯನ್ನು ಜನಸಂಖ್ಯೆಯ ಬೆಳವಣಿಗೆ ನಿಯಂತ್ರಣಕ್ಕೆ ಸಂಬಂಧಿಸಿದಂತೆ ಸಾಧಿಸಿದೆ. ೧೯೯೨ ರಲ್ಲಿ ಚೀನಾದ ಜನನ ಪ್ರಮಾಣವು ಪ್ರತಿ ೧೦೦೦ ಜನರಿಗೆ ೧೯ ಆಗಿದ್ದರೆ ಭಾರತದಲ್ಲಿ ಅದು ೨೯. ಚೀನಾದಲ್ಲಿ ಸಂತಾನೋತ್ಪತ್ತಿ ಪ್ರಮಾಣ ೨ ಇದ್ದರೆ ಭಾರತದಲ್ಲಿ ಅದು ೩.೭. ಈ ಸಾಧನೆಯ ಹಿಂದೆ ದೊಡ್ಡ ವ್ಯಥೆಯ ಕಥೆ ಇದೆ. ಚೀನಾ ಮಾದರಿಯಲ್ಲಿ 'ಸ್ವಾತಂತ್ರ್ಯ'ಕ್ಕೆ ಕುತ್ತು ಬಂದಿದೆ. ಮಾನವ ಹಕ್ಕುಗಳ ದಮನ ಅಲ್ಲಿ ನಡೆದಿದೆ. ಕುಟುಂಬಯೋಜನೆಯನ್ನು ಬಲಾತ್ಕಾರದಿಂದ ಜನರು ಅನುಸರಿಸುವಂತೆ ಮಾಡುವುದು, ಅದನ್ನು ಕಡ್ಡಾಯ ಗೊಳಿಸುವುದು ಮುಂತಾದವು ಅನೇಕ ಬಗೆಯ ಸಾಮಾಜಿಕ -ಮಾನಸಿಕ ಸಮಸ್ಯೆಗಳಿಗೆ ಕಾರಣವಾಗಿ ಬಿಟ್ಟಿದೆ. 'ಒಂದೇ ಮಗು' ನೀತಿಯಿಂದಾಗಿ ಹೆಣ್ಣು ಶಿಶು ಅಪಾಯ ಎದುರಿಸುವಂತಾಗಿದೆ. ಹೆಣ್ಣು ಶಿಶು ಅತ್ಯಂತ ಅಲಕ್ಷ್ಯಕ್ಕೆ ಗುರಿಯಾಗಿ ಬಿಡುತ್ತದೆ.

ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆಯನ್ನು ಆಧರಿಸಿರುವ, ಸಹಕಾರವಾದಿ-ಸಹಭಾಗಿತ್ವವಾದಿ ಜನಸಂಖ್ಯಾ ನೀತಿಯ ಮೂಲಕ ಸಾಧಿಸಿರುವ ಕೇರಳದ ಸಾಧನೆಯು ಅದ್ವಿತೀಯವಾದುದಾಗಿದೆ. ಕೇರಳ ರಾಜ್ಯವು ಆರೋಗ್ಯ, ಅಕ್ಷರ, ಆಹಾರ, ಆವಾಸ ಮುಂತಾದವುಗಳನ್ನು ಒಳಗೊಂಡ ಮಾನವ ಅಭಿವೃದ್ಧಿ ವಿಚಾರ ಪ್ರಣಾಳಿಕೆ ಪ್ರಣೀತ ಜನಸಂಖ್ಯಾ ನೀತಿಯ ಮೂಲಕ ಜನಸಂಖ್ಯೆಯ ಬೆಳವಣಿಗೆಯ ಗತಿಯನ್ನು ತೀವ್ರಸ್ವರೂಪದಲ್ಲಿ ನಿಯಂತ್ರಿಸುವಲ್ಲಿ ಯಶಸ್ವಿಯಾಗಿದೆ. ಇದನ್ನು ಕೆಳಗಿನ ವಿವರಣೆಯಿಂದ ತಿಳಿದು ಕೊಳ್ಳಬಹುದು.

**ಚೀನಾ, ಕೇರಳ ಮತ್ತು ಭಾರತ : ತೌಲನಿಕ ಸ್ಥಾನಮಾನ**

**ಕೋಷ್ಟಕ-೨**

| ಕ್ರ. ಸಂ | ವಿವರಗಳು | ಚೀನ | ಕೇರಳ | ಭಾರತ |
|---|---|---|---|---|
| ೧ | ಜನನ ಪ್ರಮಾಣ (ವಾರ್ಷಿಕ- ೧೦೦೦ಜನರಿಗೆ) | ೧೯ | ೧೮ | ೨೯ |
| ೨ | ಸಂತಾನೋತ್ಪತ್ತಿ ಪ್ರಮಾಣ (TFR) | ೨.೦ (೧೯೯೨) | ೧.೮ (೧೯೯೧) | ೩.೭ |
| ೩ | ವಯಸ್ಕ ಮಹಿಳೆಯರ ಸಾಕ್ಷರತೆ (೧೯೯೧) | ಶೇ ೬೮. | ಶೇ ೮೬ | ಶೇ ೩೯ |
| ೪. | ಆಯುರ್ಮಾನ (ವರ್ಷಗಳಲ್ಲಿ) (೧೯೯೧) ಮಹಿಳೆಯರು | ೭೧ | ೭೪ | ೫೯ |
| | ಪುರುಷರು | ೬೮ | ೬೯ | ೫೯ |
| ೫. | ಶಿಶು ಮರಣ ಪ್ರಮಾಣ (ಪ್ರತಿ ೧೦೦೦ ಜನನಕ್ಕೆ) ಹೆಣ್ಣು | ೩೩ | ೧೬ | ೮೯ |
| | ಗಂಡು | ೨೮ | ೧೭ | ೮೪ |

ಕೋಷ್ಟಕ-೨ ರಲ್ಲಿ ತೋರಿಸಿರುವಂತೆ ಜನಸಂಖ್ಯಾ ಸಂಬಂಧಿ ವಿಷಯದಲ್ಲಿ ಚೀನಾದ ಸ್ಥಿತಿಗತಿಗಳು ಭಾರತಕ್ಕಿಂತ ಉತ್ತಮವಾಗಿವೆ. ಆದರೆ ಚೀನಾದ ಸ್ಥಿತಿಗತಿಗಳಿಗಿಂತ ಕೇರಳ ರಾಜ್ಯದ ಜನಸಂಖ್ಯಾ ಸಂಬಂಧಿ ಸ್ಥಿತಿಗತಿಗಳು ಉನ್ನತವಾಗಿವೆ. ಕೋಷ್ಟಕ-೨ ರಲ್ಲಿ ಬಳಸಿರುವ ಐದು ಸೂಚಿಗಳಲ್ಲೂ ಕೇರಳದ ಸಾಧನೆಯು ಚೀನಾದ ಸಾಧನೆಗಿಂತ ಉತ್ತಮವೂ, ಉನ್ನತವೂ ಆದುದಾಗಿದೆ.

ಕೇರಳದ ಸಾಧನೆಯು ಚೀನಾದ ಸಾಧನೆಗಿಂತ ಗಾತ್ರ ಹಾಗೂ ಗುಣಗಳೆರಡರಲ್ಲೂ ಜೇಷ್ಠವಾದುದಾಗಿದೆ. ಏಕೆಂದರೆ ಕೇರಳದ ಜನಸಂಖ್ಯಾ ನೀತಿಯಲ್ಲಿ ಬಲವಂತದ ಅಂಶಗಳಿಲ್ಲ. ಚೀನಾದ ಸಂದರ್ಭದಲ್ಲಿ ಗುರುತಿಸಲಾಗಿರುವ ವಿಕಾರಗಳಾಗಲಿ-ವಿಕೃತಿಗಳಾಗಲಿ ಕೇರಳದ ಸಂದರ್ಭದಲ್ಲಿ ಸಂಭವಿಸಿಲ್ಲ. ಚೀನಾದಲ್ಲಿ ಶಿಶುಗಳ ಮರಣ ಪ್ರಮಾಣಕ್ಕೆ ಸಂಬಂಧಿಸಿದಂತೆ ಲಿಂಗ ತಾರತಮ್ಯ ಢಾಳಾಗಿ ಕಂಡುಬಂದರೆ ಕೇರಳದ ಮಾದರಿಯಲ್ಲಿ ತಾರತಮ್ಯದ ಸೂಚನೆ ಇಲ್ಲ. ೧೯೭೯ರಲ್ಲಿ ಚೀನಾದಲ್ಲಿ ಸಂತಾನೋತ್ಪತ್ತಿ ಪ್ರಮಾಣ ೨.೮ ಇದ್ದರೆ ಕೇರಳದಲ್ಲಿ ಅದು ೩ ಆಗಿತ್ತು. ಆದರೆ ೧೯೯೧ರಲ್ಲಿ ಸಂತಾನೋತ್ಪತ್ತಿ ಪ್ರಮಾಣ ಕೇರಳದಲ್ಲಿ ೧.೮ಕ್ಕೆ ಇಳಿದಿದ್ದರೆ ಚೀನಾದಲ್ಲಿ ಅದು ಕೇವಲ ೨.೦ಕ್ಕೆ ಇಳಿದಿದೆ. ಹಾಗಾದರೆ ಯಾವ ಮಾದರಿಯಲ್ಲಿ ಸಂತಾನೋತ್ಪತ್ತಿ ಪ್ರಮಾಣ ತೀವ್ರಗತಿಯಲ್ಲಿ ಇಳಿದಿದೆ? ಹಾಗಾದರೆ ಯಾವ ಮಾದರಿಯು ಪರಿಣಾಮಕಾರಿಯಾದುದು? ಉತ್ತರ ಸ್ಪಷ್ಟ.

## ಕೊನೆಯ ಮಾತು

ಈ ಅಧ್ಯಯನ ಪ್ರಬಂಧದಲ್ಲಿ ಕುಟುಂಬಯೋಜನೆಯು ಮಹಿಳೆಯರಿಗೆ ಹೇಗೆ ಮಾರಕವಾಗಿ ಪರಿಣಮಿಸಿದೆ ಎಂಬುದನ್ನು ಚರ್ಚಿಸಲಾಗಿದೆ. ಲಿಂಗ ಸಂಬಂಧಿ ಸಂಗತಿಗಳ ಬಗ್ಗೆ, ಮಹಿಳೆಯರ ಸಂತಾನೋತ್ಪತ್ತಿ ಆರೋಗ್ಯದ ಬಗ್ಗೆ ಭಾರತದ ಜನಸಂಖ್ಯಾನೀತಿಯು ವಿಮುಖವಾಗಿರುವ ಬಗೆಯನ್ನು ವಿವರಿಸಲಾಗಿದೆ. ಕುಟುಂಬಯೋಜನೆ ಕಾರ್ಯಕ್ರಮದ ಮೂಲದಲ್ಲಿ ಪುರುಷಶಾಹಿತ್ವವು ಕೆಲಸ ಮಾಡುತ್ತಿರುವ ಸಂಗತಿಯನ್ನು ತೋರಿಸಲಾಗಿದೆ. ನಮ್ಮ ಕುಟುಂಬ ಯೋಜನೆ ಕಾರ್ಯಕ್ರಮವು ಮಾಲ್ಥಸ್‌ವಾದಿ ವೈಚಾರಿಕ ಆಕೃತಿಯಿಂದ ಸಂಪೂರ್ಣವಾಗಿ ಪ್ರಭಾವಿತಗೊಂಡಿರುವುದನ್ನು ಚರ್ಚಿಸಲಾಗಿದೆ. ಬಲವಂತ ಹಾಗೂ ಉಗ್ರ ಕ್ರಮಗಳನ್ನು ಒಳಗೊಂಡಿರುವ ಚೀನಾದ ಜನಸಂಖ್ಯಾನೀತಿಯು ಸಾಧಿಸಿರುವ ಸಾಧನೆಗಳಿಗಿಂತ ಅದ್ಭುತವಾದ ಸಾಧನೆಯನ್ನು ಕೇರಳ ರಾಜ್ಯವು ಅಳವಡಿಸಿಕೊಂಡಿರುವ ಸಹಕಾರವಾದಿ- ಸಹಭಾಗಿತ್ವವಾದಿ ಜನಸಂಖ್ಯಾನೀತಿ ಸಾಧಿಸಿರುವ ಸಂಗತಿಯು ನಮಗೆ ಇಂದು ದಾರಿದೀಪವಾಗಬೇಕು ಎಂಬ ವಿಚಾರವನ್ನು ಇಲ್ಲಿ ಮಂಡಿಸಲಾಗಿದೆ. ಲಿಂಗಸಮಾನತೆ, ಸಂತಾನೋತ್ಪತ್ತಿ ವಿಷಯದಲ್ಲಿ ಮಹಿಳೆಯರಿಗೆ ಸ್ವಾಯತ್ತತೆ, ಮಹಿಳೆಯರ ಶಿಕ್ಷಣ, ಸಂತಾನೋತ್ಪತ್ತಿ ಆರೋಗ್ಯ, ಜನಸಂಖ್ಯಾನೀತಿಗಳು ಕುಟುಂಬ ಯೋಜನೆಯ ಅವಿಭಾಜ್ಯ ಅಂಗಗಳಾಗಬೇಕಾದ ಸಮಯ ಬಂದಿದೆ.

## ಆಕರ ಗ್ರಂಥಗಳು

Amartya Sen (1995) *Population Policy: Authoritarianism versus Cooperation.*

International Lecture series on population Issues.

The John D and Catherine T. Mac Arthur Foundation. New Delhi. p 31.

Dreze, Jean and Sen, A.(1995) *India Economic Development and Social Opportunity.* OUP. New Delhi.

Gita sen, et al(1994) Eds. *Population Policies Reconsidered.* Harvard Centre for Population and Development Studies. Boston. Mass.

Seshadri B., Chandrasekhara T.R. and Shaukath Azim (1998)

*"Women and Fertility Dynamics".* (unpublished) Department of Development studies. Kannada University, Hampi.



# ಕುಟುಂಬ ಯೋಜನೆ ಮತ್ತು ಮಹಿಳೆ

ಡಾ. ಎಚ್. ಗಿರಿಜಮ್ಮ

ಮಹಿಳೆಯು ಒಂದು ಕಾಲಕ್ಕೆ ಪೂಜ್ಯಳಾಗಿದ್ದಳು. ದಿನ ಕಳೆದ ಹಾಗೆ ಅವಳು ತ್ಯಾಜ್ಯ ವಸ್ತುವಿನಂತಾಗಿರುವುದೆ ದುರದೃಷ್ಟಕರ ಸಂಗತಿ. ವಿದ್ಯೆಗೆ ಅಧಿದೇವತೆಯಾದ ಶಾರದೆಯ ಬೀಡಿನಲ್ಲೇ ಅವಳು ಅನಕ್ಷರಸ್ಥಳಾದಳು. ಐಶ್ವರ್ಯದೇವಿಯ ಲಕ್ಷ್ಮೀರೂಪ ಎಂದು ಕರೆಯಲ್ಪಡುತ್ತಿದ್ದ ನಾಡಿನಲ್ಲೇ ಅವಳು ಆರ್ಥಿಕ ಸ್ವಾತಂತ್ರ್ಯವಿಲ್ಲದೆ ಪರಾವ ಲಂಬಿಯಾದಳು. ಅಜ್ಞಾನದ ಅಂಧಕಾರದಲ್ಲಿ ಮುಳುಗಿದಳು. ಇದೊಂದು ಯಾರೂ ನಂಬಲಾಗದ ದ್ವಂದ್ವ, ಇದು ಭಾರತೀಯ ಮಹಿಳೆಯ ಕಥೆ ಮಾತ್ರವಲ್ಲ - ವಿಶ್ವದ ಎಲ್ಲಾ ನಾಗರಿಕತೆಗಳು ಹೆಣ್ಣನ್ನು ನೋಡಿದ ದೃಷ್ಟಿಯೇ ಇದು. ಇಪ್ಪತ್ತನೆಯ ಶತಮಾನದಲ್ಲೂ ಇನ್ನೂ ತನ್ನ ಅಸ್ತಿತ್ವಕ್ಕಾಗಿ ಮಹಿಳೆ ಹೋರಾಡುತ್ತಿದ್ದಾಳೆ ಎಂಬುದೇ ಆಶ್ಚರ್ಯಕ್ಕಿಂತ ದುರದೃಷ್ಟಕರವಾದದ್ದು.

ಭಾರತದ ಸಂವಿಧಾನ ಎಲ್ಲಾ ಪ್ರಜೆಗೂ ಹೆಣ್ಣು ಮತ್ತು ಗಂಡು ಎಂಬ ಭೇದವಿಲ್ಲದೆ ಸಮಾನವಾದ ಹಕ್ಕು ಬಾಧ್ಯತೆಗಳನ್ನು ನೀಡಿದ್ದರೂ ಭಾರತದಲ್ಲಿ ಮಹಿಳೆಯರಿಗಾಗಿ ಸ್ಥಾಪಿಸಲ್ಪಟ್ಟು ರಚನಾತ್ಮಕ ಕಾರ್ಯದಲ್ಲಿ ತೊಡಗಿರುವ ಮಹಿಳಾ ಸಂಘಸಂಸ್ಥೆಗಳಿದ್ದರೂ! ಮಹಿಳೆಯರು ಎಷ್ಟು ಸಮಂಜಸವಾಗಿ ಇವುಗಳನ್ನು ಬಳಸಿಕೊಳ್ಳುತ್ತಿದ್ದಾರೆ ಎಂಬುದು ಮುಖ್ಯವಾಗುತ್ತದೆ.

ಮಹಿಳೆಯರ ಬೆಳವಣಿಗಾಗಿ ಮತ್ತು ರಾಷ್ಟ್ರದ ಬದುಕಿನಲ್ಲಿ ಮಹಿಳೆಯದೂ ಮಹತ್ತರ ಪಾತ್ರವೆಂಬುದನ್ನು ಸ್ಪಷ್ಟಪಡಿಸಲು, ಭಾರತ ಸರ್ಕಾರ ೨೨ನೇ ಸೆಪ್ಟೆಂಬರ್ ೧೯೭೧ರಲ್ಲಿ, "ಮಹಿಳೆಯರ ಸ್ಥಾನಮಾನ ಸಮಿತಿ" ಯನ್ನು ಶಿಕ್ಷಣ ಹಾಗೂ ಸಮಾಜ ಕಲ್ಯಾಣ ಇಲಾಖೆಯಿಂದ ರೂಪಿಸಿತು. ಈ ಸಮಿತಿಯು ಅನೇಕ ವಿಷಯಗಳ ಬಗ್ಗೆ ಸಮೀಕ್ಷೆ ನಡೆಸಿ ವರದಿ ಸಲ್ಲಿಸಬೇಕಾಗಿತ್ತು.

ಅದರಲ್ಲಿ, "ಜನಸಂಖ್ಯಾ ನೀತಿ ನಿಯಮಗಳು ಹಾಗೂ ಕುಟುಂಬ ಕಲ್ಯಾಣ ಯೋಜನೆ ಇವು ಸ್ತ್ರೀಯರ ಸ್ಥಾನ ಮಾನಗಳ ಮೇಲೆ ಯಾವ ಪ್ರಭಾವ ಬೀರಿವೆ" ಎಂಬುದರ ಬಗ್ಗೆಯೂ ಒಂದಾಗಿತ್ತು. ೧೯೭೫ನ್ನು ವಿಶ್ವಸಂಸ್ಥೆಯು ಅಂತರ ರಾಷ್ಟ್ರೀಯ ಮಹಿಳಾ ವರ್ಷವನ್ನಾಗಿ ಘೋಷಿಸಿತ್ತು. ಅನೇಕರು ಮಹಿಳೆಯರ ಪ್ರಗತಿಗಾಗಿ ಹೋರಾಡುತ್ತಿದ್ದರೂ, ಪ್ರತ್ಯೇಕವಾಗಿ ಮಹಿಳೆಯನ್ನು ಕಂಡಾಗ ನಿಜಕ್ಕೂ ಆಕೆಗೆ ಈ ಯೋಜನೆಗಳು ಪರಿಣಾಮ ಬೀರಿವೆಯೆ?

ಅಥವಾ ಒತ್ತಡವನ್ನು ಹೇರಲಾಗುತ್ತಿದೆಯೇ? ಎಂಬುದರ ವಿಶ್ಲೇಷಣೆ, ವಿಚಾರಣೆಯು ಇಂದು ನಡೆಯಬೇಕಾಗಿದೆ. ಯಾವುದೇ ಅಧ್ಯಯನಗಳು, ಪ್ರಕರಣಗಳು, ಚಳುವಳಿಗಳು ಆಕೆಯ ಮೇಲೆ ಯಾವ ಪರಿಣಾಮವನ್ನೂ ಬೀರುತ್ತಿಲ್ಲವೆ? ಆಕೆಯು ಮೌನ ವಹಿಸಿರುವಳೇ ಅಥವಾ ಆಕೆಯದು ಮೌನ ಆಕ್ರಂದನವೇ ಎಂಬುದರ ಬಗ್ಗೆಯೂ ವಿಸ್ತಾರವಾದ ಅಧ್ಯಯನ ನಡೆಯಬೇಕಾಗಿದೆ.

ಮೇಲ್ನೋಟಕ್ಕೆ ಎಲ್ಲದರಲ್ಲೂ ಆಕೆಗೆ ಸಮಾನತೆ, ಸಮಪಾಲಿದೆಯೆಂದರೂ, ಅದನ್ನು ಅನುಭವಿಸಲು ಆಕೆಗೆ ಯಾಕೆ ಆಗುತ್ತಿಲ್ಲ? ಒತ್ತಡವೇ ಅಥವಾ ತಂತಾನೇ ಸರಪಳಿಗಳಿಂದ ಬಂಧಿಸಲ್ಪಟ್ಟಿರುವಳೇ ಎಂಬುದರ ಬಗ್ಗೆಯೂ ಚಿಂತಿಸುವಾಗ, ಸ್ತ್ರೀಯೂ ಹೊರಬರಲು ತತ್ತರಿಸುತ್ತಿದ್ದಾಳೆಂಬುದು ಗೋಚರಿಸುತ್ತಿದೆ. ಆದರೆ ಆಕೆ ತನ್ನನ್ನು ತಾನೇ ಸಾಮಾಜಿಕ ಸಾಂಪ್ರದಾಯಿಕ ನಿಯಮಗಳ ಬಾಹುಗಳೊಳಗೇ ಹುದುಗಿಸಿಕೊಂಡಿರುವುದನ್ನು ಸೂಕ್ಷ್ಮವಾಗಿ ಕಾಣಬಹುದಾಗಿದೆ.

೧೯೯೦ ಮೇ ತಿಂಗಳಲ್ಲಿ ರಾಷ್ಟ್ರೀಯ ಮಹಿಳಾ ಆಂದೋಲನ ಆರಂಭವಾದರೂ, ಅರ್ಥಪೂರ್ಣವಾಗುವಂತೆ ಶ್ರಮಿಸಿದರೂ ಮಹಿಳೆಯರ ಬದುಕು ಉತ್ತಮ ವಾಗುತ್ತಿಲ್ಲವೆಂಬುದೇ ಆಶ್ಚರ್ಯಕರ ಸಂಗತಿ.

ಯಾವುದೇ ಘಟನೆಗಳು ಘಟಿಸಲಿ, ಅವುಗಳು ಒಳ್ಳೆಯದು ಮತ್ತು ಕೆಟ್ಟದ್ದು ಎಂದು ನಿರ್ಧರಿಸುವ ಹಕ್ಕು ಗಂಡಸರಿಗೇ ಯಾಕೆ? ಮಹಿಳೆಯರ ಬುದ್ಧಿಮಟ್ಟ ತೀರಾ ಕೆಳ ಮಟ್ಟದ್ದೆಂದು ನಿರ್ಧರಿಸುವ ಕಲ್ಪನೆಯು ಬಂದದ್ದಾದರೂ ಹೇಗೆ? ಇದಕ್ಕೆಲ್ಲಾ ಉತ್ತರವೊಂದಿದೆ. ಪುರುಷ ಪ್ರಧಾನ ಸಮಾಜದ ನಾಯಕನಾಗಿರುವ ಪುರುಷನ ದಬ್ಬಾಳಿಕೆ, ದರ್ಪ, ಅಧಿಕಾರ ಸ್ತ್ರೀಯ ಧ್ವನಿಯನ್ನು ಇಲ್ಲವಾಗಿಸಿದೆ.

ಪುರುಷನಿಗೆ ಯಾವುದೇ ವಿಷಯ ಸಮಸ್ಯೆ ಎನ್ನಿಸಿದಾಗ ಅದೊಂದು ಸಾಮಾಜಿಕ ಸಮಸ್ಯೆಯೆನ್ನಿಸಿಕೊಳ್ಳುವುದಲ್ಲದೇ ಅದೇ ಸಮಸ್ಯೆಯು ಸ್ತ್ರೀಗೆ ಸಂಬಂಧಿಸಿದ್ದಾದರೆ, ವ್ಯಕ್ತಿಯ ವೈಯಕ್ತಿಕ ಜವಾಬ್ದಾರಿಯಾಗಿ ಬಿಡುತ್ತದೆ. ಇದಕ್ಕೆ ಸಂಬಂಧಿಸಿದಂತೆ ಸಿಮೋನ್‌ದ ಬೋವಾಳ ವಿಶ್ಲೇಷಣೆಯೆಂದರೆ,

"ಚಂಚಲತೆ ಮಹಿಳೆಯ ವ್ಯಕ್ತಿತ್ವದ ಮುಖ್ಯ ಸ್ವಭಾವವಾಗಿದೆ. ಆಕೆಯು ಸಾಮಾನ್ಯವಾಗಿ ಶೀಘ್ರ ಕೋಪಿಯೂ, ಧೈರ್ಯಹೀನಳೂ ಆಗಿ ವರ್ತಿಸುತ್ತಾಳೆ. ಮಹಿಳೆಯ ಜೈವಿಕ ವಿಶಿಷ್ಟತೆ ಅವಳ ಬದುಕಿನಲ್ಲಿ ಮಹತ್ತರವಾದ ಪಾತ್ರವನ್ನು ವಹಿಸುತ್ತದೆ. ಮಹಿಳೆಯು ತನ್ನ ಬದುಕಿನಲ್ಲಿ ಪಡೆಯುವ ಸ್ಥಾನಮಾನ ಅವಳಲ್ಲಿ ಅಂತರಂಗಿಕವಾಗಿರುವ ಜೈವಿಕ ಅಂಶದ ಪಾತ್ರಕ್ಕೆ ಅನುಸಾರವಾಗಿಯೇ ಇರುತ್ತದೆ."- ಎಂಬುದು.

ಲಿಂಗಾಧಾರಿತ ಸಂಬಂಧಗಳು ಎಲ್ಲಾ ಬಗೆಯ ಮಾನವೀಯ ಅನುಭವದ ಅವಿಭಾಜ್ಯ ಅಂಗಗಳಾಗಿವೆ. ಮಹಿಳೆಯರ ಸ್ಥಾನಮಾನ ನಿರ್ಧರಿಸುವಲ್ಲಿ ತಾಯ್ತನದ ಅಂಶವೇ

ಪ್ರಧಾನವಾಗಿರುತ್ತದೆ. ಮಗುವನ್ನು ಹೆರುವುದು ಮತ್ತು ಅದಕ್ಕೆ ಮೊಲೆಯುಣಿಸುವುದು ಇವು ಸಾಮಾಜಿಕ ಚಟುವಟಿಕೆಗಳಲ್ಲ. ಬದಲಿಗೆ ಅವು ನಿಸರ್ಗ ಸಹಜ ವಿದ್ಯಮಾನ ಗಳಾಗಿವೆಯೇ ಹೊರತು ಯೋಜನೆಗಳಲ್ಲ, ಮತ್ತು ಅವು ಸ್ತ್ರೀಯ ಅಸ್ತಿತ್ವಕ್ಕೆ ಸಾಮಾಜಿಕವಾಗಿ ಯಾವುದೇ ಉನ್ನತ ಸ್ಥಾನವನ್ನು ದೊರಕಿಸಿ ಕೊಡುವ ಸಾಧ್ಯತೆಗಳಿಲ್ಲ.

ಲಿಂಗ-ಲಿಂಗಪ್ರಭೇದ ವ್ಯವಸ್ಥೆಗಳಿಗಿಂತ ಮುಂಚೆ ಹುಟ್ಟಿದ ಪುರುಷ ಪ್ರತಿಷ್ಠೆಯ ಸಮಾಜ ಸಂರಚನೆಗಳು ಪುರುಷರನ್ನು ಸದಾ ಸ್ತ್ರೀಯರಿಗಿಂತ ಉಚ್ಚಸ್ಥಾನದಲ್ಲಿ ಉಳಿಸುತ್ತಿವೆ. ಸಮಾಜದಲ್ಲಿ ಸ್ತ್ರೀಯು ಎರಡನೆಯ ದರ್ಜೆಯ ನೆಲೆಗೆ ಸೇರಿರುವುದೂ ಇಂತಹ ಒಂದು ಅಂಶಗಳಿಂದಲೇ ಎಂಬುದನ್ನು ನಿರ್ಲಕ್ಷಿಸುವಂತಿಲ್ಲ.

ಮಹಿಳೆಯರು ವಸ್ತುಗಳನ್ನು ಭಾವನೆಗಳನ್ನು ಹಾಗೂ ಜನರನ್ನು ಅಮೂರ್ತಕ್ಕಿಂತ ಮೂರ್ತ ಸ್ವರೂಪದಲ್ಲಿ ಅನುಭವಕ್ಕೆ ತಂದುಕೊಳ್ಳುತ್ತಾರೆ. ಹೇಗೆ ಪುರುಷ ತನ್ನ ಸಮಸ್ಯೆಯನ್ನು ಸಾಮಾಜಿಕ ಅಥವಾ ಸಮಾಜದ ಸಮಸ್ಯೆಯನ್ನಾಗಿ ಪರಿಗಣಿಸುತ್ತಾನೋ ಆ ಜಾಣ್ಮೆ ಸ್ತ್ರೀಯರಲ್ಲಿಲ್ಲವೆಂದೇ ಹೇಳಬಹುದು. ವಸ್ತುನಿಷ್ಠವಾಗಿ ಗ್ರಹಿಸುವುದಕ್ಕಿಂತ ಹೆಚ್ಚಾಗಿ ತಮ್ಮ ವೈಯಕ್ತಿಕ ನೆಲೆಯಲ್ಲಿ ಗುರುತಿಸುತ್ತಾರೆ.

ಕುಟುಂಬ ಕಲ್ಯಾಣ ಯೋಜನೆಯನ್ನು ಜನಸಂಖ್ಯಾ ನಿಯಂತ್ರಣಕ್ಕಾಗಿಯೂ ಮತ್ತು ಮಾತೃಮರಣ, ಮಹಿಳೆಯರ ಆರೋಗ್ಯದ ಬಗ್ಗೆಯೂ ಚಿಂತಿಸಿ ಒಂದು ಕುಟುಂಬಕ್ಕೆ ಎರಡು ಮಕ್ಕಳು ಸಾಕೆಂದಿದ್ದು ಈಗ 'ಒಂದೇ ಮಗು' ಎಂಬುದಕ್ಕೆ ಆತುಕೊಂಡಿದೆ.

ಮುಖ್ಯವಾದ ಪ್ರಶ್ನೆ ಬರುವುದು ಇಲ್ಲಿಯೇ. ಕುಟುಂಬ ಕಲ್ಯಾಣದ ಇಲಾಖೆಗಳು ಯಾವುದೇ ಸೂತ್ರಗಳನ್ನು ಅಳವಡಿಸಿದರೂ, ಅದು ಮಹಿಳೆಯರಿಗಾಗಿಯೇ ಮಹಿಳೆಯರಿಗೆ ಮಾತ್ರವೇ ಎಂಬಂತಿರುವುದು!

ಕುಟುಂಬದ ಕಲ್ಯಾಣಕ್ಕೆ ಸಂಬಂಧಿಸಿದ ವೈದ್ಯಕೀಯದ ಎಲ್ಲಾ ಸೌಲಭ್ಯಗಳು ಶಾಶ್ವತ ಮತ್ತು ತಾತ್ಕಾಲಿಕ ವಿಧಾನಗಳೇ ಇರಲಿ - ಮಹಿಳೆಯರಿಗೆ ಹೆಚ್ಚಾಗಿದ್ದು, ಇದಕ್ಕಾಗಿ ನಡೆಸುವ ಪ್ರಚಾರಗಳೂ ಸಹಾ ಮಹಿಳೆಯರನ್ನು ಉದ್ದೇಶಿಸಿಯೇ ಇರುವುದು!

ಉದರ ದರ್ಶಕ ಸಂತಾನಹರಣ ಶಸ್ತ್ರಕ್ರಿಯೆ, ಟ್ಯುಬೆಕ್ಟಮಿ, ಕಾಪರ್ 'ಟಿ' ಅಳವಡಿಕೆ, ನುಂಗುವ ಮಾತ್ರೆಗಳು ಮತ್ತು ಇತರೆ ಸಾಧನಗಳು ಹೆಚ್ಚು ಚಲಾವಣೆಯಲ್ಲಿದ್ದು, ಕಾಂಡೋಮ್ ಬಳಕೆ ಮತ್ತು ಪುರುಷರಲ್ಲಿ ಮಾಡುವ ವ್ಯಾಸೆಕ್ಟಮಿಗಳಷ್ಟೇ ಪುರುಷರಿಗೆ ಸೀಮಿತವಾಗಿದೆ. ಇವುಗಳ ಪ್ರಯೋಗ ಹಾಗೂ ಪರಿಣಾಮಗಳನ್ನು ಕುರಿತ ಅಂಕಿ ಅಂಶಗಳೂ ಕಡಿಮೆಯೇ ಇವೆ.

"ನಿರೋಧ್ ಬಳಸುವಷ್ಟು ...ಸಹನೆ...ನನ್ನ ಗಂಡನಲ್ಲಿಲ್ಲ ಡಾಕ್ಟ್ರೇ.. ಅವರಿಗೆ ಸಿಟ್ಟು ಬರುತ್ತೆ...ನನಗೇ ಮಾತ್ರೆ ಕೊಡಿ ...ಅಥವಾ ಕಾಪರ್ 'ಟಿ' ಸಾಧನವನ್ನು ಹಾಕಿ..." -ಎಂದು ಕೆಲವು ಮಹಿಳೆಯರು ಬಂದರೆ, ಮತ್ತೆ ಕೆಲವರು,

"ಆಪರೇಷನ್ ಮಾಡಿಸಿಕೊಂಡ್ರೆ ...ನನ್ನ ಗಂಡನ ಪೌರುಷತ್ವ ಹೋಗುತ್ತಂತೆ, ಕೆಲ್ಸ ಮಾಡೋಕೆ ಅವರಿಗೆ ಆಗೋಲ್ಲ...ನನಗೇ ಆಪರೇಷನ್ ಮಾಡಿಬಿಡಿ..."-ಎಂದು ಬರುವ ಮಹಿಳೆಯರೇ ಹೆಚ್ಚು -ಗ್ರಾಮೀಣ ಮಹಿಳೆಯಿರಲಿ, ವಿದ್ಯಾವಂತ ನಾಗರೀಕ ಮಹಿಳೆಯರೂ ಹೀಗೆಯೇ ಇದ್ದಾರೆಂದರೆ ಯಾರೂ ನಂಬಲಾರರು.

ಜನಸಂಖ್ಯೆ ನಿಯಂತ್ರಣ ದೇಶದ ಆರ್ಥಿಕ ಸಾಮಾಜಿಕ ಸಮಸ್ಯೆಯೆಂದು ಪುರುಷರು ನಿರ್ಲಿಪ್ತರಾಗಿರುವಾಗ, ಮಹಿಳೆಯರೇಕೆ ವೈಯುಕ್ತಿಕವಾಗಿ ಪರಿಗಣಿಸುತ್ತಾರೋ ಏನೋ?

ಸೂಚ್ಯವಾಗಿ ಅಲ್ಲದಿದ್ದರೂ ನೇರವಾಗಿಯೇ ಕೆಲವು ಪ್ರದೇಶಗಳಲ್ಲಿ "ಈ ಕಾರ್ಯಕ್ರಮಗಳು ಮಹಿಳೆಯರಿಗಾಗಿ, ಅವರ ಆಯುಸ್ಸು, ವಯಸ್ಸು ಆರೋಗ್ಯ ಹೆಚ್ಚಿಸಲು ಮರಣದ ಸಂಭವಗಳನ್ನು ತಪ್ಪಿಸಲು"- ಎಂದೆಲ್ಲಾ ಹೇಳಿಕೆಗಳನ್ನು ಹೇಳುತ್ತಾ ಗುಂಪು ಚರ್ಚೆಗಳಲ್ಲಿ ವಿಶದವಾಗಿ ಹೇಳುತ್ತಾ ಹೋಗುತ್ತಾರೆ.

ಪುರುಷನಿಗಿಂತ ಹೆಚ್ಚು ವೇಳೆ ದೈಹಿಕ ಶ್ರಮದಿಂದ ದುಡಿಯುವ ಮಹಿಳೆಗೆ ಇಂತಹ ಶಸ್ತ್ರಕ್ರಿಯೆಗಳು, ರಾಸಾಯನಿಕ ಪದಾರ್ಥಗಳನ್ನು ಸೇವಿಸುವುದರಿಂದ ಯಾವ ರೀತಿ ಆಕೆಗೆ ಆರೋಗ್ಯ, ಆಯುಸ್ಸನ್ನು ಹೆಚ್ಚಿಸುತ್ತದೆ? ಪುರುಷರು ಜನನ ನಿಯಂತ್ರಣಕ್ಕಾಗಲೀ, ಲೈಂಗಿಕ ಸುಖ ಹೊಂದುವುದಕ್ಕಾಗಲೀ ಯಾವುದೇ ಕಡಿವಾಣಗಳನ್ನು ಹಾಕದೇ ಇರುವುದು ಕಣ್ಣಿಗೆ ರಾಚುವಂತೆ ಕಂಡುಬರುತ್ತದೆ. ಒಂದು ಹೆಣ್ಣಿಗಿಂತ ಅತಿ ಹೆಚ್ಚು ಹೆಣ್ಣಿನ ಸಂಗವನ್ನು ಗಂಡು ಮಾಡಿದಾಗ ಕ್ಷಮಿಸುವ ಈ ಸಮಾಜ ...ವ್ಯವಸ್ಥೆ... "ಪ್ರಕೃತಿ ಸಹಜವಾಗಿ ಗಂಡು ಬಹುಲಿಂಗ ಆಸಕ್ತಿ... ಏನು ಮಾಡಲಾಗದು"- ಎಂದು ಬಿಡುತ್ತಾರೆ. ಹಾಗೆ ನೋಡಿದರೆ, ಲಿಂಗಪ್ರಭೇದ ಎಂಬುದು ಹುಟ್ಟಿನಿಂದ ಬರುವಂಥದು. ಫ್ರಾಯ್ಡ್‌ನು ಗಂಡಸಿನ ದೇಹ ರಚನೆ, ಮಾನಸಿಕ ರಚನೆಯ ವಿವಿಧ ಸಂಕೀರ್ಣ ಹಂತಗಳನ್ನು ನಿರೂಪಿಸುತ್ತಾ ಹೆಣ್ಣಿನ ಮಾನಸಿಕ ರಚನೆಯ ಪ್ರಕ್ರಿಯೆಯನ್ನು ಗಂಡಿನ ಮಾದರಿಗೆ ನೇತ್ಯಾತ್ಮಕವೆಂಬಂತೆ ಪ್ರತಿಪಾದಿಸಿ, ಅದಕ್ಕಿಂತ ಕೆಳಗಿನ ನೆಲೆಯದೆಂದು ವಿವರಿಸಿದ್ದಾನೆ. ಬಂಡವಾಳ ಶಾಹೀ ಪಿತೃಪ್ರಧಾನತೆಯ ಅಡಿಯಲ್ಲಿ ಹುಟ್ಟಿಕೊಂಡ ಫ್ರಾಯ್ಡ್ ಸಿದ್ಧಾಂತದಲ್ಲಿ ಹೆಣ್ತನವು ನಿಷ್ಕ್ರಿಯವಾದದ್ದು, ಸ್ವಹಿಂಸಾರತಿ ರೂಪದ್ದು, ಆತ್ಮರತಿಯದು ಎಂದು ಗುರುತಿಸಿದ.ಫ್ರಾಯ್ಡ್‌ನ ಸಿದ್ಧಾಂತವು ಹೆಚ್ಚಾಗಿ ಮಾನಸಿಕ ನೆಲೆಯಲ್ಲಿರುವುದು ಗೋಚರಿಸುತ್ತದೆ.

ಲೈಂಗಿಕ ಅಂಕಿತವೆನ್ನುವುದು ದೈಹಿಕ ಲೈಂಗಿಕ ವ್ಯತ್ಯಾಸಗಳನ್ನು ಅರ್ಥೈಸುವ ಪ್ರಕ್ರಿಯೆಗಳನ್ನು ಅವಲಂಬಿಸಿರುತ್ತದೆ. ಶಿಶ್ನದ ಅಸ್ತಿತ್ವ/ಅನಸ್ತಿತ್ವಗಳೇ ಈ ದೈಹಿಕ ವ್ಯತ್ಯಾಸದ ಮೂಲಭೂತ ಲಕ್ಷಣವಾಗಿದ್ದು ವ್ಯಕ್ತಿಗಳು ಮನೋಲೈಂಗಿಕ ಅಂಕಿತವನ್ನು ಪಡೆಯುವಲ್ಲಿ ಅದು ನಿರ್ಣಾಯಕ ಪಾತ್ರವಹಿಸುತ್ತದೆ ಎಂಬುದು ಫ್ರಾಯ್ಡ್‌ನ ಪ್ರತಿಪಾದನೆ. ಆದರೆ ಹುಡುಗಿಯರ ಮನೋಲೈಂಗಿಕ ಬೆಳವಣಿಗೆಯನ್ನು ಆತ ನೇತ್ಯಾತ್ಮಕ ಲಕ್ಷಣವಾಗಿ ನಿರ್ವಚಿಸಿರುವ ರೀತಿಯನ್ನು ಕಂಡಾಗ, ಸ್ತ್ರೀತ್ವವನ್ನು ದಮನಗೊಳಿಸಿರುವ ಎಲ್ಲಾ ಲಕ್ಷಣಗಳು ಕಂಡು ಬರುತ್ತವೆ. ಶರೀರದ ಪ್ರತ್ಯಕ್ಷ ವ್ಯತ್ಯಾಸಗಳನ್ನು

ಮಾನದಂಡವಾಗಿಟ್ಟುಕೊಂಡು ಮಾನಸಿಕ ವ್ಯತ್ಯಾಸಗಳಿಗೆ ಹೆಣ್ಣಿನ ಹೀನಸ್ಥಿತಿಗೆ ಅದೇ ಆಧಾರವೆಂದು ಫ್ರಾಯ್ಡ್ ಪ್ರತಿಪಾದಿಸುತ್ತಾನೆ. ಆದರೆ ಜೀವಶಾಸ್ತ್ರದ ಪ್ರಕಾರ ಸ್ತ್ರೀಯಾತ್ಮಕ/ಪುರುಷಾತ್ಮಕ ಮೌಲ್ಯಗಳು ಒಂದೇ ಆಗಿರುತ್ತವೆ. ಸಾಮಾಜಿಕ ರಚನೆಯಲ್ಲಿ ಮಾನಸಿಕವಾಗಿ ಮಹಿಳೆಯನ್ನು ಹೀಗೆಯೇ ಇರಬೇಕು... ಇಂತಹುದೇ ಮೌಲ್ಯಗಳೆಂದು ಪಟ್ಟಿ ಅಂಟಿಸಿಬಿಟ್ಟಿರುವುದು, ಸ್ತ್ರೀಯರೂ ತಮ್ಮೊಳಗಿನ ಸ್ತ್ರೀಯಾತ್ಮಕ ಸತ್ವದೊಂದಿಗೆ ಸಂಪರ್ಕ ಕಳೆದುಕೊಳ್ಳುತ್ತಿರುವುದೂ ಪೂರಕವಾಗಿಯೇ ಇದೆ. ಇದಕ್ಕೆ ಉದಾಹರಣೆಯಾಗಿ ಮದುವೆಯಲ್ಲಿ ಗಂಡಸರ ನಡುವೆ ಹೆಣ್ಣಿನ ವಿನಿಮಯವೆಂಬುದು ಸಾಮಾಜಿಕ ಸ್ತರದಲ್ಲಿ ಲಿಂಗ ತಾರತಮ್ಯಗಳನ್ನು ವ್ಯಕ್ತಿಗಳೊಳಗೇ ಸಂರಚಿಸುವಲ್ಲಿ ಹೆಚ್ಚು ಕ್ರಿಯಾಶೀಲವಾಗಿವೆ. ಪುರುಷ ಪ್ರತಿಷ್ಠೆಯ ಸಾಮಾಜಿಕ ಸಂರಚನೆಗಳು ಪುರುಷರನ್ನು ಸದಾ ಸ್ತ್ರೀಯರಿಗಿಂತ ಉಚ್ಚಸ್ಥಾನದಲ್ಲಿ ಉಳಿಸುವಂಥ ನಿಯಮಗಳಾಗಿವೆ.

ರಾಷ್ಟ್ರೀಯ ಆಯೋಗಗಳು, ಯೋಜನೆಗಳು ಮಹಿಳಾಭಿವೃದ್ಧಿಗಾಗಿಯೇ ಆಗಿದ್ದರೂ ಅದರ 'ಲಾಭ' ಪಡೆದುಕೊಳ್ಳುವಲ್ಲಿ ಎಷ್ಟು ಜನ ಯಶಸ್ವಿಯಾಗಿದ್ದಾರೆ. ಮಹಿಳೆಯರ ಆರೋಗ್ಯದಭಿವೃದ್ಧಿಯ ಲೇಪನದಲ್ಲಿ ಮತ್ತೂ ಮಹಿಳೆಯರ ಶೋಷಣೆ ನಡೆಯುತ್ತಿದೆ. ಹೆಚ್ಚು ಕಡಿಮೆ ಕುಟುಂಬ ಕಲ್ಯಾಣದ ಎಲ್ಲಾ ವಿಧಾನಗಳೂ ಹೆಣ್ಣಿಗೇ ಅನ್ವಯಿಸುವಂತಿವೆ. ಅದಕ್ಕಾಗಿ ಹೆಣ್ಣಿಗೆ ಒತ್ತಡ ಹೇರುತ್ತಾರೆ, ಪುರುಷರಿಗೆ ಹೇರುತ್ತಿಲ್ಲವೆಂಬುದು ಸತ್ಯಾಂಶ.

ಟ್ಯುಬೆಕ್ಟಮಿ ಶಸ್ತ್ರಕ್ರಿಯೆಗೊಳಗಾದ ನಂತರದಲ್ಲಿ ಮಹಿಳೆ ಅತ್ಯಂತ ಸುರಕ್ಷಿತಳು ಎನ್ನುವ ಈ ಯೋಜನೆಯು, ಹೇಗೆ ಸುರಕ್ಷಿತವೆಂಬುದನ್ನು ವಿವರಿಸಿಲ್ಲ. ಅಂದರೆ ಲೈಂಗಿಕ ಸುಖವನ್ನು ನಿರಾಳವಾಗಿ ಗಂಡು ಪಡೆಯಬಹುದಾಗಿದೆ ಎಂಬುದನ್ನು ಬಿಟ್ಟರೆ ಮಹಿಳೆಯರಿಗೆ ಯಾವ ಅನುಕೂಲವೂ ಇಲ್ಲವೆಂಬುದನ್ನು ಕಾಣಬಹುದು.

ಪ್ರಸವದ ನಂತರದ ಬಾಣಂತೀತನದ ಅವಧಿಯಲ್ಲಿಯೇ ತಮಗೆ ವಿಶ್ರಾಂತಿ ಸಿಗಬಹುದೆಂಬ ಆಸೆಯಿಂದ ಟ್ಯುಬೆಕ್ಟಮಿಯನ್ನು ಆಗಲೇ ಮಾಡಿಸಿಕೊಳ್ಳುವ ಮಹಿಳೆಯರೇ ಹೆಚ್ಚು. ಪುರುಷರಿಗಾದರೆ ಕೆಲವೇ ನಿಮಿಷಗಳಲ್ಲಾಗುವ ಶಸ್ತ್ರಕ್ರಿಯೆ, ಒಂದೇ ದಿನದ ವಿಶ್ರಾಂತಿ ಎಂಬಷ್ಟಕ್ಕೆ ಮುಗಿದರೆ ಈ ಶಸ್ತ್ರಚಿಕಿತ್ಸೆ ಮಹಿಳೆಯರಲ್ಲಿ ಬೇರೆ ವಿಧವಾಗಿರುತ್ತದೆ. ವಾರಗಟ್ಟಲೆ ಆಸ್ಪತ್ರೆಯಲ್ಲಿರುವುದು, ನಂತರದ ವಿಶ್ರಾಂತಿ, ಸಾಂಸಾರಿಕ ಒತ್ತಡಗಳೂ ಸೇರುತ್ತವೆ.

ಸರಿ ಎಲ್ಲವೂ ಸುರಕ್ಷಿತವಾಗಿಯೇ ಇದೆಯೆಂದು ಮಹಿಳೆ ಭಾವಿಸಿಕೊಂಡರೂ, ಕ್ರಮೇಣವಾಗಿ ಅವರಲ್ಲಿ ಖಿನ್ನತೆ ಆವರಿಸಿಕೊಂಡರೆ, ಕೆಲವರಲ್ಲಿ ಋತು ಚಕ್ರದ ದೋಷಗಳು, ಸ್ಥೂಲಕಾಯ ಜೊತೆ ಜೊತೆಯಾಗಿ ಎಂಥಹುದ್ದೋ ಮಾನಸಿಕ ತುಮುಲಗಳನ್ನು ಆಕೆ ಹೊಂದುತ್ತಾ ಹೋಗುತ್ತಾಳೆ. ತಾನಿರುವುದೇ, ತನ್ನ ಅಸ್ತಿತ್ವವಿರುವುದೇ ಹೆಣ್ತನದಲ್ಲಿ.. ಆ ಹೆಣ್ತನ ಲೈಂಗಿಕ ಪ್ರಧಾನವಾದದ್ದು ಮತ್ತು ತಾಯ್ತನಕ್ಕೆ ಸೀಮಿತವಾದದ್ದು: ಅವುಗಳೆರಡೂ ಇಲ್ಲವಾದಲ್ಲಿ ತನಗೆ ಅಸ್ತಿತ್ವವೇ ಇಲ್ಲ, ಮೌಲ್ಯಗಳ

ಜೊತೆ ಎಲ್ಲಾ ಭಾವನಾತ್ಮಕ ಸಂಬಂಧಗಳು ಕರಗಿ ಹೋಗುತ್ತಿವೆ ಎಂಬ ಮಾನಸಿಕ ವಿಭ್ರಮೆಗೊಳಗಾಗುತ್ತಿರುವ ಮಹಿಳೆಯರ ಸಂಖ್ಯೆ ಕಡಿಮೆಯೇನಿಲ್ಲ. ಹೆಣ್ಣಿನ ಲೈಂಗಿಕ ಸುಖಾನುಭವವು ಮೂಲಭೂತವಾಗಿ, ಬಹು ವಿಧವಾದದ್ದು. ಪುರುಷನ ಲೈಂಗಿಕತೆ ಕೇವಲ ಶಿಶ್ನ ಕೇಂದ್ರಿತವಾದದ್ದಾದುದರಿಂದ ಆಕೆಯ ಮನೋಸ್ಥಿತಿಯ ಮೇಲೂ ಈ ಸಂತಾನಹರಣ ಚಿಕಿತ್ಸೆಯ ವಿಧಾನಗಳು ಪರಿಣಾಮ ಬೀರುತ್ತವೆ. ಮಹಿಳೆಯರ ವ್ಯೆಯಕ್ತಿಕತೆಯನ್ನು ಅವರ ಲೈಂಗಿಕತೆಯ ನೆಲೆಗೇ ಜೋಡಿಸಿರುವುದರ ಫಲಿತಾಂಶವಿದು!

ನೈಸರ್ಗಿಕವಾಗಿ ಸಂತಾನೋತ್ಪಾದಕ ಪ್ರಕ್ರಿಯೆಗೆ ಮಹಿಳೆಯ ಶರೀರ ಹೊಂದಿಕೊಂಡಂತೆ, ಸಾಮಾಜಿಕವಾಗಿಯೂ ಮಗುವನ್ನು ಹೊರುವ, ಪಾಲಿಸುವ ಪಾತ್ರವನ್ನು ನಿರ್ವಹಿಸುವಲ್ಲಿ ಮಹಿಳೆಯ ಸಮಾಜೀಕರಣಕ್ಕೊಳಗಾದ ಜೀವಿಗಳನ್ನು ಬೆಳೆಸಿ ಒಗ್ಗಿಸುವಲ್ಲಿಯೂ ತನ್ನ ಪಾತ್ರವನ್ನು ವಹಿಸುತ್ತಾಳೆ. ತಾಯ್ತನ ಗೃಹನಿರ್ವಹಣೆ ಎಂದು ಖಾಸಗಿ ವಲಯಕ್ಕೇ ನಿಕಟ ಸಂಬಂಧವನ್ನು ಹೊಂದಿರುವ ಮಹಿಳೆಯನ್ನು ನಿಸರ್ಗಕ್ಕೆ ನಿಕಟವಾಗಿ ಉಳಿಸಿಬಿಡುತ್ತದೆ.

ಸ್ತ್ರೀಯರ ತಾಯ್ತನದ ಸಾಮರ್ಥ್ಯವನ್ನು ವೈಭವೀಕರಿಸುವುದಕ್ಕಾಗಿ, ಮಾತೃತ್ವದ ಜೀವದಾಯಕ ಜೀವರಕ್ಷಕ, ಸಂಗೋಪನೆಯ ಗುಣಗಳಿಗೆ ಒತ್ತು ಕೊಡುತ್ತಾರೆ. ಇಂತಹ ಸಂದರ್ಭಗಳಲ್ಲಿ ಸ್ತ್ರೀಯು ತನ್ನ ನೆಲೆಯನ್ನು ತಾನೇ ಕಂಡುಕೊಳ್ಳಬೇಕಾಗಿದೆ.

ಮೇಲ್ನೋಟಕ್ಕೆ ಮಹಿಳಾಭಿವೃದ್ಧಿಗಾಗಿಯೆಂಬಂತೆ ಕಾಣುವ ಆಯೋಗಗಳ ಯೋಜನೆಗಳಿಗೆ ತನ್ನನ್ನು ಒಡ್ಡುವ ಮುನ್ನ ಮಹಿಳೆಯು ಕೆಲವು ಕ್ಷಣ ಕುಳಿತು ವಿವೇಚಿಸಬೇಕಾಗಿದೆ. ಸ್ವಾತಂತ್ರ್ಯವೇ ಎಲ್ಲವನ್ನು ತರುತ್ತದೆ ಎಂಬುದು ಸುಳ್ಳು. ಸಮಾನತೆ, ಸ್ವಾತಂತ್ರ್ಯ ನೀಡಿದಾಗ್ಯೂ ಅದರ ಹಿಂದಿನ ಸತ್ಯಾಸತ್ಯಗಳು, ಲಾಭನಷ್ಟಗಳ ಬಗ್ಗೆಯೂ ಯೋಚಿಸಬೇಕಾಗಿದೆ.

ಸ್ತ್ರೀಯು ತನ್ನ ಹೆಣ್ತನ, ತಾಯ್ತನವನ್ನು ಮೆರೆಸುವ ಹುಮ್ಮಸ್ಸಿನಲ್ಲಿಯೇ, ಈ ಅವಧಿಯಲ್ಲಿಯೇ ಹೆಚ್ಚು ನಷ್ಟವನ್ನು ಹೊಂದುತ್ತಿದ್ದಾಳೆಂದರೆ ತಪ್ಪಾಗಲಾರದು. ಶಸ್ತ್ರಕ್ರಿಯೆಯ ನಂತರದ ರಜೆ, ವೇತನಗಳು, ಮನೆಯ ವಾತಾವರಣ, ವೈಯಕ್ತಿಕ ಜವಾಬ್ದಾರಿ ಎಲ್ಲವೂ ಸ್ತ್ರೀಯನ್ನು ದುರ್ಬಲಗೊಳಿಸುವ ಅಸ್ತ್ರಗಳಾಗಿವೆ. ಇವುಗಳೆಲ್ಲವನ್ನೂ ತಡೆದುಕೊಳ್ಳುವ ಅಥವಾ ಅವುಗಳಿಗೆ ಮರು ಅಸ್ತ್ರ ಉಪಯೋಗಿಸಲು ಶಿಕ್ಷಣವೊಂದೇ ಸಾಲದು ಮಾನಸಿಕ ತಯಾರಿಯೂ ಅತ್ಯಗತ್ಯವಾಗಿರುತ್ತದೆ.



## ಕುಟುಂಬ ಯೋಜನೆ ಮತ್ತು ಮಹಿಳೆ

**ಪ್ರತಿಕ್ರಿಯೆ : ೧ ಶಾರದಾ ಮಲಶೆಟ್ಟಿ**

ಕುಟುಂಬ ಯೋಜನೆ ನಮ್ಮಂತಹ ಮಧ್ಯಮ ವರ್ಗದ ಜನತೆಗೆ ಅಗತ್ಯ ಎನ್ನುವುದಕ್ಕಿಂತಲೂ ಅನಿವಾರ್ಯ ಎಂದೇ ಹೇಳಬೇಕು. ನಾವು ಕೆಳವರ್ಗದವರಂತೆ ಮಕ್ಕಳನ್ನು ತೀರ ಚಿಕ್ಕವಯಸ್ಸಿಗೆ ದುಡಿಮೆಗೆ ಹಚ್ಚಲಾರೆವು. ಹಾಗೆ ಅವರ ಅಗತ್ಯಗಳನ್ನು ನಿರ್ಲಕ್ಷಿಸಲಾರೆವು. ಯಾಕೆಂದರೆ ನಾವು ಸೋಷಿಯಲ್ ವ್ಯಾಲ್ಯೂಸ್ ಬಗೆಗೆ ಬಹಳ ಗಮನ ಹರಿಸುತ್ತೇವೆ. ಸದಾ ಮೇಲ್ಮುಖವಾದ ಜೀವನದ ಕಡೆ ಆಸೆಯಿಂದ ನೋಡ್ತಾ ಇರುತ್ತೇವೆ.

ಕುಟುಂಬ ಯೋಜನೆ ಅಂದ ಮಾತ್ರಕ್ಕೆ ನಾನು ಕೇವಲ ಒಂದು ಮಗುವನ್ನು ಮಾತ್ರ ಹೊಂದುವುದನ್ನು ಬೇಡ ಅಂದುಕೊಳ್ತೀನೆ (ಇದು ನನ್ನ ಸ್ವಂತ ಅನುಭವ) ಯಾಕೆಂದರೆ ಇದು ಆರ್ಥಿಕ ಸಮೃದ್ಧಿಯನ್ನು ನೀಡಬಹುದಾದರೂ ಮಕ್ಕಳ ಸೋಶಿಯಲ್ ಡೆವಲಪ್‌ಮೆಂಟ್ಸ್ ಮೇಲೆ ಪರಿಣಾಮ ಬೀರುತ್ತೆ. ಅದನ್ನ ತುಂಬುವುದಕ್ಕೆ ತಂದೆತಾಯಿಗಳಿಗೆ ಸಾಧ್ಯಆಗೋಲ್ಲ.

ಕುಟುಂಬ ಯೋಜನೆಯ ವಿಧಾನ ನ್ಯಾಚುರಲ್ ಆದುದಾದರೆ ತುಂಬಾ ಒಳ್ಳೆಯದು. ಆದ್ರೆ ಇದು ಎಷ್ಟರ ಮಟ್ಟಿಗೆ ಯಶಸ್ವಿಯಾಗುತ್ತೆ ಅನ್ನೋದು ಅವರವರ ದೇಹ ಪ್ರಕೃತಿಗೆ, ಜೀವನ ಕ್ರಮಕ್ಕೆ ಸೇರಿದ್ದು ಬಿಡಿ. ಇನ್ನು ಇತರ ವೈಜ್ಞಾನಿಕ ವಿಧಾನಗಳ ಬಗ್ಗೆ ಹೇಳೋದಾದ್ರೆ ಅದನ್ನ ಯಾರು ಅನುಸರಿಸಬೇಕು ಅನ್ನೋದು ಮೊದಲಿಗೆ ಗಂಡ ಹೆಂಡತಿಯ ಆರೋಗ್ಯವನ್ನ ಅವರ ವೃತ್ತಿಯನ್ನ ಆಧರಿಸಿದ್ದಾಗಿರಬೇಕು. ನನ್ನ ಅಭಿಪ್ರಾಯದಲ್ಲಿ ಗಂಡಸರು ದೈಹಿಕವಾಗಿ ಸಬಲರಾಗಿರುವುದರಿಂದ ಹಾಗು ಅವರು ಹೆಚ್ಚಾಗಿ ಬೇರೆ ಜವಾಬ್ದಾರಿ ಹೊರ ಬೇಕಾದಿಲ್ಲದ್ದರಿಂದ - ಅಂದ್ರೆ ಆಪರೇಷನ್ ಆದ ಮೇಲೆ ವಿಶ್ರಾಂತಿ ತೆಗೆದುಕೊಳ್ಳೋ ಅವಕಾಶ ಇತ್ಯಾದಿ - ಅವರು ಅನುಸರಿಸುವುದು ಒಳ್ಳೆಯದು ಅನ್ನುತ್ತೆ. ಅದೂ ಅಲ್ಲದೆ ಕುಟುಂಬ ಯೋಜನಾ ವಿಧಾನಗಳಲ್ಲಿ ಹೆಂಗಸರಿಗೆ ಇರುವುದೆಲ್ಲ ಇಂಟರನಲ್ ಆದುದು. ಅದರ ಸೈಡ್ ಎಫೆಕ್ಟ್ಸ್ ಖಂಡಿತಾ ಅಪಾಯಕಾರಿಯಾದುದು. ಕಾಂಡೋಮ್ಸ್‌ಗಳು ನ್ಯಾಚೂರಲ್ ಆದ ಅನುಭವವನ್ನು ಕೊಡೋಲ್ಲ ಅನ್ನೋ ಕಾರಣಕ್ಕಾಗಿ ಅವನ್ನ ಗಂಡಸರು ಒಪ್ಪಿಕೊಳ್ಳೋಲ್ಲ. ಅದನ್ನ ಬಿಟ್ರೆ ಅವರಿಗಾಗಿ ಬೇರೆ ವಿಧಾನಗಳು ಬಳಕೆಗೆ ಬಂದಿಲ್ಲ. ಹಾಗಾಗಿ ಅದರ ಹೊರೆ ಎಲ್ಲ ಹೆಂಗಸರ ಮೇಲೆ ಬೀಳೋ ಹಾಗಾಗಿದೆ. ಎಷ್ಟೋ ಜನ ಗಂಡಸರಿಗೆ ಹೆಂಗಸರ ಈ ಸಮಸ್ಯೆ ಅರಿವಿದ್ರೂ ಅವರ ಮುಂದೆ ಇದಕ್ಕಿಂತ ಭಿನ್ನವಾದ ದಾರಿ

ಕಾಣ್ತೈಲ್ಲ. ಆದ್ರೆ ಇಷ್ಟು ಸೆನ್ಸಿಬಲ್ ಆದ ಗಂಡಸರ ಸಂಖ್ಯೆ ತುಂಬಾ ಕಡಿಮೆ ಅನ್ನಿ. ತಮ್ಮ ತಮ್ಮ ಕುಟುಂಬದ ವಿಚಾರದಲ್ಲೇ ಸೆನ್ಸಿಬಲ್ ಆದವರ ಸಂಖ್ಯೆ ಕಡಿಮೆ ಇರಬೇಕಾದ್ರೆ ಗಂಡಸರೇ ಪ್ರಾಬಲ್ಯದಲ್ಲಿರೋ ತಂತ್ರಜ್ಞಾನ ಕ್ಷೇತ್ರದಲ್ಲಾಗಲಿ, ದೇಶದ ಆಡಳಿತದಲ್ಲಾಗಲಿ, ಯೋಜನೆಗಳಲ್ಲಾಗಲಿ ಅವರು ಹೆಂಗಸರ ಪರವಾದ ಕಾಳಜಿಯನ್ನು ಇಟ್ಕೊಂಡಿರುತ್ತಾರೆ ಅನ್ನೋದು ಕನಸು ಅಷ್ಟೆ. ಹೆಂಗಸರು ನುಂಗೋಕೆ ನಾಲ್ಕಾರು ತರದ ಮಾತ್ರೆ ಕಂಡು ಹಿಡಿತಾರೆ, ಬಳಕೆಗೆ ತರ್ತಾರೆ. ಆದ್ರೆ ಗಂಡಸರಿಗಾಗಿ ಯಾಕೆ ಇಲ್ಲ? ಅವು ಕೊಡೋ ಜಾಹೀರಾತನ್ನೇ ಗಮನಿಸಿ. ಇದುವರೆಗೆ ಸೈಡ್ ಎಫೆಕ್ಟ್ಸನ್ನು ಮುಚ್ಚಿಡುತ್ತಿದ್ದವು. ಈಗ ರಾಜಾರೋಷವಾಗಿ ಸೈಡ್ ಎಫೆಕ್ಟ್ಸ್ ಆದ್ರೂ ಕ್ರಮೇಣ ನಿಮ್ಮ ದೇಹ ಅದಕ್ಕೆ ಅಂದ್ರೆ, ಸೈಡ್ ಎಫೆಕ್ಟ್ಸ್‌ಗೆ, ಹೊಂದಿಕೊಳ್ಳುತ್ತೆ ಅಂತ ಹೇಳ್ತವೆ. ಇದರರ್ಥ ಏನು ...? ನಮ್ಮ ಸರಕಾರ ನೋಡಿ ಅತ್ಯುತ್ತಮವಾದ ಕಾಪರ್‌ಟೀಗಳು ಅಸ್ತಿತ್ವದಲ್ಲಿದ್ರೂ ಕಡಿಮೆ ದರ್ಜೆಯದನ್ನ ಒದಗಿಸುತ್ತೆ. ಕುಟುಂಬಯೋಜನೆಯಿಂದಾನೆ ಈ ದೇಶದ ಉದ್ಧಾರ ಅನ್ನೋದಾದ್ರೆ ಅದಕ್ಕೆ ಹೆಚ್ಚು ಹಣ ಉಪಯೋಗಿಸೋಕೆ ಯಾಕೆ ಹಿಂಜರಿಯಬೇಕು. ಈ ಕಳಪೆ ದರ್ಜೆ ವಿಧಾನಗಳು ಉಪಯೋಗಕ್ಕಿಂತ ತೊಂದರೆನೇ ಹೆಚ್ಚಿಗೆ ತರೋದಾದ್ರೆ ಯಾವ ಬಡವರಾದ್ರೂ ಯಾಕೆ ಅದರತ್ತ ಆಕರ್ಷಿತರಾಗುತ್ತಾರೆ. ಒಟ್ಟಿನಲ್ಲಿ ನನಗನ್ನಿಸುವುದು ಇಷ್ಟೆ. ಕುಟುಂಬ ಯೋಜನೆ ಈ ಸಮಾಜಕ್ಕೆ ಅಗತ್ಯ ಅನ್ನೋದಾದರೆ, ಅದರ ಅನುಷ್ಠಾನಕ್ಕೆ ಹೆಂಗಸರೇ ಮುಂದಾಗಬೇಕು ಅನ್ನೋದಾದರೆ, ಅವರ ಬದುಕಿನ ಬಗ್ಗೆ, ದೇಹ- ಮನಸ್ಸುಗಳ ಬಗ್ಗೆ ಮಾನವೀಯತೆ ತೋರಿಸಿ ಅವರ ಕಷ್ಟ- ನಷ್ಟಗಳನ್ನು ಅರ್ಥಮಾಡ್ಕೊಳ್ಳಿ. ಅದರ ಪರಿಹಾರಕ್ಕಾಗಿ ಪ್ರಾಮಾಣಿಕವಾಗಿ ಪ್ರಯತ್ನಿಸಿ.



**ಪ್ರತಿಕ್ರಿಯೆ : ೨ ಜಿ. ಕೆ. ಕುಲಕರ್ಣಿ**

ಜಗತ್ತಿನಲ್ಲಿಯೇ ಕುಟುಂಬ ಕಲ್ಯಾಣ ಕಾರ್ಯಕ್ರಮವನ್ನು ಮೊದಲು ಪ್ರಾರಂಭಿಸಿದ ಕೀರ್ತಿ ಮೈಸೂರು ಮಹಾರಾಜರದ್ದಾಗಿದೆ. ೧೯೩೦ರಷ್ಟು ಹಿಂದೆಯೇ ಅವರು ಮೈಸೂರಿನಲ್ಲಿ ಇದನ್ನು ಪ್ರಾರಂಭಿಸಿದರು. ೧೯೫೧ರಲ್ಲಿ ಭಾರತ ಸರ್ಕಾರ ಪ್ರಥಮ ಪಂಚವಾರ್ಷಿಕ ಯೋಜನೆಯಲ್ಲಿ ಈ ನಿಟ್ಟಿನಲ್ಲಿ ಪ್ರಯತ್ನ ಆರಂಭಿಸಿತು. ರಾಷ್ಟ್ರಮಟ್ಟದಲ್ಲಿ ಈ ಯೋಜನೆಯನ್ನು ಪ್ರಾರಂಭಿಸಿ ಅರ್ಧ ಶತಮಾನಕ್ಕೆ ಹತ್ತಿರ ಬಂದರೂ ಈ ಕಾರ್ಯಕ್ರಮದಲ್ಲಿ ಆಗಬೇಕಾದಷ್ಟು ಸಾಧನೆ ಆಗಿಲ್ಲವೆಂದು ಹೇಳಬಹುದು.

ಇದಕ್ಕೆ ಹಲವಾರು ಕಾರಣಗಳಿವೆ. ಇದು ಒಂದು ಜನಾಂದೋಲನವಾಗಿ ಬೆಳೆದು ಬರದೇ ಒಂದು ಕಾರ್ಯಕ್ರಮವಾಗಿ ಬೆಳೆದಿದೆ. ಅದು ವಿಶೇಷವಾಗಿ ಒಂದು ಮಹಿಳಾ ಕಾರ್ಯಕ್ರಮವಾಗಿದೆ. ಕುಟುಂಬಕಲ್ಯಾಣ ವಿಧಾನಗಳತ್ತ ಗಮನಹರಿಸಿದಾಗ ಅಲ್ಲಿ ಪುರುಷ ಪಕ್ಷಪಾತಿ ಧೋರಣೆ ಇದೆ. ಹೆಚ್ಚೂ ಕಡಿಮೆ ಎಲ್ಲಾ ವಿಧಾನಗಳೂ ಮಹಿಳಾ ಕೇಂದ್ರೀ ಕೃತವಾಗಿದೆ. ಅಣುಶಕ್ತಿ ಕಾರ್ಯಕ್ರಮದಷ್ಟೇ ಸೂಕ್ಷ್ಮತೆಯನ್ನು, ಗಂಭೀರತೆಯನ್ನು

ಹೊಂದಿದ ಈ ಕಾರ್ಯಕ್ರಮದಲ್ಲಿ ಪುರುಷರ ಭಾಗವಹಿಸುವಿಕೆ ಇಲ್ಲವೇ ಇಲ್ಲ ಎಂದು ಹೇಳಬಹುದು. ಹೆಂಡತಿಗೆ ಯಾವುದಾದರೊಂದು ವಿಧಾನ ಅಳವಡಿಸುವ ವ್ಯವಸ್ಥೆ ಮಾಡಿಸುವುದಷ್ಟೇ ತನ್ನ ಕರ್ತವ್ಯವೆಂದು ಪುರುಷ ಭಾವಿಸುವಂತಿದೆ.

ಮಹಿಳೆಯರಿಗಾಗಿ ಟ್ಯೂಬೆಕ್ಟಮಿ, ಉದರದರ್ಶಕ ಅಥವಾ ಲೆಪ್ರೊಟುಬೆಕ್ಟಮಿ ಎಂಬ ಎರಡು ವಿಧದ ಸಂತಾನನಿಯಂತ್ರಣದ ಶಸ್ತ್ರಚಿಕಿತ್ಸೆಗಳಿವೆ. ಇವು ಶಾಶ್ವತ ವಿಧಾನಗಳು. ಇವಲ್ಲದೇ ಅಂತರದ ಹೆರಿಗೆಗಾಗಿ ಕಾಪರ್‌ಟಿ ಮತ್ತು ನುಂಗುವ ಮಾತ್ರೆ ಎನ್ನುವ ಎರಡು ತಾತ್ಕಾಲಿಕ ವಿಧಾನಗಳಿವೆ. ಇವೆಲ್ಲವೂ ಎಲ್ಲ ಆಸ್ಪತ್ರೆಗಳಲ್ಲಿ ದೊರೆಯುವ ಸೌಲಭ್ಯಗಳು. ಪುರುಷರಿಗಾಗಿ ವ್ಯಾಸೆಕ್ಟಮಿ ಎಂಬ ಶಾಶ್ವತ ಶಸ್ತ್ರ ಚಿಕಿತ್ಸೆಯಿದೆ. ಅಲ್ಲದೇ ತಾತ್ಕಾಲಿಕ ವಿಧಾನವಾಗಿ ಕಾಂಡೋಮ್ ಉಪಯೋಗಿಸಬಹುದು.

ಮಗುವನ್ನು ಹೊತ್ತು, ಹೆತ್ತು, ಅದರ ಪಾಲನೆ ಮಾಡುವ ಹೆಣ್ಣೇ ಸಂತಾನ ನಿಯಂತ್ರಣ ವಿಧಾನಗಳನ್ನೂ ಅನುಸರಿಸಬೇಕಾಗಿರುವುದು ಒಂದು ವಿಪರ್ಯಾಸವೇ ಸರಿ. ನಿಸರ್ಗ ಮಾಡಿದ ಪಕ್ಷಪಾತದೊಂದಿಗೆ ಮಾನವ ನಿರ್ಮಿತ ಪಕ್ಷಪಾತ ಕೂಡಿಕೊಂಡಿವೆ. ಈ ಶತಮಾನದ ಕೊನೆಯ ತಿರುವಿನಲ್ಲಿ ನಿಂತಿರುವ ನಾವು ಈ ವಿಷಯದ ಕುರಿತು ಚಿಂತನ-ಮಂಥನ ನಡೆಸಬೇಕಾಗಿದೆ.

ಈಗ ಶಸ್ತ್ರಚಿಕಿತ್ಸೆ ಕೇವಲ ಸ್ವಯಂ ಪ್ರೇರಿತ. ಪತಿಪತ್ನಿಯರಲ್ಲಿ ಯಾರಾದರೂ ಒಬ್ಬರು ಮಾಡಿಸಿಕೊಳ್ಳಬಹುದು. ಯಾರಿಗೂ ಒತ್ತಾಯವಿಲ್ಲ. ದುಡಿಯುವ ಗಂಡಸಿಗೆ ಶಸ್ತ್ರಚಿಕಿತ್ಸೆಯ ಅಪಾಯ ಬೇಡ, ಹೆರಿಗೆಯ ನಂತರದ ಅವಧಿಯಲ್ಲಿ ತಮಗೆ ದೊರೆವ ವಿಶ್ರಾಂತಿ ಪುರುಷರಿಗೆ ಸಿಗುವುದಿಲ್ಲ ಎನ್ನುವ ಭಾವನೆಯು ಮಹಿಳೆಯರಲ್ಲಿ ಇದೆ. ಈ ಎಲ್ಲ ಕಾರಣಗಳಿಂದಾಗಿ ಸಂತಾನ ನಿಯಂತ್ರಣ ಚಿಕಿತ್ಸೆಗೆ ಮಹಿಳೆಯೇ ಹೆಚ್ಚು ಒಳಪಡುತ್ತಾಳೆ. ಮಹಿಳೆಯ ಪ್ರೀತಿ, ತ್ಯಾಗವನ್ನೇ ವೈಭವೀಕರಿಸುತ್ತಾ ಶಸ್ತ್ರ ಚಿಕಿತ್ಸೆಗಳಿಗೆ ಅವರನ್ನೇ ದೂಡುತ್ತಾ, ಪುರುಷ ಸಮಾಜವು ಒಂದು ತೆರನಾದ ಮಹಿಳೆಯ ಶೋಷಣೆಯನ್ನು ಮುಂದುವರೆಸಿದೆ. ಗಂಡಸಿನ ಪ್ರಾಬಲ್ಯ ನಿರಂತರವಾಗಿ ಮುಂದುವರೆದಿದೆ.

ತುರ್ತು ಪರಿಸ್ಥಿತಿಗಿಂತ ಮೊದಲು ಸಾಮಾನ್ಯ ಮಟ್ಟದಲ್ಲಿ ಪುರುಷರು ವ್ಯಾಸೆಕ್ಟಮಿ ಶಸ್ತ್ರಚಿಕಿತ್ಸೆಗೆ ಒಳಪಡುತ್ತಿದ್ದರು. ತುರ್ತುಪರಿಸ್ಥಿತಿ ಅವಧಿಯಲ್ಲಿ ಒಮ್ಮೆಂದೊಮ್ಮೆಲೆ ವ್ಯಾಸೆಕ್ಟಮಿಗಳ ಪ್ರಮಾಣ ಜಾಸ್ತಿಯಾಯಿತು. ಆ ಕಾಲದಲ್ಲಿ ಅದೊಂದು ಸಮೂಹ ಸನ್ನಿಯಂತೆ ಬೆಳೆಯಿತು. ಕೆಲಸದ ಹೆಚ್ಚಿನ ಹೊರೆಯಿಂದಾಗಿ ಶಸ್ತ್ರಚಿಕಿತ್ಸೆಗೆ ಒಳಗಾದವರ ಬಗೆಗೆ ಹರಿಸಬೇಕಾದಷ್ಟು ಗಮನ ಹರಿಸಲಾಗಲಿಲ್ಲ. ಯಾವುದೋ ಶಿಬಿರದಲ್ಲಿ ಎಲ್ಲಿಂದಲೋ ಬಂದು ಶಸ್ತ್ರಚಿಕಿತ್ಸೆ ಮಾಡಿಸಿಕೊಂಡು ಹೋಗಿದ್ದರಿಂದ ಅವರಿಗೆ ಸರಿಯಾದ ಅನುಸರಣಾ ಭೇಟಿ ನೀಡಲಾಗಲಿಲ್ಲ. ತುರ್ತುಪರಿಸ್ಥಿತಿ ನಂತರದ ಅವಧಿಯಲ್ಲಿ ತೊಂದರೆಗೆ ಒಳಗಾದ ಜನರ ಸುದ್ದಿಗಳು ಪ್ರಕಟವಾಗಿ ವ್ಯಾಸೆಕ್ಟಮಿ ಶಸ್ತ್ರಚಿಕಿತ್ಸೆ ಪೂರ್ಣವಾಗಿ ಹಿನ್ನಡೆಯಿತು. ಇದೇ ಅವಧಿಯಲ್ಲಿ ಶಸ್ತ್ರಚಿಕಿತ್ಸೆಗೆ ಒಳಪಟ್ಟು ಯಾವ ತೊಂದರೆಯಿಲ್ಲದೇ

ಆರೋಗ್ಯದಿಂದಿರುವ ಫಲಾನುಭವಿಗಳ ವಿಷಯ ಜನರ ಕಣ್ಣಿಗೆ ಕಾಣಲೇ ಇಲ್ಲ. ಇಂದು ವ್ಯಾಸೆಕ್ಟಮಿ ಚಿಕಿತ್ಸೆಗಳು ಬೆರಳೆಣಿಕೆಯಷ್ಟಾಗುತ್ತಿವೆ.

ಪುರುಷ ವ್ಯಾಸೆಕ್ಟಮಿ ಶಸ್ತ್ರಚಿಕಿತ್ಸೆಗೆ ಒಳಗಾಗಿ, ಆಕಸ್ಮಿಕವಾಗಿ ತಾಂತ್ರಿಕ ದೋಷದಿಂದ ಅಯಶಸ್ವಿಯಾಗಿ, ಮಹಿಳೆ ಗರ್ಭಧರಿಸಿದರೆ ಅದು ನೈತಿಕ ಮತ್ತು ಸಾಮಾಜಿಕ ಸಮಸ್ಯೆಯಾಗಿ ಕಾಡುವ ಭಯ ದಂಪತಿಗಳನ್ನು ಕಾಡುತ್ತದೆ. ಸುಳ್ಳು ಅಪವಾದಕ್ಕೆ ಬಲಿಯಾಗುವುದೂ ಬೇಡ ಸಮಾಜದ ಸಡಿಲ ನಾಲಿಗೆಗೆ ಆಹಾರವಾಗುವುದು ಬೇಡ ಎಂಬ ಭಾವನೆ ಮಹಿಳೆಯರಲ್ಲಿ ಇದೆ. ಈ ಹಿನ್ನೆಲೆಯಲ್ಲಿ ಮಹಿಳೆಯರೇ ಮುಂದೆ ಬಂದು ಶಸ್ತ್ರಚಿಕಿತ್ಸೆಗೆ ಒಳಗಾಗುತ್ತಾರೆ. ಈ ಭಾವನೆಯ ರಕ್ಷಾಕವಚದ ಹಿಂದೆ ನಿಂತು ಪುರುಷ ಮಹಿಳೆಯರಿಗೆ ಶಸ್ತ್ರಚಿಕಿತ್ಸೆ ಮಾಡಿಸುತ್ತ, ತನ್ನ ಪ್ರಾಬಲ್ಯವನ್ನು ಮುಂದುವರಿಸಿದ್ದಾನೆ. ಇದು ಹೆಂಡತಿಯ ಬಗೆಗೆ ಗಂಡನಲ್ಲಿರುವ ಪ್ರೀತಿ ಮತ್ತು ವಿಶ್ವಾಸದ ಸ್ವಲ್ಪ ಕೊರತೆಯನ್ನು ತೋರಿಸುತ್ತದೆ.

ಪುರುಷಶಸ್ತ್ರಚಿಕಿತ್ಸೆ ನಿಜವಾಗಿಯೂ ಸರಳ ಮತ್ತು ಪರಿಣಾಮಕಾರಿ. ಮಹಿಳೆಯರಿಗೆ ಮಾಡುವ ಶಸ್ತ್ರಚಿಕಿತ್ಸೆಗೆ ಹೋಲಿಸಿದಾಗಲಂತೂ ಇದು ತೀರ ಸುಲಭದ ಶಸ್ತ್ರಚಿಕಿತ್ಸೆ. ಈ ಶಸ್ತ್ರಚಿಕಿತ್ಸೆಯಲ್ಲಿ ವೀರ್ಯನಾಳವನ್ನು ಸ್ವಲ್ಪ ಕತ್ತರಿಸುತ್ತಾರೆ. ಇದರಿಂದಾಗಿ ಬೀಜಕೋಶದಲ್ಲಿ ಉತ್ಪತ್ತಿಯಾದ ವೀರ್ಯಾಣು ವೀರ್ಯಕೋಶವನ್ನು ಪ್ರವೇಶಿಸುವುದಿಲ್ಲ. ಈ ಪುರುಷರ ವೀರ್ಯದಲ್ಲಿ ವೀರ್ಯಾಣು ಇರುವುದಿಲ್ಲ. ಆದರೆ ಲೈಂಗಿಕಕ್ರಿಯೆಯಲ್ಲಿ ಯಾವುದೇ ವ್ಯತ್ಯಾಸ ಕಂಡುಬರುವುದಿಲ್ಲ. ಗರ್ಭಧಾರಣೆಯಾಗುವುದಿಲ್ಲ ಎಂಬುದು ಮುಖ್ಯ ಉದ್ದೇಶ. ಅಲ್ಲದೆ, ಇದು ದೇಹದ ಹೊರಗೆ ಮಾಡುವ ಸಣ್ಣ ಶಸ್ತ್ರಚಿಕಿತ್ಸೆ. ಮಹಿಳೆಯ ಶಸ್ತ್ರಚಿಕಿತ್ಸೆಯಂತೆ ದೇಹದ ಒಳಗೆ ಮಾಡುವುದಲ್ಲ. ಈ ಶಸ್ತ್ರಚಿಕಿತ್ಸೆಯ ನಂತರ ಆಸ್ಪತ್ರೆಯಲ್ಲಿರುವ ಅವಶ್ಯಕತೆಯಿಲ್ಲ. ಅಂದೇ ಮನೆಗೆ ಹೋಗಬಹುದು. ಯಾವುದೇ ಕಾರಣಕ್ಕೆ 'ಮರುಜೋಡಣೆ' ಅವಶ್ಯಕತೆ ಬಿದ್ದರೆ ಮಹಿಳೆಯರಿಗಿಂತಲೂ ಸರಳವಾಗಿ ವ್ಯಾಸೆಕ್ಟಮಿಯಲ್ಲಿ ಮರುಜೋಡಣೆ ಮಾಡಬಹುದು. ಮತ್ತೆ ಮಕ್ಕಳನ್ನು ಪಡೆಯಬಹುದು. ಇದು ವೈಜ್ಞಾನಿಕ ಸತ್ಯ. ಈ ವೈಜ್ಞಾನಿಕ ಸತ್ಯ ಒಪ್ಪಿಕೊಳ್ಳಲು ಪುರುಷ ಸಮಾಜ ಸಿದ್ಧವಿಲ್ಲ. ಇದೊಂದು ತೆರನಾದ ಜಾಣಕಿವುಡು. ಶಸ್ತ್ರಚಿಕಿತ್ಸೆ ಹೊಂದಿದ ಪುರುಷರಲ್ಲಿ ಶಕ್ತಿ ಕುಂದುತ್ತದೆ ಎನ್ನುವುದು ತಪ್ಪು ಕಲ್ಪನೆ. ಇದಕ್ಕೆ ಯಾವುದೇ ವೈಜ್ಞಾನಿಕ ಆಧಾರವಿಲ್ಲ. ತೀರ ಇತ್ತೀಚೆಗೆ ಬಂದ 'No scalpel' ವ್ಯಾಸೆಕ್ಟಮಿಯಲ್ಲಂತೂ ಗಾಯವಿಲ್ಲ. ಹೊಲಿಗೆಯೂ ಇಲ್ಲ. ತೀರಾ ಸರಳ. ಇಷ್ಟಾದರೂ, ಯಾಕೆ ಪುರುಷರಲ್ಲಿ ಹಿಂಜರಿತವಿದೆ ಎಂದು ವಿಶ್ಲೇಷಿಸಿದರೆ ಕೆಳಗಿನ ಅಂಶಗಳು ಎದ್ದು ಕಾಣುತ್ತವೆ.

೧. ಪುರುಷರು ಎಂದಿನಂತೆ ಮಹಿಳೆಯರನ್ನೇ ಶಸ್ತ್ರಚಿಕಿತ್ಸೆಗೆ ಮುಂದೊಡುತ್ತಾರೆ.

೨. ತೊಂದರೆಯಾದರೆ ನಮಗೇ ಆಗಲಿ ಎನ್ನುವ ಮಹಿಳೆಯರು.

೩. ಆರೋಗ್ಯ ಇಲಾಖೆಯಲ್ಲಿ ಮಹಿಳಾ ಆರೋಗ್ಯ ಸಹಾಯಕಿಯರೇ ಜಾಸ್ತಿ.

ಗರ್ಭಧಾರಣೆಯಿಂದ ಹೆರಿಗೆಯವರೆಗೆ ಮಹಿಳೆಯರ ಸಂಪರ್ಕ ಬರುವ ಇವರಿಗೆ ಶಸ್ತ್ರಚಿಕಿತ್ಸೆಗೆ ಮಹಿಳೆಯ ಮನವೊಲಿಸುವುದು ಬಹಳ ಸರಳ.

೪. ಅಲ್ಲದೇ ಮಹಿಳೆಯ ಗಂಡನಿಗೆ ವ್ಯಾಸೆಕ್ಟಮಿಯ ಬಗೆಗೆ ವಿವರಿಸುವುದು ಕಾರ್ಯಕರ್ತೆಯರಿಂದ ಸುಲಭ ಸಾಧ್ಯವಿಲ್ಲ.

ಈ ಹಿನ್ನೆಲೆಯಲ್ಲಿ ಮಹಿಳೆಯರ ಸಂತಾನ ನಿಯಂತ್ರಣ ಚಿಕಿತ್ಸೆಗಳೇ ಮುಂದುವರೆದಿವೆ. ಸಮಾಜದಲ್ಲಿರುವ ಜನಾಭಿಪ್ರಾಯ ಮುಂದಾಳುಗಳು, ಜನಪ್ರತಿನಿಧಿಗಳು, ಜನಪ್ರಿಯ ವ್ಯಕ್ತಿಗಳು ಮತ್ತು ಸರಕಾರಿ ನೌಕರರು ವ್ಯಾಸೆಕ್ಟಮಿ ಶಸ್ತ್ರಚಿಕಿತ್ಸೆ ಸ್ವೀಕರಿಸಿ ಬೇರೆಯವರಿಗೆ ಆದರ್ಶ ಆಗಬೇಕು. ಈ ವಿಷಯದಲ್ಲಿ ಎಲ್ಲರೂ ಚಿಂತಿಸುವುದು ಅವಶ್ಯ.

ಕಾಂಡೋಮ್ ಹೊರತಾಗಿ ಪುರುಷರಿಗೆ ಯಾವುದೇ ತಾತ್ಕಾಲಿಕ ವಿಧಾನಗಳಿಲ್ಲ. ಇತ್ತೀಚೆಗೆ ಏಡ್ಸ್ ನಿಯಂತ್ರಣದಲ್ಲಿಯೇ ಇದರ ಉಪಯೋಗ ಜಾಸ್ತಿ. ನಿರಂತರವಾಗಿ ಕಾಂಡೋಮ್ ಉಪಯೋಗಿಸಿ ಜನನದ ನಡುವೆ ಅಂತರವಿಡುವುದು ಅಥವಾ ಮಿತ ಕುಟುಂಬ ಸಾಧಿಸುವುದು ಪುರುಷರಿಗೆ ಸುಲಭವಾಗಿ ಸಾಧ್ಯವಾಗುವುದಿಲ್ಲ. ಸಹನೆ ವ್ಯವಧಾನಗಳೇ ಇವರಿಗೆ ದೊಡ್ಡ ಕಾರಣಗಳು. ಹೀಗಾಗಿ ಹೆಂಡತಿಗೆ ಕಾಪರ್‌ಟಿ ಅಳವಡಿಸಿದರೆ ಸಾಕು ಎನ್ನುತ್ತದೆ ಪುರುಷವರ್ಗ. ಮತ್ತೆ ತಾತ್ಕಾಲಿಕ ವಿಧಾನಗಳ ಒತ್ತಡ ಬೀಳುವುದು ಮಹಿಳೆಯರ ಮೇಲೆಯೇ. ಶೋಷಿತರಿಗೆ ಎಲ್ಲಿಗೆ ಹೋದರೂ ಶೋಷಣೆ ತಪ್ಪಿದ್ದಲ್ಲ. ಇದೊಂದು ವಿಷವರ್ತುಲ. ಕಾಪರ್‌ಟಿ ವಿಧಾನದಷ್ಟೇ ಪ್ರಭಾವಯುತವಾದ ಒಂದು ತಾತ್ಕಾಲಿಕ ಸಾಧನ ಅಥವಾ ಒಂದು ಲಸಿಕೆ ಪುರುಷರಿಗೆ ಬೇಕು. ಇದನ್ನು ಸಂಶೋಧಿಸುವುದು ಇಂದಿನ ಅವಶ್ಯಕತೆಯಾಗಿದೆ. ಈ ನಿಟ್ಟಿನಲ್ಲಿ ಹೆಚ್ಚು ಪ್ರಯತ್ನ ಬೇಕಾಗಿದೆ.

ಅಂತರ ಹೆರಿಗೆ ವಿಧಾನಗಳಲ್ಲಿ ಮಹಿಳೆಯರು ಬಳಸುವ ಇನ್ನೊಂದು ವಿಧಾನ ಎಂದರೆ ನುಂಗುವ ಮಾತ್ರೆ. ಸುಶಿಕ್ಷಿತ ಮಹಿಳೆ ಇದನ್ನು ಸರಿಯಾಗಿ ತೆಗೆದುಕೊಳ್ಳಬಲ್ಲಳು. ತೆಗೆದುಕೊಳ್ಳುವ ಮೊದಲು ಆರೋಗ್ಯ ಪರಿಶೀಲನೆ ಅಗತ್ಯ. ಕಲಿತ ಮಹಿಳೆಯರ ಪ್ರಮಾಣ ಕಡಿಮೆ ಇರುವುದರಿಂದ ಸರಿಯಾಗಿ ಮಾತ್ರೆ ಸೇವಿಸಲಾಗದೇ ಇಚ್ಛಿತ ಪರಿಣಾಮ ಆಗದೇ ಇರಬಹುದು. ಈ ಮಾತ್ರೆಯಂತಹ ಒಂದು ಮಾತ್ರೆ ಪುರುಷರಿಗೆ ಅವಶ್ಯವಾಗಿ ಬೇಕಾಗಿದೆ. ಈ ನಿಟ್ಟಿನಲ್ಲಿಯೂ ಹೆಚ್ಚಿನ ಸಂಶೋಧನೆ ಅಗತ್ಯ. ಅಂತರದ ಹೆರಿಗೆ ವಿಧಾನಗಳಲ್ಲಿ ಪುರುಷರು ಬಳಸುವ ಸಾಧನ, ವಿಧಾನಗಳನ್ನು ಕುರಿತು ಹೆಚ್ಚು ಸಂಶೋಧನೆ ಹಾಗೂ ಪ್ರಚಾರಗಳು ನಡೆದರೆ ಮಾತ್ರ ಮಹಿಳೆಯರ ಮೇಲಿನ ಒತ್ತಡ ಖಂಡಿತ ಕಡಿಮೆಯಾಗುತ್ತದೆ. ಈ ನಿಟ್ಟಿನಲ್ಲಿ ಎಲ್ಲರೂ ಚಿಂತಿಸಿದರೆ ಹೊಸ ಶತಮಾನದಲ್ಲಿಯಾದರೂ ಪುರುಷ ಸಹಭಾಗಿತ್ವ ಜಾಸ್ತಿಯಾಗಿ ಚಿಕ್ಕ ಕುಟುಂಬದ ವಿಷಯದಲ್ಲಿ ಮಹಿಳೆಯರ ಭಾರ ಕಡಿಮೆಯಾಗಿ ನೆಮ್ಮದಿಯಿಂದ ಬಾಳಲು ಸಾಧ್ಯವಾಗಬಹುದು.

ಮಾತುಕತೆ

## ಕರ್ನಾಟಕ ಲೇಖಕಿಯರ ಸಂಘದೊಂದಿಗೆ

ಡಾ. ಎಂ. ಉಷಾ

೧೯೭೯ ರ ಜನವರಿ ೨೬ ರಂದು ಕನ್ನಡ ಲೇಖಕಿಯರ ವೇದಿಕೆಯಾಗಿ ಅಸ್ತಿತ್ವಕ್ಕೆ ಬಂದ ಕರ್ನಾಟಕ ಲೇಖಕಿಯರ ಸಂಘ ಈ ೨೦ ವರ್ಷಗಳಲ್ಲಿ ಕರ್ನಾಟಕದ ಸಾಂಸ್ಕೃತಿಕ ಬದುಕಿನ ಮಹತ್ವದ ಸಂಸ್ಥೆಯೊಂದಾಗಿ ಬೆಳೆದು ನಿಂತಿದೆ. ಪ್ರಧಾನ ಸಾಹಿತ್ಯ ಧಾರೆಯು ಹಲವಾರು ಪಂಥಗಳಾಗಿ ಒಡೆದು ಪರಸ್ಪರ ವಾಗ್ಯುದ್ಧದಲ್ಲಿ ತೊಡಗಿದ್ದಾಗ ಅವೆಲ್ಲವುಗಳಿಂದಲೂ ಸರಿಸುಮಾರು ಏಕರೀತಿಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿದ್ದ ಮಹಿಳಾ ಸಾಹಿತ್ಯವನ್ನು ಒಂದೆಡೆ ತಂದು ಪ್ರೋತ್ಸಾಹಿಸಬೇಕೆಂಬ ಕಾರಣಕ್ಕಾಗಿ ಹುಟ್ಟಿಕೊಂಡ ಸಂಘದ ಮೊದಲ ಅಧ್ಯಕ್ಷರಾಗಿ ಟಿ. ಸುನಂದಮ್ಮನವರು ನಂತರ ಕ್ರಮವಾಗಿ ಹೆಚ್. ಎಸ್. ಪಾರ್ವತಿ, ಹೇಮಲತಾ ಮಹಿಷಿ ಹಾಗೂ ನಾಗಮಣಿ ಎಸ್. ರಾವ್ ಅವರು ಅದರ ಹೊಣೆ ಹೊತ್ತು ನಡೆಸಿದ್ದಾರೆ. ಸುಮಾರು ೭೦೦ಕ್ಕೂ ಹೆಚ್ಚು ಲೇಖಕಿ ಸದಸ್ಯರು ಇದರ ಒಡನಾಡಿಯಾಗಿ, ಜೀವನಾಡಿಯಾಗಿದ್ದಾರೆ. ನಾಲ್ಕು ಕನ್ನಡ ಲೇಖಕಿಯರ ಸಮ್ಮೇಳನಗಳನ್ನು ನಡೆಸಿದ್ದಾರೆ. ಅನುಪಮ ಪ್ರಶಸ್ತಿಯನ್ನು ಒಳಗೊಂಡಂತೆ ಹಲವಾರು ದತ್ತಿ ನಿಧಿಗಳನ್ನು ಲೇಖಕಿಯರಿಗೆ ನೀಡುತ್ತಾ ಬಂದಿದ್ದಾರೆ. ತಮ್ಮದೇ ಪ್ರಕಾಶನವನ್ನು ಹೊಂದಿದ್ದು, ಸುಮಾರು ೧೭ ಮಹತ್ವದ ಪುಸ್ತಕಗಳನ್ನು ಮಹಿಳಾ ಸಾಹಿತ್ಯ ಸಂಬಂಧಿಯಾಗಿ ಹೊರ ತಂದಿದ್ದಾರೆ. ಕರ್ನಾಟಕದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ಲೇಖಕಿಯರ ಹಿತಾಸಕ್ತಿಯನ್ನು ಕಾಪಾಡುವ ಧ್ಯೇಯವುಳ್ಳ ಹಲವಾರು ಸಂಘಸಂಸ್ಥೆಗಳು ಹುಟ್ಟಿಕೊಳ್ಳಲು ಪ್ರೇರಕ ಶಕ್ತಿಯಾಗಿದೆ ಈ ಸಂಸ್ಥೆ.

ಮನುಕುಲದ ಏಳ್ಗೆಗಾಗಿ ದುಡಿಯುವ ಮಾರ್ಗಗಳು ಹಲವು. ಅದರಲ್ಲಿ ಸ್ತ್ರೀಪರ ಕಾಳಜಿಗಳ ಮೂಲಕ ಗುರಿ ಮುಟ್ಟುವ ಹಂಬಲವನ್ನು ಹೊತ್ತ ಹಲವಾರು ವ್ಯಕ್ತಿಗಳು, ಸಂಘಸಂಸ್ಥೆಗಳು ಕರ್ನಾಟಕದ ಸಾಂಸ್ಕೃತಿಕ ಬದುಕಿನಲ್ಲಿ ನೂರಾರು. ಅಂತಹವರೊಂದಿಗಿನ ಮಾತುಕತೆಯ ಮೂಲಕ ಪತ್ರಿಕೆಯನ್ನು ಇನ್ನಷ್ಟು, ಮತ್ತಷ್ಟು ಸಮೃದ್ಧಿಗೊಳಿಸುವುದು ಪತ್ರಿಕೆಯ ಕಾರ್ಯವಿಧಾನಗಳಲ್ಲಿ ಒಂದಾಗಿದೆ. ಅದಕ್ಕಾಗಿ ಈ ಬಾರಿ ಆಯ್ದು ಕೊಂಡಿರುವ ಸಂಸ್ಥೆ ಕರ್ನಾಟಕ ಲೇಖಕಿಯರ

ಸಂಘ. ಕಳೆದ ೨೦ ವರ್ಷಗಳಿಂದಲೂ ನಿರಂತರ ಹುಮ್ಮಸ್ಸಿನಿಂದ ಕನ್ನಡ ಲೇಖಕಿಯರ ಪರವಾಗಿ ಕೆಲಸ ಮಾಡುತ್ತಿರುವ ಈ ಸಂಸ್ಥೆಯ ಅಧ್ಯಕ್ಷಸ್ಥಾನದಲ್ಲಿ ನಿಂತು ಕೆಲಸ ಮಾಡಿರುವ ಶ್ರೀಮತಿ ಹೆಚ್. ಎಸ್. ಪಾರ್ವತಿ, ಡಾ. ಹೇಮಲತಾ ಮಹಿಷಿ ಹಾಗೂ ಶ್ರೀಮತಿ ನಾಗಮಣಿ ಎಸ್. ರಾವ್ ಅವರನ್ನು (ಮೊದಲ ಅಧ್ಯಕ್ಷರು: ಟಿ. ಸುನಂದಮ್ಮನವರು) ಒಂದೆಡೆ ಸೇರಿಸಿ ಸಂಸ್ಥೆಯ ಬೆಳವಣಿಗೆ ಅದರ ಕಾರ್ಯವಿಧಾನ, ಧ್ಯೇಯೋದ್ದೇಶಗಳ ಕುರಿತಂತೆ ದೀರ್ಘವಾದ ಮಾತುಕತೆ ನಡೆಸಲು ಪ್ರಯತ್ನಿಸಲಾಯಿತು. ಆದರೆ ಕೆಲವು ತಾಂತ್ರಿಕ ತೊಂದರೆಗಳಿಂದಾಗಿ ಹೆಚ್. ಎಸ್. ಪಾರ್ವತಿಯವರನ್ನು ಭೇಟಿ ಮಾಡಲಾಗಲಿಲ್ಲ. ಹಾಗೆ ಶ್ರೀಮತಿ ಹೇಮಲತಾ ಮಹಿಷಿ ಹಾಗೂ ಶ್ರೀಮತಿ ನಾಗಮಣಿ ಎಸ್. ರಾವ್ ಅವರಿಬ್ಬರನ್ನು ಕೂಡ ಒಂದೆಡೆ ಸೇರಿಸಿ ಮಾತನಾಡಿಸಲಾಗಲಿಲ್ಲ. ಆ ಕಾರಣದಿಂದಾಗಿ ಪ್ರತ್ಯೇಕ, ಪ್ರತ್ಯೇಕವಾಗಿಯೇ ನಡೆಸಿದ ಅವರೊಂದಿಗಿನ ಮಾತುಕತೆಯನ್ನು ಸ್ಥೂಲವಾದ ನೆಲೆಯಲ್ಲಿ ವಿಭಜಿಸಿಕೊಂಡು ಸಂಘದ ಈಗಿನ ಅಧ್ಯಕ್ಷರಾಗಿ ಕೆಲಸ ನಿರ್ವಹಿಸುತ್ತಿರುವ ನಾಗಮಣಿಯವರ ಹತ್ತಿರ ಹೆಚ್ಚಾಗಿ ಸಂಘದ ಕಾರ್ಯಕ್ರಮಗಳ ಕುರಿತಂತೆಯೂ, ಹಿಂದಿನ ಅಧ್ಯಕ್ಷರಾದ ಹೇಮಲತಾ ಅವರ ಬಳಿ ಅವರ ಕಾಲಘಟ್ಟದಲ್ಲಿ ಆರಂಭಗೊಂಡ ಮರೆತುಹೋದ ಲೇಖಕಿಯರ ಕುರಿತಾದ ಸಂಶೋಧನಾ ಕಾರ್ಯ, ಮಹಿಳಾ ಸಾಹಿತ್ಯ ಚರಿತ್ರೆಯ ರಚನೆ, ಅದರ ಅಂಗವಾಗಿ ಸಂಘ ಕೈಗೊಂಡಿರುವ ಯೋಜನೆಗಳ ಕುರಿತಂತೆ ಚರ್ಚೆ ನಡೆಸಲಾಯಿತು. ಹೀಗೆ ಬೇರೆ ಬೇರೆಯಾಗಿ ಸಂದರ್ಶನ ನಡೆಸಬೇಕಾದ ಕಾರಣದಿಂದಾಗಿಯೇ ಹಲವಾರು ಪುನರುಕ್ತಿಗಳು ಉಂಟಾಯಿತು. ಅಂಥದ್ದನ್ನು ಸ್ವಲ್ಪಮಟ್ಟಿಗೆ ಕತ್ತರಿಸಿದರೂ ಸಾಧ್ಯವಾದಷ್ಟು ಅವರ ವಿಚಾರಧಾರೆಗಳನ್ನು ಸಂಪೂರ್ಣವಾಗಿ ಇಲ್ಲಿ ಕೊಡಲು ಪ್ರಯತ್ನಿಸಿದ್ದೇವೆ.

**ನಾಗಮಣಿ ಎಸ್. ರಾವ್ ಅವರೊಂದಿಗೆ**

ಪ್ರಶ್ನೆ : ನಮಸ್ಕಾರ ನಾಗಮಣಿಯವರೇ, ನೀವು ಆರಂಭದಿಂದಲೂ ಕರ್ನಾಟಕ ಲೇಖಕಿಯರ ಸಂಘದಲ್ಲಿ ಇದ್ದವರು. ಸಂಘ ಹುಟ್ಟಿಕೊಂಡದ್ದರ ಬಗ್ಗೆ ಸ್ವಲ್ಪ ಹೇಳ್ತೀರ?

ನಾಗಮಣಿ : ಲೇಖಕಿಯರ ಸಂಘ ಹುಟ್ಕೊಳ್ಳೋಕೆ ಕಾರಣ ಅಂದ್ರೆ ಆಗಿನ ಸನ್ನಿವೇಶದಲ್ಲಿ ಲೇಖಕಿಯರಿಗೆ ಅಷ್ಟಾಗಿ ಅವಕಾಶ ಸಿಕ್ತಿರಲಿಲ್ಲ. ಆ ಹೊತ್ತು ಚೆನ್ನಾಗಿ ಬರೀತಿದ್ದ ಲೇಖಕಿಯರಿಗೂ ಇದ್ದ ಅಭಿಪ್ರಾಯ ಅಂದ್ರೆ ಎಲ್ಲೋ ಪ್ರಾತಿನಿಧಿಕ ಅಂತ ಅವರ

ಕಣ್ಣಿಗೆ ಬಿದ್ದ ಒಬ್ಬರನ್ನೋ ಇಬ್ಬರನ್ನೋ mention ಮಾಡ್ಬಿಟ್ಟು ಒಟ್ಟಾರೆಯಾಗಿ ಪಕ್ಕಕ್ಕೆ ಸರಿಸಿದಾರೆ ಅನ್ನೋದೆ ಆಗಿತ್ತು. ಹೀಗಾದಾಗ ಒಳಗಡೆನೇ ಎಲ್ಲೋ ಒಂಥರಾ ಅತೃಪ್ತಿ ಬೆಳೀತಿತ್ತು. ಅದೇ ಸಂದರ್ಭದಲ್ಲಿ ಲೇಖಕಿಯಾಗಿ ಇನ್ನೂ ಎತ್ತರಕ್ಕೆ ಬೆಳೀಬೇಕು ಅನ್ನೋ ಉತ್ಸಾಹನೂ ಇವರಲ್ಲಿ ಸೇರಿಕೊಂಡಾಗ ನಾವೊಂದು ಹದಿನೈದು- ಇಪ್ಪತ್ತು ಜನ ಒಂದು ಕಡೆ ಸೇರಿದ್ವಿ... ಆಗ ಜಿ. ನಾರಾಯಣ ಅವ್ರು ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ರು. ಅವ್ರು ನೀವೊಂದು ಸಂಘ ಮಾಡ್ಕೊಳ್ಳಿ, ನಿಮಗೆ ನೀವೇ ಒಂದು ವೇದಿಕೆ ಕಲ್ಪಿಸಿಕೊಂಡ್ರೆ ಅದು ನೀವು ಬೆಳೆಯೋದಕ್ಕೆ ಅನುಕೂಲ. ಜೊತೆಗೆ ನಿಮ್ಮ ದನಿಯನ್ನು ಎಲ್ಲೆಲ್ಲಿ ಬೇಕೋ ಅಲ್ಲಿ ಎತ್ತೋದಕ್ಕೂ ಅನುಕೂಲ ಅಂತ ಸೂಚಿಸಿದರು. ಅದ್ರ ಮೇಲೆ ಅವರ ಮನೇಲೇ ಪ್ರಥಮ ಸಭೆ ನಡೆದು ಈ ಸಂಘ ಅಸ್ತಿತ್ವಕ್ಕೆ ಬಂತು. ಟಿ. ಸುನಂದಮ್ಮ ಪ್ರಥಮ ಅಧ್ಯಕ್ಷರಾದ್ರು. ಪಾರ್ವತಿಯವರು ಪ್ರಥಮ ಕಾರ್ಯದರ್ಶಿಯಾದ್ರು, ನಾನು ಖಜಾಂಚಿಯಾದೆ... ಆಗ ಕೆಲವು ಹಿರಿಯ ಲೇಖಕಿಯರೂ ಕೂಡ ಪ್ರತ್ಯೇಕ ಯಾಕೆ ಬೇಕು? ಬೇಡ. ಎಲ್ಲ ಒಂದೇ ಇರ್ಲಿ. ಮಹಿಳಾ ಸಾಹಿತ್ಯ ಅಂತ ಬೇರೆ ಇರುತ್ತ? ಇದು ಬೇರೇನೇ ಆಗೋಗುತ್ತೆ. ಇದಿರಬಾರದು ಅಂತ ವಿರೋಧ ಮಾಡಿದ್ರು.. ಆದ್ರೆ ಆಮೇಲೆ ಹಾಗೆ ವಿರೋಧಿಸಿದವರೇ ಇದರಲ್ಲಿ ಸೇರಿದ್ರು. ಇದನ್ನು ಒಪ್ಪಿಕೊಂಡ್ರು.

ಪ್ರಶ್ನೆ: ಕೆಲವರು ಅಂದ್ರೆ ಯಾರು? ಅವರ ಹೆಸರು ಹೇಳಿ?

ನಾಗಮಣಿ : ಅಲ್ಲ, ಅದು ಬೇಕಾ ಅಂತ ?

ಪ್ರಶ್ನೆ : ಲೇಖಕಿಯರ ಸಂಘದ History ಯಲ್ಲಿ record ಆಗ್ಲಿ ಅಲ್ವ. ಅವರ ಅಭಿಪ್ರಾಯ negative ಅಂತ ಅಲ್ಲ. ಆ ತರದ ಅಭಿಪ್ರಾಯ ಇವತ್ತಿಗೂ ಇದೆ ಅಲ್ವ?

ನಾಗಮಣಿ : ಅದು ಸರಿ ಅನ್ನಿ. ಅನುಪಮಾ ವಿರೋಧಿಸಿದ್ರು. ಮಂಗಳಾಗೂ ಅದೇ ಅಭಿಪ್ರಾಯ ಇತ್ತು. ಆದ್ರೆ ನಂತರ ಅವರುಗಳೂ ನಮ್ಮ ಬೆಂಬಲಕ್ಕೆ ನಿಂತರು. ಅನುಪಮಾ ಅವರ ಮರಣ ಶಾಸನದಲ್ಲಿ ಸಂಘಕ್ಕೆ ಅಂತ ಐವತ್ತು ಸಾವಿರ ರೂಪಾಯಿ ಬಿಟ್ಟಿದ್ರು. ಅದರಲ್ಲೇ ಅನುಪಮಾ ಪ್ರಶಸ್ತಿ ಸ್ಥಾಪಿಸಿದೀವಿ. ಮಂಗಳಾ ಅವರಂತೂ ಒಂದು ಸಂಸ್ಥೇನೇ ಕಟ್ಟಿದರು ಬಿಡಿ.

ಪ್ರಶ್ನೆ : ಸಂಘ ಆರಂಭಗೊಂಡಾಗ ಅವತ್ತಿನ ಲೇಖಕರು ಇದಕ್ಕೆ ಯಾವ ತರ ಪ್ರತಿಕ್ರಿಯಿಸಿದರು. ಈಗ್ತಾನೆ ಜಿ. ನಾರಾಯಣ ಅವರ ಮಾತು ಹೇಳಿದ್ರಿ. ಹಾಗೆ ಅನುಪಮಾ ಮಂಗಳ ಅವರ ವಿರೋಧಾನು ಹೇಳಿದ್ರಿ. ಹಾಗೆ ಇನ್ಯಾರಾದ್ರು...?

ನಾಗಮಣಿ (ಸ್ವಲ್ಪ ಮೌನದ ನಂತರ).. ಇವರ ಬಗ್ಗೆ ನಾನು ಏನೂ ಅಂಥದ್ದು ಮನಸ್ಸಲ್ಲಿ record ಮಾಡ್ಕೊಂಡಿಲ್ಲ.... ನನಗೆ ಗೊತ್ತಿರೋ ಹಾಗೆ ಯಾರೂ ನೇರವಾಗಿ ಏನೂ ಖಂಡಿಸಿದ ಹಾಗಿಲ್ಲ. ಹಿಂದೆ ಏನೋ ನನಗೆ ಗೊತ್ತಿಲ್ಲ.

ಪ್ರಶ್ನೆ: ಸಂಘ ಆರಂಭವಾಗಿ ೨೦ ವರ್ಷ ಆಯ್ತು. ಅಂದ್ರೆ ಆಗ ಬಂಡಾಯ ದಲಿತ ಚಳುವಳಿಗಳು ಮುಂಚೂಣಿಗೆ ಬಂದ ಕಾಲ. ಈ ಚಳುವಳಿಗಳು ಕನ್ನಡ ಲೇಖಕಿಯರಿಗೆ ಸಾಕಷ್ಟು ದನಿಯನ್ನು ಕೊಟ್ಟಿದೆ ಸಹ. ಕಾಲ ಘಟ್ಟದ ಹಿನ್ನೆಲೆಯಲ್ಲಿ ನೋಡಿದ್ರೆ ಈ ಸಂಘದ ಹಿಂದೇನೂ ಅವರ ತಾತ್ವಿಕ, ನೈತಿಕ ಬೆಂಬಲ ಇರಬಹುದು ಅನ್ಸುತ್ತೆ. ಈ ಹಿನ್ನೆಲೆಯಲ್ಲಿ ಅವುಗಳ ಜೊತೆ ಏನಾದ್ರೂ ವಿಶೇಷ ಸಂಪರ್ಕ ಇತ್ತಾ?

ನಾಗಮಣಿ : ನಮ್ಮಲ್ಲಿನ ಕೆಲವು ಲೇಖಕಿಯರು ಆ ಸಂಘಟನೆಯಲ್ಲಿ ಬರೀತಿದ್ರು ನಿಜ. ಆದ್ರೆ ಸಂಘಕ್ಕಿದ್ದ ಧ್ಯೇಯ ಎಲ್ಲಾ ತರಹದ ಮಹಿಳೆಯರನ್ನೂ ಒಳಗೊಳ್ಳಬೇಕು ಅಂತಿತ್ತೇ ಹೊರತು ಈ ತರಹ ಬರೆಯೋರಿಗೆ ಮಾತ್ರ, ಈ ಐಡಿಯಾಲಜಿಯಲ್ಲಿ ಬರೆಯೋರಿಗೆ ಮಾತ್ರ ಒತ್ತು ಕೊಡಬೇಕು ಅಂತೇನಿರಲಿಲ್ಲ. ಹಾಗಾಗಿ ನಾವು ಅದುವರೆಗಿದ್ದ ಕನ್ನಡ ಸಾಹಿತ್ಯದ ಯಾವ ಪಂಥದ ಜೊತೆಗೂ ನಮ್ಮನ್ನ ವಿಶೇಷವಾಗಿ tag ಮಾಡ್ಕೊಳ್ಳಿಲ್ಲ. ಇನ್ನೂ ನಮ್ಮ ಲೇಖಕಿಯರಲ್ಲಿ ಅವರು ಯಾರ ಜೊತೆಯಲ್ಲಿ ಬೇಕಿದ್ರೂ ತಮ್ಮನ್ನ ಗುರುತಿಸಿಕೊಳ್ಳೋ ಹಕ್ಕಿದೆ. ಸ್ವಾತಂತ್ರ್ಯ ಇದೆ. ಇದ್ರಿಂದ ಸಂಘದ ಬೆಳವಣಿಗೆಗೇನೂ ಅಡ್ಡಿ ಇಲ್ಲ.

ಪ್ರಶ್ನೆ : ಹಾಗಿದ್ರೆ ಸಂಘದ ಆರಂಭದ ಕಾಲಕ್ಕೆ ಅಂದಿನ ಸಾಹಿತ್ಯಿಕ ವಾತಾವರಣದ ಬಗ್ಗೆ ಭಿನ್ನಾಭಿಪ್ರಾಯ ಏನಾದ್ರೂ ಇತ್ತ?

ನಾಗಮಣಿ : ಲೇಖಕಿಯರನ್ನ ಕೇಂದ್ರವಾಗಿಟ್ಟುಕೊಂಡು, ಲೇಖಕಿಯರಿಗೆ ಸ್ಥಾನ ದೊರಕಿಸಿಕೊಡಬೇಕು, ಅವರಿಗೇನಾದ್ರೂ ಅನ್ಯಾಯ ಆದ್ರೆ ನಮ್ಮ ದನಿ ಎತ್ತಬೇಕು- ಈ ತರದ ಗುರಿ ಇಟ್ಕೊಂಡು ಆರಂಭ ಆಯ್ತೆ ಹೊರತು ಬೇರೆ ಯಾರನ್ನೋ ವಿರೋಧಿಸಬೇಕು ಅಂತಾನೋ ಅಥವ ಅವರು ಮಾಡ್ತಾರೆ, ಇವರು ಮಾಡ್ತಾರೆ ಅಂತ ಅನುಸರಿಸಬೇಕು ಅಂತಾನೋ ಅಲ್ಲ.

ಪ್ರಶ್ನೆ : ಅಂದರೆ ಪ್ರಧಾನ ಧಾರೆ ತೋರಿಸ್ತಿರುವ ನಿರ್ಲಕ್ಷ್ಯವನ್ನು ಕುರಿತಂತೆ ಪ್ರತಿರೋಧವಾಗಿ ಇದನ್ನು ಕಟ್ಟಿದ್ದು ಅಲ್ಲ ಅಂತೀರ?... ಅಲ್ಲ, ಮೊದಲಿಗೆ ಒಂಥರಾ ಅತೃಪ್ತಿ ಇತ್ತು ಅಂತ ಹೇಳಿದ್ದೀರಲ್ಲ, ಆ ಹಿನ್ನೆಲೆಯಲ್ಲಿ ಕೇಳ್ತಿದೀನಿ?

ನಾಗಮಣಿ : ನೋಡಿ ಸಾಹಿತ್ಯಕ್ಕೆ ಬಂದ್ಮೇಲೆ ಎಲ್ಲಾ ಒಂದೇನೇ. ಇಲ್ಲಿ ಮಹಿಳಾ ಸಾಹಿತ್ಯ ಅಂತ ಪುರುಷ ಸಾಹಿತ್ಯ ಅಂತ ಬೇರೆ ಬೇರೆ ಇರೋದಕ್ಕೆ ಸಾಧ್ಯ ಇಲ್ಲ ನಿಜ. ಆದ್ರೆ ಅದರೊಳಗೆ ಮಹಿಳಾ ದೃಷ್ಟಿ, ಸಂವೇದನೆ ಅಂತ ಒಂದಿರುತ್ತೆ. ಹಾಗಾಗಿ ಸಾಹಿತ್ಯ ಎಲ್ಲ ಒಂದೇ, ಗುಣಮಟ್ಟ ಒಂದೇ ಆದ್ರೂ ನೋಡೋ ದೃಷ್ಟಿ ಬೇರೆ ಇರುತ್ತೆ. ಅದರಲ್ಲಿ ಮಹಿಳಾ ದೃಷ್ಟಿ ಅನ್ನೋದು ಖಂಡಿತಾ ಇದೆ.

ಪ್ರಶ್ನೆ : ಹಾಗಿದ್ರೆ ನಿಮ್ಮ ಕಾರ್ಯ ಕ್ರಮದಲ್ಲಿ ಲೇಖಕರಿಗೂ ಏನಾದ್ರೂ ಅವಕಾಶ ಇದೆಯಾ? ಅವರನ್ನು ಯಾವ ಥರಾ involve ಮಾಡ್ಕೋತೀರ?

ನಾಗಮಣಿ : ನಮ್ಮಲ್ಲಿ ಎಷ್ಟೋ ಜನ ಪುರುಷರು ಸಂಘದ ಪೋಷಕರಾಗಿದ್ದಾರೆ. ಆದ್ರೆ ಅವರಿಗೆ voting right ಇರಲ್ಲ. ಯಾವುದೇ programme ಆದ್ರೂ ಮಹಿಳೆಯರನ್ನು ಕರೆದಷ್ಟೆ ಅವರನ್ನೂ ಕರೀತೀವಿ. ಇನ್ನು ಬರೋದು ಬಿಡೋದು ಅವರಿಗೆ ಬಿಟ್ಟಿದ್ದು. ಮುಖ್ಯ ಅತಿಥಿಗಳಾಗಿ ಕೂಡ ಹಲವರನ್ನು ಕರೆದಿದ್ದೀವಿ. ಸ್ತ್ರೀಯರಿಗೆ ಸಂಬಂಧಪಟ್ಟ ಹಾಗೆ ಒಂದು Subject ಇದ್ರೂ ಕೂಡ ಅದಕ್ಕೆ ಇನ್ನೊಂದು ಆಯಾಮ ಅಂತ ಹೇಳಿ ಅವರ ದೃಷ್ಟಿಗೂ ಅವಕಾಶ ಕೊಡ್ತೀವಿ.

ಪ್ರಶ್ನೆ : ಈ ಇಪ್ಪತ್ತು ವರ್ಷದಲ್ಲಿ ಕನ್ನಡ ಲೇಖಕಿಯರು ಹಾಗೂ ಅವರ ಸಾಹಿತ್ಯ ಎರಡೂ ಹಲವಾರು ಸ್ಥಿತ್ಯಂತರಗಳನ್ನು ಕಂಡಿದೆ. ಅದರ ಹಿನ್ನೆಲೆಯಲ್ಲಿ ಸಂಘದ ಧ್ಯೇಯೋದ್ದೇಶದಲ್ಲಿ ಏನಾದರೂ ಬದಲಾವಣೆ ಆಗಿದೆಯಾ?

ನಾಗಮಣಿ : ಸಂಘ ಶುರುವಾದ ಹೊಸದರಲ್ಲಿ ಒಂದೈದಾರು ವರ್ಷ ಸಂಘಾನ ಬಲಪಡಿಸೋದರ ಕಡೆ ಜಾಸ್ತಿ ಗಮನ ಹರಿಸ್ತಿದ್ವಿ. ಅಂದ್ರೆ ಬಡಾವಣೆಗಳಲ್ಲಿ ಹೋಗಿ ಕಾರ್ಯಕ್ರಮ ಮಾಡೋದು, ಸಂಘಾನ ಪರಿಚಯಿಸೋದು, ಸದಸ್ಯರನ್ನು ಮಾಡಿಸೋದು ಈ ಥರ... ಆನಂತರ ವಿಚಾರ ಸಂಕೀರಣಗಳನ್ನ, ವರ್ಕ್‌ಶಾಪ್‌ಗಳನ್ನು ಮಾಡೊಕ್ಕೆ ಶುರುಮಾಡಿದ್ವಿ. ಅದ್ರಲ್ಲೇ ಮುಂದೆ ಸ್ತ್ರೀವಾದದ ಬಗ್ಗೆ ಸಾಕಷ್ಟು ಕಾರ್ಯಕ್ರಮ ಮಾಡಿದ್ವಿ... ಅದು ಸಾಕು ಅನ್ನೋವಷ್ಟಾಯಿತು. ಈವಾಗ ಅದರ ಬಗ್ಗೆ ಒತ್ತಡ ಕಡ್ಮೆ ಆಗಿದೆ. ಈಗ ಸಾಹಿತ್ಯದ ಗುಣಮಟ್ಟ ಹೆಚ್ಚಿಸಬೇಕು. ಲೇಖಕಿಯರಲ್ಲಿ ಜಾಗ್ರುತಿ ಮೂಡಬೇಕು. social responsibilities ಹೆಚ್ಚಬೇಕು... ಈಗ ನಮ್ಮ social responsibilities ಏನು as a writer ಅಂದಾಗ ... ಈಗ ನೋಡಿ 50 years of Independence ಅಂದಾಗ- ನಂಗೆ ಆ ಬಗ್ಗೆ ಬಹಳ commitment ಇದೆ. actually ಅದ್ಕೆ ಅಂತ programme ಒಂದು ಕೂಡ ಮಾಡಿದ್ವಿ. 'ಸುವರ್ಣ ಸ್ವಾತಂತ್ರ್ಯೋತ್ಸವ ಕಾಳಜಿ' ಅಂತ ನಮ್ಮಲ್ಲಿ ಸುಮಾರು ೭೦೦ ಜನಕ್ಕೂ ಹೆಚ್ಚು ಸದಸ್ಯರಿದ್ದಾರೆ. ಎಲ್ಲರನ್ನೂ ಸೇರ್ಸಿ ಒಂದೇ ಕಡೆ ಪ್ರೋಗ್ರಾಂ ಮಾಡೋಕ್ಕಾಗಲ್ಲ, ಆದ್ರೆ ಎಲ್ಲಾರೂ ಇಂಥ ಸಂದರ್ಭದಲ್ಲಿ ನಮ್ಮ ನಮ್ಮ ಜವಾಬ್ದಾರಿ ಅರಿತು ಸ್ವಲ್ಪಾನಾದ್ರೂ, ನಮ್ಮ ಕೈಲಾದಷ್ಟು ಏನಾದ್ರೂ ಮಾಡಬೇಕು, So ಅದಕ್ಕಾಗಿ ಎಲ್ಲಾರೂ ನೀವೇಲ್ಲೆಲ್ಲಿದ್ದೀರೋ ಅಲ್ಲಲ್ಲೇ ನಿಮ್ಮ ಸುತ್ತ ಇರೋ ಯಾವದಾದ್ರೂ ಅತೀ ಕನಿಷ್ಠ ಸೌಲಭ್ಯ ಇರೋ ಸ್ಕೂಲನ್ನ ಆರಿಸ್ಕೊಂಡು, ಅಲ್ಲಿ ಹೋಗಿ ನಾಲ್ಕಾರು ಗಂಟೆಗಳಾದರೂ ಕೆಲ್ಸ ಮಾಡಬೇಕು. ಮಕ್ಕಳಿಗೆ ಸ್ವಾತಂತ್ರ್ಯ ನಾಯಕರ ಬಗ್ಗೆ ಹೇಳಿ, ನಮ್ಮ values ಬಗ್ಗೆ ಹೇಳಿ- ಯಾಕೆಂದರೆ ಈಗಿನ ಮಕ್ಕಳಿಗೆ ನಾವು ಹೊಡೆದಾಡ್ದೆ ಸ್ವಾತಂತ್ರ್ಯ ಗಳಿಸಿದ್ವಿ ಅಂದ್ರೆ ನಂಬೋಕ್ಕೆ ಸಾಧ್ಯ ಇಲ್ಲ. ಅದೂ ಆಗ್ದೆ ಇದ್ರೆ ರಸಪ್ರಶ್ನೆ ಕಾರ್ಯಕ್ರಮ ಮಾಡಿ, ನಿಮಗೆ ಸಾಧ್ಯವಾದ ಒಂದು ರಬ್ಬರನ್ನೋ, ಪೆನ್ಸಿಲ್‌ನ್ನೋ ಕೊಡಿ. ಅದೂ ಇಲ್ಲದಿದ್ರೆ ಒಂದು ಸ್ವಾತಂತ್ರ್ಯ ಗೀತೆ ಹೇಳಿಕೊಟ್ಟು ಹುಮ್ಮಸ್ಸಿನಿಂದ ಹಾಡುವ ಹಾಗೆ ಮಾಡಿ. See, ಈ ಥರಾ ಮಾಡೋದ್ರಿಂದ ಲೇಖಕಿಯರಿಗೂ ಖುಶಿಯಾಯ್ತು. ಇದ್ದ ಕಡೆನೇ ನಾವು ಏನಾದರೂ

ಮಾಡಬಹುದು ಅಂತ. ಕೆಲವರಂತೂ ಬೇರೆಯವರನ್ನ ಕರೆಸಿ ಅವರಿಂದ ಮಾತಾಡ್ಸಿ ಬಹಳ ಒಳ್ಳೊಳ್ಳೆ ಕಾರ್ಯಕ್ರಮಾನೇ ಮಾಡಿದಾರೆ.

ಪ್ರಶ್ನೆ : Social Work ಆಗಿ ಅಂದ್ರೆ ಇದರಲ್ಲಿ women ದೂ ಅಂತಲ್ಲ men ದೂ ಅಂತಲ್ಲ, ಒಬ್ಬ ದೇಶದ ಪ್ರಜೆಯಾಗಿ ಮಾಡಬಹುದಾದ ಕೆಲ್ಸ ಅನ್ನೋಥರನಾ?

ನಾಗಮಣಿ : ಹೌದು, ಈಗ ಇದು women ಅಂತ ಅಲ್ಲದಿದ್ರೂ ಈ ಕೆಲ್ಸ ಹೀಗೆ ಮುಂದುವರೆದ್ರೆ ನೋಡಿ, ಕುಡಿತ - ಭ್ರಷ್ಟಾಚಾರ ಈ ಥರದ ಕಾರ್ಯಕ್ರಮವಾಗಿ ಕೂಡ ಇದನ್ನು ಮುಂದುವರೆಸ್ಕೊಬಹುದು. ಆಗ ಈ ವಿಷಯಗಳೆಲ್ಲ ಮಹಿಳೆಯರಿಗೆ connect ಆಗ್ತಾನೆ ಹೋಗುತ್ವೆ. ಅಲ್ಲದೆ ಎಲ್ಲೋ ಒಂದು ಕಡೆ ನಿಮ್ಮ area ದಲ್ಲಿ ನೀವು recognise ಆಗ್ತೀರಾ mingle ಆಗ್ತೀರಾ... ಇನ್ನೊಂದು ನಾನು ಹೇಳಬೇಕಾಗಿರೋದು ಮಹಿಳೆಯರು ಬರೀ ಬರದ್ರೆ ಮಾತ್ರ ಸಾಲ್ದು, ಅವರು ಜಾಗ್ರುತರಾಗುವುದರೊಂದಿಗೆ ಬೇರೆಯವರನ್ನೂ ಜಾಗ್ರುತರಾಗಿಸಬೇಕು. ಹಾಗಾಗಿ ನಮ್ಮ ಶಿಬಿರಗಳಲ್ಲಿ ಅಂಥಾ ಕಾರ್ಯಕ್ರಮಾನೂ ಇಟ್ಟುಕೊಳ್ತಾ ಇದೀವಿ.

ಪ್ರಶ್ನೆ : ಮಹಿಳಾ ಸಾಹಿತ್ಯ ಕುರಿತಂತೆ ಬರುವ ವಿಮರ್ಶೆಗಳು ಏನನಿಸುತ್ತೆ?

ನಾಗವೇಣಿ : ಮಹಿಳೆಯರ Literature ನೆಲ್ಲಾ ಒಂದು ಕಡೆ ತರಬೇಕು. ದಾಖಲಾಗಿಸಬೇಕು. ಎಲ್ಲಾ ಸಾಹಿತ್ಯದಲ್ಲೂ ಜಳ್ಳು ಇರುತ್ತೆ ನಿಜ. ಅದನ್ನ ಬೇಕಾದ್ರೆ ಬಿಡಲಿ. ಆದ್ರೆ general ಆಗಿ ಬರಿಯುವಾಗ ಏನ್ ಮಾಡ್ತಾರೆ ಕೆಲವು ಸತ್ವಶಾಲಿಗಳನ್ನ ಕೂಡ ಪಕ್ಕಕ್ಕೆ ಸರಿಸಿಬಿಡ್ತಾರೆ. ಎಲ್ಲಾರ್ರೂ ಇರಬೇಕು ಅಂತಾ ನಾನೇನು ಹೇಳಲ್ಲ. ಆದ್ರೆ ಅವರು ಇಲ್ವೆ ಇಲ್ಲ ಅಂತ ಹೇಳೋ ಅಷ್ಟು ಜಳ್ಳಲ್ಲ ಮಹಿಳಾ ಸಾಹಿತ್ಯ. ಇನ್ನೊಂದೇನ್ಮಾಡ್ತಾರೆ ವಿಮರ್ಶಕರು ಅಂದ್ರೆ- ಈಗೀಗ ಪರವಾಗಿಲ್ಲ. ಓದೋದೇ ಇಲ್ಲ. ಹಾಗೇ ಸಾರಾಸಗಟಾಗಿ ಮಾತಾಡಿ ಬಿಡ್ತಾರೆ. ನಾನು ಗಮನಿಸಿದ ಹಾಗೇ ತುಂಬಾ ಜನ ವಿಮರ್ಶಕರು ಮಾತಾಡೋವಾಗ ಒಂಥರಾ, ವಿಮರ್ಶೆ ಬರೀವಾಗ ಒಂಥರಾ ಮಾಡ್ತಾರೆ.

ಪ್ರಶ್ನೆ : ಇದಕ್ಕೆ ಒಂದೆರಡು ಉದಾಹರಣೆ ಹೇಳಿ?

ನಾಗವೇಣಿ : ಇಲ್ಲ, I cannot pin point.

ಪ್ರಶ್ನೆ : ಅಂದ್ರೆ, ಇದೊಂಥರಾ ಜಾಣ್ಮೆಯಿಂದ ಮಾಡೋ ಕೆಲ್ಸ, ಆದ್ರಿಂದ ಹೇಳಿದ್ರು ಆಗತ್ಯ ಬಿದ್ರೆ ಸಾಬೀತು ಮಾಡೋದು ಕಷ್ಟ ಆಗುತ್ತೆ ಅಂತ್ಲ.

ನಾಗವೇಣಿ : ಹೌದು. ಹಾಗೆ ಮಾಡೋದನ್ನ ನಾವು ಗಮನಿಸಿರ್ತೀವಿ. ಆದ್ರೆ ನಾನು ಹಾಗೆ ಹೇಳಿದ್ರಲ್ಲಿ ನೀವ್ಯಾಕೆ ಹಾಂಗದುಕೊಂಡ್ರಿ ಅಂದ್ರೆ ತೋರಿಸೋದು ಕಷ್ಟ ಆಗುತ್ತೆ.

ಪ್ರಶ್ನೆ : ಮಹಿಳಾ ಸಾಹಿತ್ಯದ ಬಗ್ಗೆ ವಿಮರ್ಶಕರ ಕಡೆಯಿಂದ-ಅದು ಒಳ್ಳೇದು ಅಂತಾನೋ ಕೆಟ್ಟದ್ದು ಅಂತಾನೋ ಹೆಚ್ಚು recognition ಇಲ್ಲಾ ಅನ್ನೋದು ಬಿಟ್ರೆ

ಉದ್ಯಮದ ದೃಷ್ಟಿಯಿಂದ ಸಾಕಷ್ಟು ಪ್ರಗತಿ ಇದೆ. ಎಷ್ಟೋ ಪುಸ್ತಕಗಳು ಬಿಡುಗಡೆ ಆಗ್ತಿವೆ, ಮಾರಾಟಾನೂ ಆಗ್ತಿವೆ. ಎಷ್ಟೋ ಪ್ರಕಾಶನ ಸಂಸ್ಥೆಗಳು ಅವರಿಗಾಗಿನೇ ಪ್ರಕಾಶನಗಳನ್ನು ನಡೆಸ್ತಿವೆ ಅನ್ನೋದು ಎಲ್ಲರಿಗೂ ಗೊತ್ತು. ಈ ಹಿನ್ನೆಲೆಯಲ್ಲಿ ಸಂಘದ ಗಮನ ಯಾವ ಕಡೆಗೆ ಇದೆ.

ನಾಗಮಣಿ : ನೋಡಿ, ನಾವು ಯಾವ ಲೇಖಕಿಗೂ ಬರೀಬೇಡಿ ಅಂತ ಹೇಳೋಕಾಗಲ್ಲ. ಹೀಗೇ ಬರೀರಿ ಅಂತಾನೂ ಒತ್ತಾಯಿಸೋಕೆ ಆಗೋಲ್ಲ. ಆದ್ರೆ ಒಂದು ನಾವು ಹೇಳಬಹುದು- ಎಷ್ಟೋ ಜನ publishers they take advantage- ಅದರ ಬಗ್ಗೆ ಹುಷಾರಾಗಿರೋಕೆ ಎಚ್ಚರಿಸಬಹುದು. ಆ ಹುಷಾರಾಗಿರಿ ಅಂತ ಹೇಳೋವಾಗಲೂ ತುಂಬಾ ಕಷ್ಟ ಇದೆ.

ಪ್ರಶ್ನೆ : ಈ ವಿಷ್ಯದಲ್ಲಿ ನಮ್ಮ ಲೇಖಕಿಯರು ಅಷ್ಟೊಂದು Innocents ಅನ್ನುತ್ತಾ. ಅಂದ್ರೆ ಉದ್ಯಮದ exploitation ನನ್ನು ಅರಿತಿರಲ್ಲ ಅಂತೀರ? ಅದರ ಒಂದು ಭಾಗವಾಗಿ ಇವರೂ ಇರ್ತಾರೆ ಅನ್ನೋಲ್ವ?

ನಾಗಮಣಿ : ಈ ತರ್ಹದವರೂ ಇದಾರೆ. ಆದ್ರೆ ಅವರು ಕೇವಲ handfull ಮಾತ್ರ. ಉಳಿದವರಲ್ಲಿ ಬಹುಪಾಲು ನಾನು ಬರ್ದೆ... ನಂದು ಪುಸ್ತಕ ಆಯ್ತು ಅನ್ನೋದೆ. ಒಂದು ೨೫% ಮಾತ್ರ ಉದ್ಯಮ ಮತ್ತು ಗುಣ ಮಟ್ಟ ಎರಡನ್ನೂ ಗಮನದಲ್ಲಿಟ್ಟುಕೊಂಡಿರ್ತಾರೆ.

ಪ್ರಶ್ನೆ : ಉಳಿದ ಸಂಸ್ಥೆಗಳ ಜೊತೆ ಸಂಘದ ಒಡನಾಟ ಹೇಗಿದೆ? ಧಾರವಾಡದಲ್ಲೊಂದು ಲೇಖಕಿಯರ ಸಂಘ ಇದ್ಯಲ್ಲ, ಅದು ಇದರ Sister organization?

ನಾಗಮಣಿ : sister ಅಂತಲ್ಲ friendly. ಇನ್ನು ಮಂಗಳೂರಿಂದೂ ಅಷ್ಟೆ. ನಮಗೇನು ಅಭಿಪ್ರಾಯ ಭೇದ ಇಲ್ಲ. ಸ್ಪರ್ಧೆನೂ ಇಲ್ಲ.

ಪ್ರಶ್ನೆ : ಅದು ಆರಂಭ ಆಗ್ಬೇಕಾದ್ರೆ ಅವರಿಗೇನೂ ಭಿನ್ನಾಭಿಪ್ರಾಯ ಇಲ್ವಲ್ಲ? ಅಂದ್ರೆ ಪ್ರಾತಿನಿಧ್ಯದ ಕಾರಣಕ್ಕೇನಾದ್ರೂ ಅವು ಬೇರೆ ಮಾಡ್ಕೊಂಡ್ರಾ?

ನಾಗಮಣಿ : ಇಲ್ಲ ಅಂಥದ್ದೇನು ಇಲ್ಲ. ಅವು ಈ ಥರದ್ದೊಂದು ನಮ್ಮಲ್ಲೂ ಮಾಡ್ಬೇಕು ಅಂತಾನೇ ಮಾಡಿದ್ರು ಅನ್ನೋ ಮಾತು ಶಾಂತಾದೇವಿ ಮಾಳವಾಡರಿಂದಲೇ ಬಂದಿದೆ. ಅವ್ರೆಲ್ಲ ನಮ್ಮ ಸದಸ್ಯರೇ. ಅದು ಭಿನ್ನಾಭಿಪ್ರಾಯದಲ್ಲಿ ಹುಟ್ಟಿದ್ದಲ್ಲ. ಉತ್ಸಾಹದಿಂದ ಆದದ್ದು. ಇದು ಒಂಥರಾ ಸ್ಫೂರ್ತಿ ಕೊಡ್ತು ಅಂತ ಹೇಳ್ಬಹುದು... ಅವರ ಕಾರ್ಯಕ್ರಮಕ್ಕೆ ನಾವು ಹೋಗ್ತೀವೆ. ಇಲ್ಲಿಗೆ ಅವರು ಬರ್ತಾರೆ. ಮಂಗಳೂರು ಸಮ್ಮೇಳನಾನ ಕರಾವಳಿ ಲೇಖಕಿ- ವಾಚಕಿಯರ ಸಂಘದ ಸಹಕಾರದಿಂದಲೇ ನಡೆಸಿದ್ವಿ. ಈಗ ನೋಡಿ ಮುಂದಿನ ಸಮ್ಮೇಳನ ಗುಲ್ಬರ್ಗಾ ಕಡೆ ಆಗಲಿ ಅಂತ ಹೇಳ್ತಿದಾರೆ ಸಹ.

ಪ್ರಶ್ನೆ : ಬಹಳ ವಿವರವಾಗೇ ತೆರೆದ ಮನಸ್ಸಿನಿಂದಾನೇ ಸಂಘದ ಬಗ್ಗೆ ಹೇಳಿದೀರಾ.

ತುಂಬಾ ಥ್ಯಾಂಕ್ಸ್ ಮೇಡಂ. ಆದ್ರೂ ಕೊನೆದಾದ ಪ್ರಶ್ನೆ ಇದು. ಸಂಘದ ಬಗ್ಗೆ ಇನ್ನೇನಾದ್ರೂ ಹೇಳೋದಿದ್ರ ಹೇಳಿ. ಸಂಘ ಆರಂಭ ಆಗಿ ೨೦ ವರ್ಷ ಆಗಿದೆ. ಇದೇನು ಕಡಿಮೆ ಕಾಲ ಅಲ್ಲ. ನಿಮಗೆ ನಿಜವಾಗಲೂ ಹೇಳ್ಕೋಬೇಕು ಅಂತ ಅನ್ನಿದ್ದು ಏನಾದ್ರೂ ಇದ್ರೆ ಹೇಳಿ.

ನಾಗಮಣಿ : ಮಹಿಳೆಯರ ಪರವಾಗಿ ದನಿ ಎತ್ತೋಕೆ ಒಂದು ವೇದಿಕೆಯಾಗಿ ಇದು ಉದ್ದಕ್ಕೂ ಕೆಲಸ ಮಾಡಿಕೊಂಡು ಬಂದಿದೆ. ಅದರ ಬಗ್ಗೆ ಒಂದು ಉದಾಹರಣೆ ಕೊಡ್ತೀನಿ. ಈಗ ನೋಡಿ ಸೌಂದರ್ಯ ಸ್ಪರ್ಧೆ ಶುರುವಾದಾಗ ಕೂಡ ಸಂಘ ಹಲವಾರು ಕಾರ್ಯಕ್ರಮ ಹಾಕ್ಕೊಳ್ತು. ಆಗ ನಮ್ಮ ಸಮ್ಮೇಳನ ಮಂಗಳೂರಿನಲ್ಲಿ ನಡೀತು. ಅಲ್ಲಿ ಎರಡು ಅಭಿಪ್ರಾಯದ ಕಡೆ ಕೂಡ ನಮ್ಮವರು ಇದ್ರು. ಕಮಲಾ ಹಂಪಾನಾ ಅವರು ಅದರಲ್ಲೇನು ತಪ್ಪು ಅಂತ ಬಲವಾಗಿ ವಾದಿಸಿದ್ರು ಸಹ. ಆದ್ರೆ ಬಹು ಜನರ ಅಭಿಪ್ರಾಯ ಇದು ನಡೀಕೂಡ್ದು ಅನ್ನೋದರ ಕಡೆಗೆ ಇತ್ತು. ಹಾಗಾಗಿ ನಾವು ಅದರ ವಿರುದ್ಧವಾಗಿ ನಮ್ಮ ನಿಲುವನ್ನು ಮಂಡಿಸಿದ್ವಿ. ಹೀಗೆ ಸಂಘದಲ್ಲಿ ಎಲ್ಲರ ಅಭಿಪ್ರಾಯಕ್ಕೂ ಮುಕ್ತವಾದ ವಾತಾವರಣ ಇದೆ. ಆದ್ರೆ ನಿರ್ಣಯಗಳೆಲ್ಲ Democratic ಆಗೇ ನಡಕೊಂಡು ಬಂದಿದೆ. ಆಯಾ ಹೊತ್ತಿನ ಸವಾಲುಗಳಿಗೆ ಪ್ರತಿಕ್ರಿಯಿಸುತ್ತಲೇ ಸಂಘವನ್ನು ಬೆಳೆಸ್ತಾ ಇದ್ದೀವಿ. ಆದ್ರಿಂದ್ಲೆ ನಮ್ಮಲ್ಲಿ ಎಲ್ಲ ಸ್ಥರದ ಲೇಖಕಿಯರಿಗೂ, ಸಾಹಿತ್ಯಾಸಕ್ತರಿಗೂ ಅವಕಾಶ ಇದೆ. ಆ ಎಲ್ಲ ಲೇಖಕಿಯರ ಅಭಿವ್ಯಕ್ತಿಗಳನ್ನ ಪ್ರೋತ್ಸಾಹಿಸೋದೇ ನಮ್ಮ ಸಂಘದ ಪ್ರಧಾನ ಗುರಿ.

**ಹೇಮಲತಾ ಮಹಿಷಿ ಅವರೊಂದಿಗೆ**

ಪ್ರಶ್ನೆ : ನಮಸ್ಕಾರ ಮೇಡಂ. ನಾನೀಗ ಕರ್ನಾಟಕ ಲೇಖಕಿಯರ ಸಂಘ ಅನ್ನೋದನ್ನೆ ಇನ್ನೊಂದು ಥರ ಅರ್ಥೈಸಿಕೊಳ್ಳೋಕ್ಕೆ ಪ್ರಯತ್ನಿಸ್ತಿದೀನಿ. ಕರ್ನಾಟಕದಲ್ಲಿ ಕನ್ನಡಿಗರಷ್ಟೇ ಅಲ್ಲದೇ ಈ ನೆಲದವರೇ ಆದ ಬೇರೆ ಭಾಷಾ ಸಂಸ್ಕೃತಿಯ ಜನ ಇದಾರೆ. ಅದಲ್ಲದೇ ನೆರೆಹೊರೆಯ ಭಾಷೆಯ ಲೇಖಕಿಯರು ಕೆಲವರಾದ್ರೂ ಕರ್ನಾಟಕದಲ್ಲಿ ವಾಸಿಸ್ತಿದಾರೆ. ಹಾಗಾಗಿ ಕರ್ನಾಟಕ ಲೇಖಕಿಯರ ಸಂಘ ಅನ್ನೋದನ್ನ ಇವರನ್ನೆಲ್ಲಾ ಒಳಗೊಳ್ಳೊ ಹಾಗೆ ರೂಪಿಸಿಕೊಳ್ಳಬಹುದಲ್ವಾ. ಈ ಬಗ್ಗೆ ನಿಮ್ಮಲ್ಲೇನಾದ್ರೂ ಕಾರ್ಯಕ್ರಮ ಇದೇಯಾ?

ಹೇಮಲತಾ : ಬಹುಶಃ ಮುಂದೆ ಇದ್ಕೆ ಅವಕಾಶ ಇದೆ. ನಾವೇನೂ ಇದನ್ನ ಕನ್ನಡ ಬರಿಯುವವರಿಗೆ ಅಂತ ಮಾಡಿದ್ದಲ್ಲ. ಆದ್ರೆ ಇಲ್ಲೇನಾಗಿದೆ ಎಂದರೆ ಕನ್ನಡದಲ್ಲಿ ಬರಿಯೋ ಲೇಖಕಿಯರೆ ಬಹು ಸಂಖ್ಯೆಯಲ್ಲಿ ಇರೋದ್ರಿಂದ, ಅವ್ರೇ ಹೆಚ್ಚು ಉತ್ಸಾಹದಿಂದ ಭಾಗವಹಿಸ್ತಿದ್ದಾರೆ. ಈಗ ಕನ್ನಡದಲ್ಲಿ ಬರೆಯೋರಲ್ಲೂ ಎಷ್ಟೋ ಜನರ ಮನೆ ಮಾತು ಬೇರೆ ಬೇರೆನೆ ಇದೆ. ಇವ್ರುಗಳಲ್ಲಿ ಕೆಲವರು ಅವ್ರ ಭಾಷೇನಲ್ಲೂ ಬರಿತಿದಾರೆ. ಮುಖ್ಯವಾಗಿ translation ನಲ್ಲಿ ಕೆಲ್ಸ ಮಾಡಿದ್ದಾರೆ..... ನೀವು ಹೇಳಿದ ಹಾಗೆ ಇನ್ನು ಮುಂದೆ ಬಹುಶಃ ಇದನ್ನು ಬಹುಭಾಷಾ ನೆಲೆಗೆ ವಿಸ್ತರಿಸಿಕೊಳ್ಳಬಹುದು ಅನ್ಸುತ್ತೆ.

ಪ್ರಶ್ನೆ : ಈ ಪ್ರಶ್ನೆಯನ್ನು ನಾನ್ಯಾಕೆ ಕೇಳ್ತಿದೀನಿ ಅಂದ್ರೆ ಮಹಿಳಾ ಕಾಳಜಿ, ಸ್ತ್ರೀವಾದ ಅನ್ನೋದು ಭಾಷಾಭಿಮಾನದಂತಹ ವಿಷಯಗಳಿಗೆ ಯಾವ ಥರದಲ್ಲಿ ಪ್ರತಿಕ್ರಿಯಿಸಬೇಕು ಅನ್ನೋ ಕುತೂಹಲದಿಂದ ? ಅದಲ್ಲದೆ ಸಂಘ ಈಗಾಗಲೇ ಲೇಖಕರನ್ನು ಬಿಟ್ಟುಕೊಟ್ಟಿದೆ. ಭಾಷೆ ಬಗ್ಗೆನೂ ತುಂಬಾ close ಆಗೋದ್ರೆ ಕನ್ನಡ ಲೇಖಕಿಯರ ಬೆಳವಣಿಗೇಗೆ ತೊಂದರೆ ಆಗುತ್ತೆ ಅಲ್ವ?

ಹೇಮಲತಾ : ನಾವಿಲ್ಲಿ ಉದ್ದೇಶಪೂರ್ವಕವಾಗಿ ಕನ್ನಡಕ್ಕೆ ಸೀಮಿತಗೊಳಿಸಿಕೊಂಡಿದೀವಿ ಅಂತಾಗೋಲ್ಲ. ಒಂದ್ಕಡೆ ನಾವು ನಮ್ಮ limitations, ನಮ್ಮ ಸಾಮರ್ಥ್ಯ ಎಷ್ಟಿದೆ ಅನ್ನೋದನ್ನು ನೋಡ್ಕೊಬೇಕಾಗುತ್ತೆ. ಮತ್ತೆ practial ಆಗಿ ಕೂಡ ಕನ್ನಡ ಲೇಖಕಿಯರೇ ಜಾಸ್ತಿ ಇರೋದು. ಅದು ನಮ್ಮ ರಾಜ್ಯದ್ದಾಗಿರೋದ್ರಿಂದ ಸಹಜವಾಗಿವೇ ಕನ್ನಡದ ಕಡೆ ಹೆಚ್ಚು ವಾಲಿದೆ. ಸಂಘ ಬಹುಶಃ ಇನ್ನು ಬೆಳವಣಿಗೆ ಸಾಧಿಸಿದಾಗ ಈ ತರದ್ದನ್ನೆಲ್ಲ ಒಳಗೊಂಡು ಕೆಲ್ಸ ಮಾಡಬಹುದು ಅನ್ನುತ್ತೆ... ನಾವು ಸಾಧ್ಯವಾದಷ್ಟು ಬೇರೆ ಭಾಷೆಯವರನ್ನು ಒಳಗೊಳ್ಳೋಕೆ ನಮ್ಮ ಮಿತಿಯೊಳಗೆ ಪ್ರಯತ್ನಿಸ್ತಿದೀವಿ. ಬೇರೇ ಭಾಷೆ ಲೇಖಕಿಯರನ್ನು ಕರೆಸೋದು, ಸೆಮಿನಾರ್ಸ್ ಮಾಡೋವಾಗ, comparative studies ಗೆ ಅವಕಾಶ ಕೊಡೋದು ಇತ್ಯಾದಿ...

ಪ್ರಶ್ನೆ : ಕರ್ನಾಟಕದಲ್ಲಿ ಚಳುವಳಿಗಾರರಿಗೂ- ಚಿಂತಕಿಯರಿಗೂ ನಡುವೆ gap ಇದೆ ಅನ್ನುತ್ತೆ. ಇದನ್ನು ತುಂಬೋ ಹಾಗೆ ಸಂಘದಲ್ಲಿ ಏನಾದ್ರೂ ವಿಶೇಷ ಕಾರ್ಯಕ್ರಮ ಇದ್ಯಾ?

ಹೇಮಲತಾ : ಈ ಬಗ್ಗೆ ಸಂಘ ಯಾವಾಗಲೂ ಪ್ರಯತ್ನ ಮಾಡ್‌ತಾನೇ ಇದೆ. ನಾನು ಲೇಖಕಿಯರ ಸಂಘದ ಅಧ್ಯಕ್ಷಳಾಗಿ ೮ ವರ್ಷ ಇದ್ದೆ. ಆಗ ಮುಖ್ಯವಾಗಿ ಈ ಪ್ರಶ್ನೆ ಬಗ್ಗೇನೇ ನಾವು ಕೆಲ್ಸ ಮಾಡಿದ್ವಿ. ಅವಾಗಿದ್ದ ಆಫೀಸ್ ಬೇರರ್ಸ್ ಎಲ್ಲಾ ಎರಡೂ ಕಡೆ ಕೆಲ್ಸ ಮಾಡೋರೆ ಆಗಿದ್ರು. ಹಾಗಾಗಿ ಈ ಇಬ್ಬರ ಮಧ್ಯೆ gap ನ್ನು bridge ಮಾಡೋಕೆ ಮನಸ್ಸೂ ಇತ್ತು. ಕೆಲ್ಸಾನು ಮಾಡಿದ್ವಿ. ನಮ್ಮಲ್ಲಿನ ಗಾಯತ್ರಿ, ನೇಮಿಚಂದ್ರ, ಶಾಂತ ...., ಸುಮಿತ್ರಾ ಬಾಯಿ ಎಲ್ಲರೂ ಎರಡೂ ಕಡೆ ಕೆಲ್ಸ ಮಾಡೋರೆ... ನಮ್ಮ ರಾಜ್ಯದ ಎಲ್ಲ ಭಾಗಗಳ ಲೇಖಕಿಯರಿಗೆ ಸೋದರಿ ಭಾವ ಬರಬೇಕು. ಅದು ಬಂದಿದ್ದರೆ ಮುಂದಿನೆಲ್ಲಾ ಚಟುವಟಿಕೆಗಳು ತಾವಾಗೆ ಜರುಗುತ್ತವೆ ಅಂತ ಅನ್ನೋ ಕಾರಣಕ್ಕಾಗೇನೇ ಹಲವಾರು ಕಾರ್ಯಕ್ರಮ ಮಾಡಿದ್ವಿ. Seminars ಮಾಡಿದ್ವಿ. Conference ಮಾಡೋ ಮೂಲಕ ಇಡೀ ರಾಜ್ಯದ ಲೇಖಕಿಯರನ್ನು ಒಂದು ಕಡೆ ತರೋಕೆ ಪ್ರಯತ್ನಿಸಿದ್ವಿ. ಇದರಿಂದ ನಮ್ಮ ಲೇಖಕಿಯರಿಗೆ ಪರಸ್ಪರ ತುಂಬಾ ಚೆನ್ನಾಗಿ ಪರಿಚಯ ಆಯ್ತು. ಅಂದ್ರೆ ಮೊದಲು ದೂರದಲ್ಲಿದ್ದಾಗ ಪರಸ್ಪರರ ಬಗ್ಗೆ ಏನೋ ಒಂದು Prejudice- ಅವರ್ಹಾಗೆ, ಇವರ್ಹಿಗೆ ಅನ್ನೋದು- ಅಂಥವೆಲ್ಲ ಹತ್ತಿರಕ್ಕೆ ಬಂದಾಗ ದೂರ ಆಗ್ತವೆ. ಯಾಕೇಂದ್ರೆ ಹತ್ತಿರಕ್ಕೆ ಬಂದಾಗ ಒಬ್ಬ ವ್ಯಕ್ತೀನ ನಾವು weakness ಜೊತೆನೇ ಸ್ವೀಕರಿಸಬೇಕಾಗುತ್ತೆ.

ಪ್ರಶ್ನೆ : ಸಂಘದ Publications ಬಗ್ಗೆ ಒಂದು ಪ್ರಶ್ನೆ. ಅದು ಮುಖ್ಯವಾಗಿ ಕತೆ, ಕವನ ಇಂತಹ ಸಾಹಿತ್ಯದ ಬಗ್ಗೇನೆ ಹೆಚ್ಚಿದೆ ಅಲ್ವ?

ಹೇಮಲತಾ : ಬರೀ ಕತೆ ಕವನ ಮಾತ್ರ ಬಂದಿಲ್ಲ. ಅಲ್ಲೂನೂ ಕೂಡ ಪ್ರಾತಿನಿಧಿಕ ಕತೆ ಇತ್ಯಾದಿ ಅನ್ನೋದರ ಮೂಲಕ ಕತೆ ಬರೆಯೋದಷ್ಟೇ ಅಲ್ಲ, ಹಾಗೆ ಬರೆಯುವಾಗಲೂ ಅವರು ಎಷ್ಟು relevant ಆಗಿ ಬರೀತಿದಾರೆ, ಎಷ್ಟು ಸ್ಪಂದಿಸ್ತಿದಾರೆ ಅನ್ನೋದನ್ನ ಗುರುತಿಸುವ ಹಿನ್ನಲೆಯಲ್ಲೇ ಅದನ್ನ ತರ್‍ತಿದೀವಿ. ಅದರಲ್ಲೂ ನಮ್ಮ ಬಹು ಮುಖ್ಯವಾದ ಕೆಲ್ಸ ಅಂದರೆ ಮರೆತು ಹೋದ ಲೇಖಕಿಯರನ್ನ ಮತ್ತೆ ಪರಿಚಯಿಸುವುದು. ನೋಡಿ ಎಷ್ಟೊಂದು ಜನ ಲೇಖಕಿಯರು ಚನ್ನಾಗೇ ಬರೀತಿದ್ರು. ಆದ್ರೆ ಯಾವ ಸಾಹಿತ್ಯ ಚರಿತ್ರೆನೂ ಅವರನ್ನ ಗಮನಿಸ್ತಾನೇ ಇರಲಿಲ್ಲ. ದಾಖಲಿಸ್ತಾನು ಇರಲಿಲ್ಲ. ಈ ಕಾರಣಕ್ಕಾಗಿ ನಮ್ಮ ಹಿಂದಿನ ಲೇಖಕಿಯರನ್ನು - ಅಂದ್ರೆ ನಮ್ಮ ಬೇರುಗಳನ್ನ ಹುಡುಕ್ಕೋಬೇಕು-ಅವರ ಕೃತಿಗಳನ್ನ ಪರಿಚಯ ಮಾಡೊ ಒಂದು project ಹಾಕ್ಕೊಂಡ್ವಿ.

ಪ್ರಶ್ನೆ : ಅದನ್ನೇ ನಾನು ಹೇಳ್ತಿರೋದು. totally ಎಲ್ಲೋ ಒಂದು ಕಡೆ literature ಅಂದ್ರೆ ಸೃಜನಶೀಲ ಸಾಹಿತ್ಯ ಅಂತಾರಲ್ಲಿ ಅದರ ಸುತ್ತಾನೇ publications ಸುತ್ತುತ್ತ ಇದೆ ಅಂತ...

ಹೇಮಲತಾ : ಹೌದು ಲೇಖಕಿಯರ ಸಂಘ ಅಂದಾಗ ...

ಪ್ರಶ್ನೆ : ಅಲ್ಲ, ಲೇಖಕಿಯರು ಅನ್ನೋದನ್ನ- ಈಗ ನೀವೆ ಕಾನೂನಿನ ಬಗ್ಗೆ ಬಹಳ ಬರ್‍ದಿದ್ದೀರಿ. ಹಾಗೆ ಕೆಲವರು ವೈದ್ಯಕೀಯದ ಬಗ್ಗೆ, ಈ ತರದ ಲಿಟರೇಚರನ ಗಮನಿಸ್ತಿಲ್ಲ ಅಂತ -

ಹೇಮಲತಾ : ಓಹೋ ಹಾಗಾ ...ಹೌದು ನಾವು ಅದನ್ನೇ ಜಾಸ್ತಿ ತಂದಿದೀವಿ. ನಮ್ಮ ಮುಖ್ಯ ಉದ್ದೇಶ ಹಿಂದಿನ ಲೇಖಕಿಯರನ್ನ ಬೆಳಕಿಗೆ ತರೋದು. ಈಗ ಎಚ್. ವಿ. ಸಾವಿತ್ರಮ್ಮನ್ನ ನೋಡಿ. ಎಷ್ಟು ವರ್ಷದಿಂದ ಬರ್‍ಕೊಂಡು ಬಂದಿದ್ದಾರೆ. ತುಂಬಾ ಒಳ್ಳೇ ಸಾಹಿತ್ಯಾನೇ ಬರೆದಿದ್ದಾರೆ. ಆದ್ರೆ ಅವರು ಎಲ್ಲೂ mention ಆಗ್ತಿರಲಿಲ್ಲ. ಅದನ್ನ ನಾವು ಮಾಡಿದೀವಿ...ಈಗ ನೋಡಿ ಇತ್ತೀಚೆಗೆ ಲೇಖಕಿಯರ background ಬಗ್ಗೆ ಅವರು ಯಾವ ಹಿನ್ನೆಲೆಯಲ್ಲಿ ಬಂದ್ರು, ಅವರ ಬರವಣಿಗೆಯ ಹಿಂದಿನ ಒತ್ತಡಗಳೇನು? ಅಂಥದ್ದನ್ನೆಲ್ಲ ಪರಿಚಯಿಸೋ ಕಾರ್ಯಕ್ರಮ ಹಾಕ್ಕೊಂಡಿದೀವಿ. ಇಲ್ಲಿ ನೋಡಿ. ಬಹುಶಃ ಕತೆ ಕವನ ಬರಿಯೋರು ಮಾತ್ರ ಅಲ್ಲ. ಬೇರೆ ಬೇರೆ ಬರೆಯೋರು ಇದ್ದಾರೆ... ಆದ್ರೆ ನೀವು ಹೇಳಿದ್ದು ನಿಜ. ಉಳಿದ ಸಾಹಿತ್ಯದ ಬಗ್ಗೆ ಹೆಚ್ಚೇನೂ ಮಾಡೋಕಾಗಿಲ್ಲ... ಅಲ್ಲದೆ ಈ Publication, marketing problem ಎಲ್ಲಾನು ಇರುತ್ತೆ. ಅಲ್ಲದೆ ತುಂಬಾ ಹಣ ಬೇಕಾಗುತ್ತೆ. ಅದು ನಮ್ಮ ಸಂಘದಲ್ಲೂ ಸಾಕಷ್ಟಿಲ್ಲ. ಹಾಗಾಗಿ ಇದು ಮಾಡಬಾರದು ಅನ್ಕೊಂಡ ಕೆಲ್ಸ ಅಲ್ಲ. ಮುಖ್ಯವಾಗಿ ಹಣದ ಕಡೆಯಿಂದ ಮಾಡೋಕಾಗದೆ ಇರೋ ಕೆಲ್ಸ.

ಪ್ರಶ್ನೆ : ಸಂಘ ಬಹಳ ಕಡೆ ಮಹಿಳಾ ಸಾಹಿತ್ಯ ಚರಿತ್ರೆಯ ರಚನೆ ಬಗ್ಗೆ ಪ್ರಸ್ತಾಪಿಸಿದೆ. ಇದರ ಬಗ್ಗೆ ನಿಮ್ಮ ಆಲೋಚನೆಯನ್ನು ವಿವರಿಸ್ತೀರಾ.

ಹೇಮಲತಾ : ಮಹಿಳಾ ಸಾಹಿತ್ಯ ಚರಿತ್ರೆ ಮಾಡಬೇಕು ಅನ್ನೋ ಆಸೆ ನನಗೆ ತುಂಬಾನೇ ಇತ್ತು. ಎಷ್ಟು volumes ಆಗುತ್ತೋ ಏನೋ.... ಶುರು ಅಂತೂ ಮಾಡ್ಕೊಳ್ಳೋಣ, ಮುಂದೆ ಹ್ಯಾಗೋ ಮುಂದುವರಿಯುತ್ತೆ ಅಂತ ಅಂದ್ಕೊಂಡು ನಾನು ಅಧ್ಯಕ್ಷಳಾಗಿದ್ದ ಸಂದರ್ಭದಲ್ಲೇ ಈ ಬಗ್ಗೆ ವಿಜಯಾದಬ್ಬೆ ಅವರನ್ನು ಕೂಡ ಕರೆದು ಒಮ್ಮೆ ಮೀಟಿಂಗ್ ಮಾಡಿದ್ವಿ. ಅವರಿಗೇನೆ ಅದರ ಸಂಪಾದಕಿ ಆಗಿ ಅಂತ ಕೇಳಿದ್ವಿ ಕೂಡ ... ಆದ್ರೆ ಅವರು ಏನು express ಮಾಡಿದ್ರು ಅಂದ್ರೆ ಇನ್ನೂ ಈ ಹಿಂದಿನ ಲೇಖಕಿಯರು, ಅವರ ಬರವಣಿಗೆ ಬಗ್ಗೇನೆ ಆಗಬೇಕಾದ ಕೆಲ್ಸ ಸಾಕಷ್ಟಿದೆ- ಈಗ ನೋಡಿ ಇತ್ತೀಚಿನ ನಮ್ಮ ಕಲ್ಯಾಣಮ್ಮನವರ ಬಗ್ಗೇನೆ ನಮಗೆ ಸರಿಯಾಗಿ ವಿಷಯ ತಿಳಿದಿಲ್ಲ. ಅವರು ಹುಟ್ಟಿದ್ದು ಯಾವಾಗ ಅನ್ನೋದರ ಬಗ್ಗೇನೆ ಒಂದು ದೊಡ್ಡ dispute ಇದೆ. ಹಾಗೆ ನೋಡಿದ್ರೆ ಅವರನ್ನ ನೋಡಿದವ್ರು ಇನ್ನೂ ಇದಾರೆ. ಲೇಖಕಿಯರ ಸಂಬಂಧವಾಗಿ ವಿಷಯ ಹೀಗಿದ್ದಾಗ ಮೊದಲು ಅವರ ಬಗ್ಗೆ ಸಾಧ್ಯವಾದಷ್ಟು ಮಾಹಿತಿ ಕಲೆ ಹಾಕಿ- ಈಗ ಮಾಡಿದಿವಲ್ಲ ಶಾಮಲಾ ಸಂಚಯ ಇತ್ಯಾದಿ ಆ ಥರದ್ದು - ಆಮೇಲೆ ಸಾಹಿತ್ಯ ಚರಿತ್ರೆ ಆರಂಭಿಸಿದರೆ ಚೆನ್ನಾಗಿರತ್ತೆ. ಎರಡೂ ಕೆಲ್ಸ ಒಟ್ಟೊಟ್ಟಿಗೆ ಮಾಡುವುದು ಬೇಡ ಅಂತ ಅಂದಿದ್ರಿಂದ ಆ ಯೋಜನೆಯನ್ನು ಹಿಂದಕ್ಕಿಟ್ಟು ಈ ಥರದ ಕೆಲ್ಸಗಳಿಗೆ ಕೈ ಹಾಕಿದ್ವು. ಅಲ್ಲದೇ ಸುಮಿತ್ರಾ ಬಾಯಿ ಹತ್ರ ಕೂಡ ಕೇಳಿದ್ವಿ. ಅವ್ರೂ ನಾನು ಸಂಸ್ಕೃತದವಳು ವಿಜಯಾನೇ ಇದನ್ನ ಮಾಡಿದ್ರೆ ಚೆನ್ನ, ಅವರ ಸಹಾಯಕ್ಕೆ ಬೇಕಾದ್ರೆ ನಾವೆಲ್ಲ ಇರ್ತಿವಿ ಅಂದ್ರು... ಆದ್ರೂ ಒಂದೇನೆನಿಸುತ್ತೆ ಅಂದ್ರೆ ನಾವೆಲ್ಲ ಧೈರ್ಯ ಮಾಡಿ ಕೆಲ್ಸಕ್ಕೆ ನಿಂತುಬಿಟ್ಟಿದ್ರೆ ಹೇಗೋ ಮುಂದುವರಿತಿತ್ತು. ಎಲ್ಲಾ ಕಡೆಯಿಂದ ಲೇಖಕಿಯರ ಸಹಾಯ ತಗೋಬೋದಿತ್ತು.

ಪ್ರಶ್ನೆ : ಮಹಿಳಾ ಸಾಹಿತ್ಯ ಚರಿತ್ರೆ ಅಂದ್ರೆ ಹೇಗಿರಬೇಕು ಅಂತ ನಿಮ್ಮ ಅಭಿಪ್ರಾಯ? ಅಂದ್ರೆ ಈಗಾಗಲೇ ನಮ್ಮ ಸಾಹಿತ್ಯ ಚರಿತ್ರೆಗಳಿವೆಯಲ್ಲ ಅದೇ ಮಾದರಿನಲ್ಲಿ ಸಾಹಿತಿಯ ಚರಿತ್ರೆ ಮತ್ತು ಕೃತಿಯ ವಿಮರ್ಶೆ ಎರಡನ್ನು ಬೆರೆಸಿ ಬರೆದ್ರೆ ಸಾಕು ಅನ್ನಿಸ್ತದಾ?

ಹೇಮಲತಾ : ಇಲ್ಲ, ಕೇವಲ ಲೇಖಕಿಯ ಜೀವನ ಚರಿತ್ರೆ, ಕೃತಿ ವಿಮರ್ಶೆ ಅಷ್ಟೆ ಸೇರ್ಸಿ ಸಾಹಿತ್ಯ ಚರಿತ್ರೆ ಬರಿತೀವಿ ಅಂದ್ರೆ ಮಹಿಳೆಯರ ಸಂದರ್ಭದಲ್ಲಿ ಸಾಲೋದಿಲ್ಲ ಅನ್ಸತ್ತೆ. ಅದರ ಜೊತೆಗೆ ನಾವು ಮಹಿಳಾ ಸಂವೇದನೆ ಅಂತ ಏನು ಹೇಳ್ತಿವಿ, ಮಹಿಳಾ ಚಳಿವಳಿ ಅಂತ ಏನನ್ನ ಗುರುತಿಸ್ತಿವಿ ಅದನ್ನು ಹಿನ್ನೆಲೆಗಿಟ್ಟುಕೊಂಡೇ ಮಹಿಳಾ ಸಾಹಿತ್ಯದ ಹೆಜ್ಜೆ ಗುರುತುಗಳನ್ನು ಹುಡುಕಬೇಕಾಗತ್ತೆ. ಅವರ ಜೀವನವನ್ನಾದರೂ ಸರಿ ಬರವಣಿಗೆಯನ್ನಾದ್ರೂ ಸರಿ, ಅವರಿದ್ದ ಕಾಲ ಅವರು ಸ್ಪಂದಿಸಿದ ಬಗೆ ಇದನ್ನೆಲ್ಲ ಗಮನಿಸ್ಕೊಂಡೆ ಬರೀಬೇಕು. ಹಾಗಾಗಿ ಮಹಿಳಾ ಸಾಹಿತ್ಯ ಚರಿತ್ರೆಯ ಆಯಾಮಗಳೇ ಬೇರೆ ಅನ್ಸತ್ತೆ.

ಪ್ರಶ್ನೆ : ಲೇಖಿ ಲೋಕದ ಮುನ್ನುಡಿಯಲ್ಲಿ ಅದು ಸಾಹಿತ್ಯ ಚರಿತ್ರೆ ಬರೆಯೋಕ್ಕೆ ಪೂರಕ ಸಾಮಗ್ರಿ ಅಂತ ಹೇಳಿದಿರಿ. ಅದನ್ನ ನೋಡಿದ್ರೆ ಲೇಖಕಿಯ ಕೃತಿಗಿಂತ ಅವಳ ಬದುಕಿನ ಬಗ್ಗೇನೆ ಹೆಚ್ಚು ಆಸಕ್ತಿ ವಹಿಸಿದೆ ಅನ್ಸತ್ತೆ. ಅದನ್ನೋದಿದ ಕೆಲವರು ಇದೊಂದು ಥರಾ colourful ಪ್ರಯೋಗ ಅನ್ನೋ ಅಭಿಪ್ರಾಯ ವ್ಯಕ್ತ ಪಡಿಸಿದ್ರು. ಕೃತಿಯಲ್ಲೇ ಒಂದು ಕಡೆ ಕೆಲವು ಲೇಖಕಿಯರು ಮಾತನಾಡುವಾಗ ಬೇರೆಯವರಿಗಿಂತ ತಮ್ಮದು ಸರಳವಾದ ಬದುಕಾಯಿತೇನೋ ಎಂಬ ಧ್ವನಿ ಇತ್ತು ಎನ್ನುವುದರ ಪ್ರಸ್ತಾಪ ಕೂಡ ಇದೆ. ಈ ಅಂಶಗಳನ್ನು ಗಮನಿಸಿದಾಗ ಲೇಖಕಿಯ ವೈಯಕ್ತಿಕ ಬದುಕಿಗೂ ಸಾಹಿತ್ಯ ಪ್ರಕ್ರಿಯೆಗೂ ತಾಳೆ ಹಾಕಿ ಸಾಹಿತ್ಯ ಚರಿತ್ರೆ ಬರೆಯುವ, ವಿಮರ್ಶೆ ಮಾಡುವ ಬಗ್ಗೆ ನಿಮಗೇನನ್ನಿಸುತ್ತೆ?

ಹೇಮಲತಾ : ಅಲ್ಲ, ನಾನು ಏನ್ ಹೇಳ್ತಿನಿ ಅಂದ್ರೆ ಯಾವುದೇ ಮಹಿಳೆಯನ್ನು ಕೇಳಿದ್ರೂ ಅವಳ Personal life ನಲ್ಲಿ ಅವಳ ನೋವು- ನಲಿವು ವಿಶಿಷ್ಟವಾದದ್ದೇ ಆಗಿರುತ್ತೇ... ಬಂಡಾಯದಲ್ಲಿ ಕೂಡ ಹಾಗೆ ಬರೆದ್ರು. ಅದರಲ್ಲಿ ಕೆಲವು ಸಾಹಿತ್ಯ ಅದ್ವು. ಕೆಲವು ಆಗ್ಲಿಲ್ಲ. ಹಾಗಾಗಿ ವೈಯಕ್ತಿಕ ಬದುಕು ಎಷ್ಟೇ ಇದ್ರು ಸಾಹಿತ್ಯ ವಿಮರ್ಶೆ ಮಾಡುವಾಗ ಅದು ಎಷ್ಟರ ಮಟ್ಟಿಗೆ ಸಾಹಿತ್ಯ ಆಗುತ್ತೇ ಅನ್ನೋದೇ ಮುಖ್ಯ ಆಗುತ್ತೆ.

ಪ್ರಶ್ನೆ : ಸಂಘದಿಂದ ಲೇಖಕಿಯರಿಗಾಗಿಯೇ ಪ್ರತ್ಯೇಕವಾಗಿ ಪ್ರಶಸ್ತಿ ಕೊಡುವ ಪರಿಪಾಠ ಇದೆಯಲ್ಲ ಇದರ ಉದ್ದೇಶ ಏನು? ....ಈಥರ ಮಾಡಿಕೊಳ್ಳೊದ್ರಿಂದ ಉಳಿದ ಪ್ರಶಸ್ತಿಗಳ ಸಂದರ್ಭದಲ್ಲಿ ಅವರು ಗಮನಕ್ಕೆ ಬರದೇ ಹೋಗಬಹುದಲ್ವಾ. ಅವರದೇ ಒಂದಷ್ಟು ಸಾಹಿತ್ಯ ಇದೆ. ಅದಕ್ಕೆ ಅವರದೇ ಒಂದಷ್ಟು ಬಹುಮಾನ ಇದೆ ಸಾಕು ಬಿಡು ಅನ್ನೊ ಥರಾ ಆಗೋಲ್ವಾ?

ಹೇಮಲತಾ: ಮಹಿಳೆಯರಿಗೆ ಪ್ರತ್ಯೇಕ ಪ್ರಶಸ್ತಿ ಆರಂಭಿಸಿದ್ದು ಯಾಕಪ್ಪ ಅಂದ್ರೆ ಪ್ರಶಸ್ತಿಗಳನ್ನು ಕೊಡುವಾಗ ಅವರನ್ನು ಪೂರ್ತಿಯಾಗಿ ಕಡೆಗಣಿಸ್ತಿದಾರೆ ಅನ್ನೋ ಕಾರಣಕ್ಕೋಸ್ಕರ... ಆದ್ರೆ ಕೆಲವು ಸಲ ಅದ್ರ adverse effect ಯಾವ ರೀತಿ ಆಗಿವೆಯಪ್ಪಾ ಅಂದ್ರೆ ನಾವು ಶುರು ಮಾಡಿದ ಮೇಲೆ ಈಗ ಮಹಿಳೆಯರಿಗಾಗಿಯೇ ಅಂತ ವಿಪರೀತ ಪ್ರಶಸ್ತಿಗಳು ಹುಟ್ಟಿಕೊಂಡು ಬಿಟ್ಟಿವೆ. ಒಂದೆರಡಂತೂ ಒಂದೇ ಹೆಸರಿನವು ಇವೆ. ಅದಕ್ಕೆಲ್ಲ bracket ನಲ್ಲಿ ಯಾರು ಕೊಟ್ಟಿದ್ದು ಅಂತ ಸೇರಿಸಬೇಕಾಗತ್ತೆ. ಈ ಅತಿಯಾದ ಪ್ರಶಸ್ತಿಗಳಿವೆಯಲ್ಲ, ಇದು ಲೇಖಕಿಯರ ಬೆಳವಣಿಗೆಗೆ ತುಂಬಾ ತೊಂದರೆಯಾಗತ್ತೇ. ಇನ್ನು ಎಲ್ಲರಿಗಾಗಿ ಇರೋ ಪ್ರಶಸ್ತಿಗಳನ್ನು ಈಗ ಮೊದಲಿನ ಥರ ನೇರವಾಗಿ ನಿರ್ಲಕ್ಷ್ಯ ತೋರಿಸೋಕೆ ಆಗಲ್ಲ. ಹಾಗೇನಾದ್ರೂ ಆದ್ರೆ ಗಲಾಟೆ ಆಗತ್ತೆ. ಆದ್ರೆ ಇದಕ್ಕೂ ಒಂದ ದಾರಿ ಹುಡುಕ್ಕೊಂಡಿದಾರೆ. ಸಾಂಕೇತಿಕವಾಗಿ ಒಂದನ್ನ ಮಹಿಳೆಯರಿಗೆ ಕೊಟ್ಟುಬಿಡೋದು. ಅಲ್ಲಿಗೆ ಮುಗಿತು. ಅದ್ರೆ ಆಚೆಗೆ ಎಷ್ಟು ಮಹಿಳೆಯರಿಗೆ ಸಾಮರ್ಥ್ಯ ಇದ್ರೂ ಅವರ್‍ಯಾರಿಗೂ ಇಲ್ಲ. ಒಂದು ಅಂದ್ರೆ ಒಂದೇ ಅಂತ ಆಗೋಗಿದ.

ಪ್ರಶ್ನೆ: ಈಗ ನಾವೇನೇ ಹೇಳಿದ್ರೂ ಪ್ರಧಾನಧಾರೆಯಿಂದ ಮಹಿಳಾ ಸಾಹಿತ್ಯವನ್ನು

ಹೊರಗಿಟ್ಟಾಗಿದೆ. ಅಷ್ಟೇ ಅಲ್ಲದೇ ಮಹಿಳಾ ಸಾಹಿತ್ಯದ ಒಳಗೂ ಕೆಲವರನ್ನು ಗಂಭೀರ ಲೇಖಕಿಯರು, ಕೆಲವರು ಜನಪ್ರಿಯ ಲೇಖಕಿಯರು ಅಂತ ವಿಭಜಿಸಿಬಿಟ್ಟಿದ್ದಾರೆ. ನನ್ನ ಪ್ರಕಾರ ಇದೊಂದು ದೊಡ್ಡ gap. ಈ ಗ್ಯಾಪನ ತುಂಬಿಕೊಳ್ಳೊಕ್ಕೆ ಸಂಘದಲ್ಲಿ ಏನಾದ್ರೂ ವಿಶೇಷವಾದ ಕಾರ್ಯಕ್ರಮ ಇದೆಯಾ ?

ಹೇಮಲತಾ : ಈಗ್ನೋಡಿ. ಉಷಾ ನವರತ್ನರಾಂ ಅಂಥವರು ಒಂದು ವರ್ಗದ ಓದುಗರನ್ನು ಮುಟ್ಟೇ ಮುಟ್ಟುತ್ತಾರೆ. ಒಂಥರಾ ನೋಡಿದ್ರೆ ಅವರ ಸಾಹಿತ್ಯ ಚೆನ್ನಾಗೇ ಇರತ್ತೆ. ಒಂದು ವಯಸ್ಸಿಗೆ ಅದು ಬೇಕೇ ಆಗತ್ತೆ. ಈಗ ಶಿಶು ಸಾಹಿತ್ಯ ಅಂತಾರಲ್ಲ, ಅದರಲ್ಲಿ ಅರ್ಥ ಇಲ್ಲ ತೀರ simple ಅಂದ್ರೆ ಏನರ್ಥ? ಮಕ್ಕಳಿಗೆ ಅದು ಬೇಕೇ ಬೇಕು. ಅಂಥದನ್ನೆಲ್ಲ ಓದ್ಕೊಂಡೇ ನಾವು ಮುಂದಕ್ಕೆ ಬರೋದು. ಒಂದೊಂದು ವಯಸ್ಸಿನ ಓದಿನ ಹಸಿವು ಒಂದೊಂದು ಬಗೆಯಾಗಿರತ್ತೆ ಅಲ್ಲಲ್ಲಿ. ಅವರವರು ಬೇಕೆ ಬೇಕು. ನಮ್ಮ ಓದಿನ ಒಂದು ಭಾಗವಾಗಿಯೇ ಅದು ಇರಬೇಕು. ಅದು ನಮ್ಮ ಬೆಳವಣಿಗೆಗೆ ಖಂಡಿತ ಪೂರಕವಾಗಿರತ್ತೆ. ನಾನೂ ಅದನ್ನೆಲ್ಲ ಓದಿದವಳೇ. ನಮ್ಮ ಸಾಹಿತ್ಯದ ಅಭಿರುಚಿ ಬೆಳೆಸೊದ್ರಲ್ಲಿ ಅವು ಖಂಡಿತ ಸಹಾಯ ಮಾಡತ್ತೆ ಅಂತ ಹೇಳ್ತೀನಿ.

ಪ್ರಶ್ನೆ : ಆ ಥರದ ಲೇಖಕಿಯರು ಸಂಘಕ್ಕೆ ಸೇರುವುದು, ಅದ್ರ ಕಾರ್ಯಕ್ರಮದಲ್ಲಿ ಭಾಗವಹಿಸೋದು ಇಂಥದ್ರಲ್ಲಿ ಎಷ್ಟರ ಮಟ್ಟಿಗೆ ನಿಮ್ಜೊತೆ ಇದಾರೆ.

ಹೇಮಲತಾ : ತುಂಬಾ ಜನಾನೆ ಇದ್ದಾರೆ. actually ನಮ್ಮ ಸಂಘದಲ್ಲಿ ಅಂಥ classification ಇಲ್ಲ... ಆದ್ರೆ ಪ್ರಶಸ್ತಿಕೊಡುವ ಸಂದರ್ಭದಲ್ಲಿ ಮಾತ್ರ ಬಹುಮಾನಕ್ಕೆ ಅರ್ಹವಾಗಿರುವದನ್ನು ಗುರ್ತಿಸುವಾಗ ಕೆಲವು ಕಾಳಜಿ ಇಟ್ಕೊಂಡು, ಸಾಹಿತ್ಯದಲ್ಲಿ ಒಂದು ಮಟ್ಟವನ್ನು ಮುಟ್ಟಿ ಬರಿತಿರುವುದು ಅನ್ನೋ ಮಾನದಂಡ ಇಟ್ಕೊಂಡು ಗುರುತಿಸಬೇಕಾಗತ್ತೆ.

ಪ್ರಶ್ನೆ : ಕೊನೆದಾದ ಪ್ರಶ್ನೆ ಇದು. ಸಂಘದ ಬಗ್ಗೆ ಇನ್ನೇನಾದ್ರೂ ಹೇಳೋದಿದ್ರೆ ಹೇಳಿ. ಸಂಘ ಆರಂಭ ಆಗಿ ೨೦ ವರ್ಷ ಆಗಿದೆ. ಇದೇನು ಕಡಿಮೆ ಕಾಲ ಅಲ್ಲ. ನಿಮಗೆ ನಿಜವಾಗಲೂ ಹೇಳ್ಕೊಬೇಕು ಅಂತ ಅನ್ಸಿದ್ದು ಏನಾದ್ರೂ ಇದ್ರೆ ಹೇಳಿ.

ಹೇಮಲತಾ : ಈಗ ೨೦ ವರ್ಷದ ಹಿಂದೆ ಪರಿಸ್ಥಿತಿ ಹೇಗಿತ್ತು ಅಂದ್ರೆ ಲೇಖಕಿಯರನ್ನ sideline ಮಾಡ್ತಿದ್ರು. ಸಾಮಾನ್ಯವಾಗಿ ಮಹಿಳೆಯರಿಗೆ ಅವರಷ್ಟೇ ಅರ್ಹತೆ ಇರೋ ಪುರುಷರಿಗೆ ಸಿಕ್ಕಷ್ಟು ಪ್ರೋತ್ಸಾಹ ಅವಕಾಶಗಳು ಸಿಕ್ತಿರಲಿಲ್ಲ. ಇದು ಒಂದು. ಇನ್ನೊಂದು, ಹಾಗೆ ಅವಕಾಶನೇ ಸಿಕ್ದೆ ಇದ್ರೆ ಅವರು ಬೆಳೆಯೋದಾದ್ರೂ ಹೇಗೆ ಸಾಧ್ಯ? ಅಂದ್ರೆ ಒಂಥರಾ ಅವಕಾಶ ಇಲ್ದೆ ಬೆಳವಣಿಗ ಇಲ್ಲ. ಬೆಳವಣಿಗೆ ಇಲ್ದೆ ಅವಕಾಶವಿಲ್ಲ ಅನ್ನೋಥರದ ಸುಳಿ ಅದು.... ಇದನ್ನೆಲ್ಲ ಯೋಚನೆ ಮಾಡಿ ಆ ದಿಕ್ಕಿನಲ್ಲಿ ಅನುಕೂಲ ಆಗೋ ಹಾಗೆ ಹಕ್ಕುಗಳನ್ನು, ಅವಕಾಶಗಳನ್ನು ಕೇಳೋ ಹಾಗೆ ಒಂದು ವೇದಿಕೆ, ಸಂಘಟನೆ ಅಗತ್ಯ ಅಂತ

ಇದನ್ನ ಸ್ಥಾಪಿಸಿದ್ವಿ. ಅವಾಗೆಲ್ಲ ಕೆಲವರು ಇದೆಲ್ಲ ಪ್ರತ್ಯೇಕತೆ ಯಾಕೆ ಬೇಕು ಅಂತ ಭಿನ್ನ ಧ್ವನಿ ಎತ್ತಿದರು. ಆದರೆ ನಂತರ ಅವರೂ ಕೂಡ ಸಂಘದ ಚಟುವಟಿಕೆ ನೋಡಿ ಇದನ್ನ ಒಪ್ಕೊಂಡ್ರು. ಬೆಂಬಲಕ್ಕೆ ನಿಂತ್ರು. ಅದು ನನಗೆ ವಿಶೇಷ ಅನ್ಸುತ್ತೆ. ನಿಜಕ್ಕೂ ಹೆಮ್ಮೆ ಅನ್ನಿಸುತ್ತೆ.

ಸುಮಾರು ಎರಡು ಗಂಟೆಗಳ ಕಾಲ ನಡೆದ ಸುದೀರ್ಘವಾದ ಮಾತುಕತೆ, ಚಿಂತನೆ ಹಾಗೂ ಸಂಘಟನೆ ಈ ಎರಡೂ ದಿಕ್ಕಿನಲ್ಲೂ ಕನ್ನಡ ಲೇಖಕಿಯರು ಮುನ್ನುಗ್ಗುತ್ತಿರುವ ವಿಧಾನವನ್ನು ಪರಿಚಯಿಸಿತು. ಒಬ್ಬ ಲೇಖಕಿಯ ಸತ್ವ ಅನ್ನುವುದು ಆಕೆಯ ಅಂತಃಸತ್ವವನ್ನ ಅವಲಂಬಿಸುವುದರೊಂದಿಗೆ, ಅವಳ ಸುತ್ತಲಿನ ಸಾಂಸ್ಕೃತಿಕ ಬದುಕನ್ನು, ಅಲ್ಲಿ ಅವಳಿಗೆ ದೊರಕುವ ಅವಕಾಶಗಳನ್ನು ಕೂಡ ಅವಲಂಬಿಸಿರುತ್ತೆ. ಹಾಗಾಗಿ ಅವೆರಡನ್ನೂ ಸಮತೋಲನಗೊಳಿಸಿಕೊಳ್ಳದೆ ಅವಳ ಸಾಹಿತ್ಯದ ಬಗ್ಗೆ ನಿರ್ಣಾಯಕವಾದ ಮಾತುಗಳನ್ನು ಆಡೋದು ಸರಿಯಲ್ಲ ಎನ್ನುವ ಸತ್ಯವನ್ನು ತೋರಿಸಿಕೊಟ್ಟಿತು. ಹಾಗೆಯೇ ಅಂತಹ ವಾತಾವರಣವನ್ನು ಬೇರಾರೋ ಸೃಷ್ಟಿಸಿಕೊಡುತ್ತಾರೆ ಅಂತ ಕಾಯುವುದಕ್ಕಿಂತ ನಾವೇ ಮುನ್ನುಗ್ಗಿ ನಿರ್ಮಾಣ ಮಾಡಬೇಕಾಗುತ್ತೆ. ಆ ಕಾರ್ಯಕ್ಕಾಗಿ ಸಾಹಿತ್ಯಿಕ ಮಾನದಂಡವನ್ನು ಒಪ್ಪಿಕೊಂಡೇ ಅದರಾಚೆಗಿನ ಕಾರ್ಯತಂತ್ರಗಳನ್ನು ರೂಪಿಸಿಕೊಳ್ಳಬೇಕಾಗುತ್ತೆ. ಏಕೆಂದರೆ ಮಹಿಳಾ ಸಾಹಿತ್ಯದ ಗುಣಮಟ್ಟವನ್ನು ಹೆಚ್ಚಿಸುವುದು ಅಂದರೆ ಬರೀ ಅವರ ಅಕ್ಷರ ಜ್ಞಾನವನ್ನು ವಿಸ್ತರಿಸುವುದು, ಅನುಭವ ಲೋಕವನ್ನು ವಿಸ್ತರಿಸುವುದು ಮಾತ್ರ ಅಲ್ಲ. ಅದನ್ನು ಒಂದು ಚಳುವಳಿಯಾಗಿ, ಸಂಘಟನೆಯಾಗಿ ಕೂಡ ವಿಸ್ತರಿಸಬೇಕಾಗುತ್ತೆ. ಇಂತಹ ಎಲ್ಲ ಪ್ರಯತ್ನಗಳ ಫಲವಾಗಿಯೇ ಇವತ್ತು ಮಹಿಳಾ ಸಾಹಿತ್ಯ ಹಾಗೂ ಕನ್ನಡ ಲೇಖಕಿ ಕರ್ನಾಟಕದ ಸಾಂಸ್ಕೃತಿಕ ಬದುಕಿನ ಒಂದು ಅವಿಭಾಜ್ಯ ಅಂಗವಾಗಿದೆ. ಯಾರೂ ನಿರ್ಲಕ್ಷಿಸಲಾರದ ಮಟ್ಟಕ್ಕೆ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳೋಕೆ ಪ್ರಯತ್ನಿಸುತ್ತಿದೆ.



# ಕೆ. ಆರ್. ಜಯಲಕ್ಷ್ಮಿಯವರ ಕಥೆ

ನಿರೂಪಣೆ -ಸಂ

ಇಂದಿನ ಮಹಿಳೆಯ ಬದುಕು ಗಂಡ-ಮನೆ-ಮಕ್ಕಳು ಎಂಬ ಕೌಟುಂಬಿಕ ವರ್ತುಲದಾಚೆಗೆ ಹರಡುತ್ತಿದೆ. ಬದುಕು ಹೀಗೆ ವಿಸ್ತರಣೆಗೊಳ್ಳುತ್ತಿದೆ ಎಂಬುದು ಪ್ರಗತಿಯ ದ್ಯೋತಕವೇ ಸರಿ. ಆದರೆ ಈ ಪ್ರಗತಿ ಅವಳ ಬದುಕನ್ನು ಹೆಚ್ಚು ಹೆಚ್ಚು ಸಂಕೀರ್ಣಗೊಳಿಸುತ್ತಲೂ ಇದೆ. ಕುಟುಂಬದ ಸಣ್ಣ ವರ್ತುಲದಲ್ಲಿದ್ದಾಗ ಬದುಕನ್ನು ಕುರಿತು ವೈಯಕ್ತಿಕ ನೆಲೆಯಲ್ಲಿ ಚಿಂತಿಸಿ, ನಿರ್ವಹಿಸುವ ಏಕಮುಖ ಪ್ರಯತ್ನದಲ್ಲಿ ಹೆಣ್ಣಿನ ದಿನಗಳು ಸವೆಯುತ್ತಿದ್ದವಾದರೆ, ಈಗ ವಿಸ್ತೃತಗೊಳ್ಳುತ್ತಿರುವ ಬದುಕಿನಲ್ಲಿ ಅವಳ ಸಮಸ್ಯೆಗಳು ಕವಲೊಡೆದು ಹಲವಾರು ಶಾಖೆಗಳೇ ಆಗಿ ನಿಂತಿವೆ. ಒಂದು ಆಶಾದಾಯಕ ಅಂಶವೆಂದರೆ ಈಗ ಮಹಿಳೆಗೆ ಸಮಸ್ಯೆಗಳ ಎದುರು ಒಂಟಿಯಾಗಿ ನಿಲ್ಲಬೇಕೆಂಬ ಅನಿವಾರ್ಯವಿಲ್ಲ. ಸಮಾಜ ವ್ಯವಸ್ಥೆಯ ವಿವಿಧ ವಲಯಗಳಲ್ಲಿ ತಮ್ಮ ಹಕ್ಕು ಮತ್ತು ಅವಕಾಶಗಳನ್ನು ಪಡೆಯುವಲ್ಲಿ, ಸ್ಥಾಪಿಸುವಲ್ಲಿ ಮಹಿಳೆಯರೀಗ ಹೆಚ್ಚು ಹೆಚ್ಚು ವ್ಯವಸ್ಥಿತವಾಗಿ ಸಂಘಟಿತರಾಗಿರಲು ಹವಣಿಸುತ್ತಿದ್ದಾರೆ. ವೈಯಕ್ತಿಕವಾಗಿ ಲಭ್ಯವಾಗತೊಡಗಿರುವ ಶಿಕ್ಷಣ ಮತ್ತು ಉದ್ಯೋಗಾವಕಾಶಗಳು ಕೌಟುಂಬಿಕ ವಲಯಗಳಲ್ಲಿಯೂ ಹೆಣ್ಣಿನ ಆತ್ಮವಿಶ್ವಾಸವನ್ನು ಹೆಚ್ಚಿಸುತ್ತಿವೆ. ಹಾಗೆಯೇ ಸಂಘಟನಾ ಪ್ರಯತ್ನಗಳಿಂದಾಗಿ ಮನೆಯ ಹೊರ ಜಗತ್ತಿನಲ್ಲಿ ಕೂಡ ಅವಕಾಶಗಳು ವಿಸ್ತರಿಸತೊಡಗಿವೆ. ಪುರುಷನ ಪೂರ್ಣ ಸ್ವಾಮ್ಯದಲ್ಲಿದ್ದ ಬೌದ್ಧಿಕ, ಆರ್ಥಿಕ, ರಾಜಕೀಯಗಳಂತಹ ಪ್ರಬಲ ವಲಯಗಳಲ್ಲಿಯೂ ಈಗಿನ ಹೆಣ್ಣು ತನ್ನ ಪಾಲನ್ನು ಗುರುತಿಸಲು, ಗಳಿಸಲು ಶಕ್ತಳಾಗುತ್ತಿದ್ದಾಳೆ. ಆದರೆ ಪುರುಷನ ಸ್ವಾಮ್ಯವನ್ನು ಪ್ರಶ್ನಿಸುವ ಇಂತಹ ಪ್ರಯತ್ನ ಸುಲಭದ ದಾರಿಯೇನೂ ಅಲ್ಲ. ಅಡೆತಡೆಗಳು ನಿರ್ಮಾಣಗೊಳ್ಳುತ್ತದೆಂಬುದು ತೀರಾ ಸಹಜ. ಇವುಗಳನ್ನೆದುರಿಸಲು ಧೈರ್ಯ, ಛಲ, ಸಾಹಸಗಳು ಬೇಕು. ಇನ್ನೂ ಮುಖ್ಯವಾದದ್ದೆಂದರೆ ಈಗ ಮಹಿಳೆ ತಾನು ದಕ್ಕಿಸಿಕೊಳ್ಳುತ್ತಿರುವ ಹೊಸ ಆತ್ಮವಿಶ್ವಾಸದ ಜೊತೆಜೊತೆಯಲ್ಲೇ ಜಾಗರೂಕತೆಯಿಂದ, ಮೋಸಹೋಗದಿರುವ ಬುದ್ಧಿವಂತಿಕೆಯಿಂದ, ಅಪಾಯಗಳನ್ನು ಮೈಮೇಲೆ ವಿನಾಕಾರಣ ಎಳೆದುಕೊಳ್ಳಬಾರದೆಂಬ ವಿವೇಚನೆಯಿಂದ ಹೆಜ್ಜೆ ಇಡಬೇಕಾಗಿದೆ. ವಿವಿಧ ಸಾಮಾಜಿಕ ವಲಯಗಳಲ್ಲಿ ಕಂಡುಬರುವ ಚಟುವಟಿಕೆಗಳನ್ನು ಪುನಃ ಪುನಃ ವಿವರಿಸಿಕೊಳ್ಳುವ, ವಿಶ್ಲೇಷಣೆಗೆ ಒಡ್ಡುವ ಕೆಲಸ ಈ ಹಂತದಲ್ಲಿ ದೊಡ್ಡ ನೆರವಾಗಿ ನಿಲ್ಲಬಲ್ಲುದು.

ಕಳೆದ ನಮ್ಮ ಸಂಚಿಕೆಯಲ್ಲಿ ಇಂಥದೊಂದು ಪ್ರಯತ್ನವಾಗಿ ಮಹಿಳಾ ಮೀಸಲಾತಿಯನ್ನು ಕುರಿತ ವಿಸ್ತೃತ ಚರ್ಚೆಯನ್ನು ನಡೆಸಿದೆವು. ಮಹಿಳೆಯರು ಎಷ್ಟೋ ಪ್ರಯಾಸದ ನಂತರ ರಾಜಕೀಯ ಕ್ಷೇತ್ರದಲ್ಲಿ ಪ್ರವೇಶಿಸಿದ್ದಾರೇನೋ ಹೌದು. ಆದರೆ ಅಲ್ಲಿ ನೆಲೆಯೂರುವುದು, ಪುರುಷರಿಗೆ ಸಮಾನವಾದ ಅವಕಾಶಗಳನ್ನು ಪಡೆಯುವುದು-ಇವೆಲ್ಲ ಸಹಜವಾಗಿಯೇನೂ ದಕ್ಕಿ ಬಿಡುವುದಿಲ್ಲ. ಈಗಲೂ ನೆನೆಗುದಿಯಲ್ಲೇ ಇರುವ ಮಹಿಳಾ ಮೀಸಲಾತಿ ಪ್ರಕರಣವನ್ನೇ ನೋಡಬಹುದಲ್ಲ. ಈ ಪ್ರಕರಣ ಈ ಕ್ಷೇತ್ರದಲ್ಲಿ ಸಾಮೂಹಿಕವಾಗಿ ಅನ್ವಯವಾಗುವ ಒಂದು ಮಹಿಳಾ ಸಮಸ್ಯೆ. ಇದರ ಬಗೆಗಿನ ಚರ್ಚೆ, ಚಿಂತನೆ, ಹೋರಾಟಗಳೇನೇ ಇದ್ದರೂ ಸಾಮೂಹಿಕ ಪ್ರಯತ್ನಗಳೇ ಆಗಬೇಕು. ಇಂಥದರ ಹಣೆ ಬರಹವೇ ಇಷ್ಟೊಂದು ಸಮಸ್ಯಾತ್ಮಕವಾಗಿರುವಾಗ, ಈ ಕ್ಷೇತ್ರದಲ್ಲಿರುವ ಮಹಿಳೆಯರ ವ್ಯಕ್ತಿಗತ ಸಮಸ್ಯೆಗಳು ಯಾವ ಸ್ಥಿತಿಯಲ್ಲಿರಬಹುದೆಂದು ಚೆನ್ನಾಗಿ ಊಹಿಸಬಹುದು. ಅದರಲ್ಲೂ ಆ ಹೆಂಗಸಿಗೆ ತೀರಾ ಬಲವಾದ ಆರ್ಥಿಕ, ಕೌಟುಂಬಿಕ ಹಾಗೂ ರಾಜಕೀಯ ಬೆಂಬಲಗಳೇನೂ ಇಲ್ಲವೆನ್ನಿ. ಸಮಸ್ಯೆ ಇನ್ನಷ್ಟು ಜಟಿಲಗೊಳ್ಳುತ್ತದಷ್ಟೆ. ಜಾತಿ, ಶಿಕ್ಷಣ, ಅಧಿಕಾರ ಇತ್ಯಾದಿ ಇನ್ನೂ ಹತ್ತು ಹಲವು ಸಂಗತಿಗಳೂ ಕೆಲಸ ಮಾಡುವಂಥವೇ.

ಕೆ. ಆರ್. ಜಯಲಕ್ಷ್ಮಿ ನಮ್ಮ ನಿಮ್ಮೆಲ್ಲರಂತೆ ಸರ್ವೇಸಾಧಾರಣವಾಗಿ ಕಾಣುವ ಒಬ್ಬ ಮಹಿಳೆ. ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ತಾಲ್ಲೂಕಿನ ಕಂಪಲಾಪುರ ಎಂಬ ಪುಟ್ಟ ಗ್ರಾಮದವರು. ಹಳ್ಳಿಯ ಮಟ್ಟಿಗೆ ಎನ್ನಬಹುದಾದ ಸಾಧಾರಣ ಶ್ರೀಮಂತರು. ಈ ಮನೆಯವರೊಂದಿಗೆ ನನ್ನ ಸಂಪರ್ಕ ಸುಮಾರು ಮೂರು ದಶಕಗಳಷ್ಟು ಹಳೆಯದು. ಜಯಲಕ್ಷ್ಮಿಯವರನ್ನು ಮೊದಲ ಬಾರಿ ಕಂಡಾಗಲೇ ಅವರ ಚುರುಕುತನ ನನ್ನನ್ನು ಸೆಳೆದಿತ್ತು. ಹಳ್ಳಿಯ ಆ ಸಾಮಾಜಿಕ ವಾತಾವರಣದಲ್ಲಿ ಆಕೆಗೆ ಹೇಳಿಕೊಳ್ಳುವಂಥಾ ಶೈಕ್ಷಣಿಕ, ಸಾಂಸ್ಕೃತಿಕ ಅವಕಾಶಗಳೇನೂ ದೊರೆಯಲಿಲ್ಲ. ಹೈಸ್ಕೂಲು ಮೆಟ್ಟಿಲೇರುವ ಮೊದಲೇ ಮನೆಯಲ್ಲೇ ಆಳಿಯಾಗಿ ಇದ್ದ ಸೋದರಮಾವನೊಂದಿಗೆ ಮದುವೆಯಾದದ್ದು, ಮುಂದುವರಿಕೆಯಾಗಿ ಮಕ್ಕಳು, ಸಂಸಾರ... ಹೀಗೆ ಒಂದು ಹಂತವನ್ನೀಗ ಆಕೆ ತಲುಪಿದ್ದರು. ಹೀಗೇ ನೂರು ಕಾಲ ಸುಖವಾಗಿದ್ದರಂತೆ ಎಂದು ಕೊನೆಗೊಳ್ಳಬಹುದಾಗಿದ್ದ ಒಂದು ಸಾಮಾನ್ಯ ಕತೆಯಾಗಬಹುದಿತ್ತು. ಆದರೆ ಇಷ್ಟು ಸಾಮಾನ್ಯವಾಗಿ ತಮ್ಮ ಕತೆ ಸಾಗಲು ಜಯಲಕ್ಷ್ಮಿಯವರು ಅವಕಾಶ ಕೊಡದೆ ಅದಕ್ಕೊಂದಿಷ್ಟು ಛಲ, ಸಾಹಸಗಳ ಮೆರುಗನ್ನು ಕೊಡುತ್ತಾ ಬಂದರು. ಇದೀಗ ಐವತ್ತರ ಆರಂಭದ ವರ್ಷಗಳಲ್ಲಿರುವ ಆಕೆಯ ಚಟುವಟಿಕೆಗಳನ್ನು ನಾನು ಗಮನಿಸುತ್ತಲೇ ಬಂದಿದ್ದೇನೆ. ಈ ಲೋಕದಲ್ಲಿನ ಎಲ್ಲ ಹೆಂಗಸರಂತೆ ಆಕೆಯೂ ಕಷ್ಟ ಸುಖಗಳನ್ನು ಎದುರಿಸುತ್ತಾ ಬಂದಿದ್ದಾರೆ. ಅದರಲ್ಲೇನೂ ವಿಶೇಷವಿಲ್ಲವೆನ್ನಿ. ಆದರೆ ಇಷ್ಟೆಲ್ಲದರ ಮಧ್ಯೆ ಆಕೆ ರಾಜಕೀಯದಲ್ಲಿ ಪ್ರವೇಶ ಪಡೆದು ಈಗೊಂದು ಹದಿನೈದು ವರ್ಷಗಳಲ್ಲಿ ಹಂತಹಂತವಾಗಿ ಬೆಳೆಯುತ್ತಾ, ಮೈಸೂರು ಜಿಲ್ಲಾ ಪಂಚಾಯತಿಯ ಅಧ್ಯಕ್ಷಸ್ಥಾನಕ್ಕೆ ಸ್ಪರ್ಧಿಸುವ ಹಾಗಾದರು. ಈ ಸ್ಪರ್ಧೆಯಲ್ಲಿ ಅವರು

ಗೆಲ್ಲಲಿಲ್ಲ ಎಂಬ ಮಾತು ಬೇರೆ. ಸದ್ಯ ನನಗದು ಮುಖ್ಯವೆನಿಸುವುದಿಲ್ಲ. ಈಕೆಯ ಬೆಳವಣಿಗೆ ನನಗೊಂದು ದೊಡ್ಡ ಕೌತುಕ. ಏಕೆಂದರೆ ಮಹಿಳೆಯರ ಪ್ರಗತಿಯನ್ನು ಕುರಿತು ಮಾತನಾಡುವಾಗ ನಾವೆಲ್ಲರೂ ಮಹಿಳೆಯರಿಗೆ ದೊರಕಬೇಕಾಗಿರುವ ಶಿಕ್ಷಣ ಮತ್ತು ಉದ್ಯೋಗಾವಕಾಶಗಳನ್ನು ಕುರಿತು ತುಂಬಾ ಒತ್ತು ಕೊಡುತ್ತಿದ್ದೇವೆ. ತಮ್ಮ ಹೆಸರುಗಳ ಮುಂದೆ ಉದ್ದುದ್ದ ಡಿಗ್ರಿಗಳನ್ನು ಲಗತ್ತಿಸಿಕೊಂಡಿರುವ, ದೊಡ್ಡ ದೊಡ್ಡ ಉದ್ಯೋಗಗಳಲ್ಲಿ ನಿರತರಾಗಿರುವ ಎಷ್ಟೋ ಮಹಿಳೆಯರು ನಿಜವಾದ ಅರ್ಥದಲ್ಲಿ ಒಂದಿಷ್ಟೂ ಮುಕ್ತರಾಗಿಲ್ಲದಿರುವುದನ್ನೂ, ಡಿಗ್ರಿ ಉದ್ಯೋಗಗಳೇ ಅವರ ಉರುಲುಗಳಾಗಿರುವುದನ್ನೂ ಕೂಡ ನೋಡುತ್ತಿದ್ದೇವೆ. ತಮ್ಮ ಮನೆಗಳಲ್ಲಾಗಲೀ, ಮನೆಯ ಹೊರಗಿನ ತಮ್ಮ ಕಾರ್ಯಕ್ಷೇತ್ರಗಳಲ್ಲಾಗಲೀ ತಮ್ಮತನವನ್ನು ಕಾಯ್ದುಕೊಳ್ಳಲಾರದೆ ತೊಳಲುತ್ತಿರುವ ಇಂತಹ ಮಹಿಳೆಯರನ್ನು ಕಂಡಾಗ ಶಿಕ್ಷಿತ ಮಹಿಳೆ ಎಂದರೇನೆಂಬುದನ್ನು ಮತ್ತೊಮ್ಮೆ ನಿರ್ವಚಿಸುವ ಅಗತ್ಯವಿದೆ ಎನಿಸುವುದು ಸಹಜ. ನಮ್ಮ ಜಯಲಕ್ಷ್ಮಿಗೆ ಅದಾವ ದೊಡ್ಡ ಹಿನ್ನೆಲೆ, ಅವಕಾಶ, ಬೆಂಬಲ, ಪ್ರೇರಣೆ ಅಥವಾ ಅವಕಾಶಗಳು ತಾನೇ ಇದ್ದವು? ಹೈಸ್ಕೂಲನ್ನೂ ಏರದ ಶಿಕ್ಷಣ, ಹದಿನಾಲ್ಕರ ಹರಯಕ್ಕೇ ಮದುವೆ, ಗಂಡ, ಮಕ್ಕಳು- ಹೀಗೆ ಪಟ್ಟಿ ಮಾಡಿದರೆ ಅವರೆದುರು ಅವಕಾಶಗಳು ಮುಚ್ಚಿ ಹೋಗಿದ್ದವೆಂದೇ ಹೇಳಬೇಕು. ಆದರೆ ಮುನ್ನಡೆದು ತನ್ನ ಬದುಕನ್ನು ರೂಪಿಸಿಕೊಳ್ಳುವ ಸಾಹಸಕ್ಕೆ ಇಂಥ ಕಾರಣಗಳೆಂದೂ ಗೋಡೆಗಳಾಗಲಾರವು. ಛಲ, ಸಾಹಸ, ಉತ್ಸಾಹ, ಬುದ್ಧಿವಂತಿಕೆ, ಪ್ರಯತ್ನ, ಇವೆಲ್ಲಕ್ಕೂ ಕಾರಣವಾದ ಆತ್ಮವಿಶ್ವಾಸ-ಇವೇ ಮಹಿಳೆಗೆ ನಿಜವಾದ ನೆರವಾಗುವ ಸಾಧನಗಳು ಎಂಬುದನ್ನು ಜಯಲಕ್ಷ್ಮಿಯವರ ಕತೆ ಹೇಳುತ್ತದೆ. ತಮ್ಮಿಂದ ಏನು ತಾನೇ ಸಾಧ್ಯ, ತಮಗೆ ಸರಿಯಾದ ಅವಕಾಶಗಳನ್ನು ಕೊಡುವವರು ಯಾರು ಎಂಬಂತಹ ಗೊಂದಲಗಳಲ್ಲಿ ಸಿಲುಕಿ ತಮ್ಮ ಅಸಹಾಯಕತೆಯನ್ನು ನಿಂದಿಸಿಕೊಳ್ಳುತ್ತಿರುವ ಮಹಿಳೆಯರಿಗೆ ಜಯಲಕ್ಷ್ಮಿಯಂಥವರ ಅನುಭವ ಹಲವು ಉಪಯುಕ್ತ ಸುಳಿವುಗಳನ್ನು ನೀಡಬಹುದು.

ರಾಜಕೀಯ ಕ್ಷೇತ್ರ ಹೇಳಿಕೇಳಿ ಪುರುಷ ಸ್ವಾಮ್ಯದ್ದು. ಇಂಥಾ ಕ್ಷೇತ್ರದಲ್ಲಿ ಪ್ರವೇಶ ಪಡೆದು ಮುನ್ನಡೆದು ಸಾಗಿರುವ ಜಯಲಕ್ಷ್ಮಿಯವರ ಅನುಭವಗಳನ್ನು ದಾಖಲಿಸಬಾರದೇಕೆ ಎಂಬ ಆಲೋಚನೆ ಬಂದದ್ದು ಈ ಹಿನ್ನೆಲೆಯಲ್ಲಿ. ನಿಮ್ಮ ಅನುಭವಗಳನ್ನು, ವಿಶೇಷವಾಗಿ ರಾಜಕೀಯ ಕ್ಷೇತ್ರಕ್ಕೆ ಒತ್ತುಕೊಟ್ಟು, ನಮ್ಮ ಪತ್ರಿಕೆಗಾಗಿ ಬರೆದುಕೊಡುವಿರಾ ಎಂದು ಅವರನ್ನು ಕೇಳಿದೆ. ಕಾರಣಾಂತರಗಳಿಂದ ಹಾಗೆ ಕೂತು ಬರೆಯುವುದು ಅವರಿಗೆ ಆಗಲಿಲ್ಲ. ಅವರ ಅನುಭವದ ವಿವರಗಳನ್ನು, ಅವರದೇ ವಿಶ್ಲೇಷಣೆಗಳೊಂದಿಗೆ ಕೇಳಿ ನಾನು ಅದನ್ನು ನಿರೂಪಿಸಬಹುದಲ್ಲ ಎನಿಸಿತು. ಗಣ್ಯವ್ಯಕ್ತಿಗಳೊಂದಿಗೆ ಭೇಟಿಯನ್ನು ದೊರಕಿಸಿ ಕೊಳ್ಳಬೇಕಾದರೆ ಇರಬಹುದಾದಂತಹ ಹಲವು ಜಂಜಡಗಳೂ ಇಲ್ಲ. ನನ್ನ ಉದ್ದೇಶವನ್ನು ವಿವರಿಸಿ ಅವರಿಗೊಂದು ಪತ್ರ ಬರೆದೆ. ಪ್ರತ್ಯೇಕವಾಗಿ ಗಂಟೆಗಳ ಕಾಲ ಕೂತು ಮಾತನಾಡಿದೆ. ಮಾತನಾಡಿದ್ದನ್ನು ಟೇಪು ಮಾಡಿಕೊಂಡೆ. ನನ್ನ ಮೂಲ ಉದ್ದೇಶವೇನೋ ಅವರ ರಾಜಕೀಯ ಬದುಕಿನ ವಿವರಗಳನ್ನು ಹಿಡಿಯುವುದೇ ಆಗಿತ್ತು. ಆದರೆ ಹತ್ತಿಪ್ಪತ್ತು ವರ್ಷಗಳ

ಬಾಂಧವ್ಯದ ಮಾತಿನ ಧಾಟಿಯೇ ಆ ದಿನವೂ ಇದ್ದದ್ದು. ಮತ್ತೆ ಮತ್ತೆ ಮಾತಿನ ಹಳಿಯನ್ನು ನನ್ನ ಉದ್ದೇಶಕ್ಕೆ ಸೇರ್ಪುಗೊಳಿಸುವುದರಲ್ಲೇ ಸಮಯ ಕಳೆಯಿತು. ಕೊನೆಗೂ ಆದದ್ದೆಂದರೆ, ಗಂಟೆಗಟ್ಟಲೆ ಸಾಗಿದ ಟೇಪನ್ನು ಕೇಳುತ್ತಾ, ಅವರ ರಾಜಕೀಯ ಅನುಭವಗಳ ಎಳೆಗಳನ್ನು ಹೊಂದಿಸುತ್ತಾ ಕಟ್ ಅಂಡ್ ಪೇಸ್ಟ್ ಕೆಲಸಕ್ಕೇ ಇಳಿಯಬೇಕಾಯಿತು.

ಅವರ ರಾಜಕೀಯ ಜೀವನದ ಆರಂಭಕ್ಕೆ ಹಿನ್ನೆಲೆಯಾಗಿ ಅವರ ಬಾಲ್ಯ, ವಿದ್ಯಾಭ್ಯಾಸ, ಹಳ್ಳಿಯ ಪರಿಸರ, ವಿವಾಹ, ಪತಿ, ಪತಿಯ ಮನೆ-ಹೀಗೆ ಮಾತು ಮೊದಲಾಯಿತು. ಜಯಲಕ್ಷ್ಮಿ ಹಿಂದಣ ಹೆಜ್ಜೆಗಳನ್ನು ನೆನಪಿಸಿಕೊಳ್ಳತೊಡಗಿದರು.

ಕಂಪಲಾಪುರದ ರಂಗಸ್ವಾಮಿಯವರೇನೂ ಹುಟ್ಟಾ ಶ್ರೀಮಂತರಲ್ಲ. ಆ ಊರಿನ ಇತರ ಎಷ್ಟೋ ತರುಣರಂತೆ ಅವರೂ ಕೂಡ ಸಣ್ಣ ವ್ಯಾಪಾರಿಯಾಗಿಯೇ ಸ್ವತಂತ್ರ ಜೀವನವನ್ನ ಆರಂಭಿಸಿದ್ದು. ವ್ಯಾಪಾರ ಕೈಹತ್ತಿ ನಾಲ್ಕು ಜನರಲ್ಲಿ ಕ್ರಮೇಣ ಗಟ್ಟಿಕುಳವೆನಿಸಿದರು. ಮಡದಿ ಲಕ್ಷಮ್ಮನವರೊಂದಿಗೆ ಅದೃಷ್ಟಲಕ್ಷ್ಮಿಯೂ ಅವರ ಕೈ ಹಿಡಿದಳು. ವ್ಯವಹಾರದೊಂದಿಗೆ ಸಂಸಾರವೂ ಬೆಳೆಯುತ್ತಾ ಸಾಲಾಗಿ ಮೂವರು ಹೆಣ್ಣು ಮಕ್ಕಳಾದರು. ಹಿರಿಯವಳೇ ಜಯಲಕ್ಷ್ಮಿ. ರಂಗಸ್ವಾಮಿಯವರು ಮನೆ, ಹೆಂಡತಿ, ಮಕ್ಕಳು ಎಂಬುದನ್ನೆಲ್ಲಾ ತಮ್ಮ ವ್ಯಾಪಾರ ವಹಿವಾಟಿನಂತೆಯೇ ಗ್ರಹಿಸಿಕೊಂಡಿದ್ದದ್ದು. ಎರಡರ ಮೇಲೂ ಪಕ್ಕಾ ನಿಯಂತ್ರಣಗಳನ್ನು ಚಲಾಯಿಸುವುದು ಅವರ ಸಹಜ ಪ್ರವೃತ್ತಿಯೇ ಆಗಿತ್ತು. ದಿನನಿತ್ಯ ಅಮ್ಮ ತಿನ್ನುತ್ತಿದ್ದ ಬೈಗುಳ ಹೊಡೆತಗಳನ್ನು ಕಾಣುತ್ತಲೇ ಮೂವರು ಹೆಣ್ಣು ಮಕ್ಕಳೂ ಬೆಳೆದದ್ದು. ಚಿಕ್ಕಂದಿನಲ್ಲಿ ಅಮ್ಮನಿಗಾಗಿ ಅಳು ಬರುತ್ತಿತ್ತು. ಬೆಳೆಯುತ್ತಾ ಹೋದಂತೆ ಹೆಣ್ಣಿನ ಬದುಕು, ಗಂಡಿನ ದರ್ಪಗಳ ಬಗ್ಗೆ ಅಸಹನೆ, ಕೋಪಗಳನ್ನು ಅನುಭವಿಸುತ್ತಾ ಏನೋ ಅರ್ಥವಾದವರಂತೆ ಅಮ್ಮನ ಕಣ್ಣೀರನ್ನೊರಸಿ ಸಂತೈಸುವ ಮಾತುಗಳನ್ನಾಡುತ್ತಾ ದೊಡ್ಡವರಾದರು. ಊಟ ತಿಂಡಿಗಳ ತಾಪತ್ರಯಗಳನ್ನೆಂದೂ ಅನುಭವಿಸದಿದ್ದರೂ ಹೆಣ್ಣಾಗಿ ಹುಟ್ಟಿದೆವೆಂದರೆ ಬೈಗುಳ, ಹೊಡೆತಗಳಂತಹ ಅವಮಾನಗಳನ್ನು ಸಹಿಸದೆ ದಾರಿಯಿಲ್ಲ ಎಂಬ ಪಾಠ ಮಾತ್ರ ಚಿಕ್ಕಂದಿನಲ್ಲೇ ಆಯಿತು. ಹೆಣ್ಣು ಮಕ್ಕಳನ್ನು ಕೂರಿಸಿಕೊಂಡು ಮಾತನಾಡಿಸುವ ಪರಿಪಾಠ ತಂದೆಯವರಿಗೆ ಇರಲೇ ಇಲ್ಲ ಎನ್ನಬಹುದು. ತಮ್ಮ ಮನೆಯಲ್ಲಿ ಮಾತ್ರವೇ, ತಮ್ಮ ಅಮ್ಮ ಮಾತ್ರವೇ ಇಂಥಾ ಕಷ್ಟಕ್ಕೆ ಸಿಲುಕಿರುವುದು ಎಂಬಂತೇನೂ ಅಲ್ಲ. ಊರಿನ ತಮ್ಮ ಅಕ್ಕಪಕ್ಕದ ಎಲ್ಲ ಮನೆಗಳಲ್ಲೂ ಹೆಂಗಸರ ಪಾಡು ಬೇರೆಯದೇನಲ್ಲ. ತಮ್ಮ ಮನೆಯಲ್ಲಾದರೂ ವಾಸಿ. ಉಂಡುಡುವುದಕ್ಕೆ ತೊಂದರೆ ಇಲ್ಲ. ಅಪ್ಪ ಭಾರಿ ಮುಂಗೋಪಿಯೇ ಆದರೂ ಊರಿನ ಉಳಿದ ಹೆಚ್ಚಿನ ಗಂಡಸರಂತೆ ಕುಡಿತ ಗಿಡಿತಗಳಂತಹ ಕೆಟ್ಟ ಚಾಳಿಗಳೇನಿರಲಿಲ್ಲ. ತಾವು, ತಮ್ಮ ವ್ಯಾಪಾರ ವಹಿವಾಟು ಸಂಪಾದನೆಗಳಲ್ಲೇ ಮುಳುಗಿದವರು. ಅವರ ಪಾಲಿಗೆ ಹೆಂಡತಿ ಮಕ್ಕಳು ಕೂಡ ಅದರ ಒಂದು ವಿಸ್ತರಣೆ ಅಷ್ಟೇ. ಹೆಂಡತಿಯನ್ನು ಸಾರಿಗೆ ಉಪ್ಪು ಸರಿಯಾಗಿ ಹಾಕಿಲ್ಲ ಎಂಬಂತಹ ಸಣ್ಣಪುಟ್ಟ ಕಾರಣಗಳಿಗೂ ಆಕ್ಷೇಪಿಸುವುದು, ಬೈಯುವುದು,

ಹೊಡೆಯುವುದು, ವಿನಾಕಾರಣ ಸಂದೇಹಿಸುವುದು ಇವೆಲ್ಲಾ ಯಾವುದೇ ಗಂಡಸಿನ ಸಹಜ ಹಕ್ಕು. ರಂಗಸ್ವಾಮಿಯನ್ನು ಮಾತ್ರ ದೂರುವುದೇನಿದೆ?

ಮನೆವಾರ್ತೆಯ ಕೆಲಸ ಕಾರ್ಯಗಳನ್ನು ನಿಭಾಯಿಸುವುದು ಲಕ್ಷಮ್ಮನವರ ಕರ್ತವ್ಯ. ಉಳಿದಂತೆ ಯಾವುದೇ ನಿರ್ಣಯಗಳಿದ್ದರೂ ರಂಗಸ್ವಾಮಿಯವರದೇ. ಮೂವರು ಹೆಣ್ಣು ಮಕ್ಕಳೂ ಹಳ್ಳಿಯ ಶಾಲೆಯನ್ನೇನೋ ಸೇರಿದರು. ಊರಿನ ಉಳಿದ ಹೆಣ್ಣು ಮಕ್ಕಳಿಗಿಂತ ಪುಣ್ಯವಂತರೇ. ಹದಿನಾಲ್ಕು ತುಂಬಿತೋ ಇಲ್ಲವೋ ಮದುವೆಗಳಾಗಿಬಿಡಬೇಕು. ತಮ್ಮ ಹೆಂಡತಿ ಈ ಬಗ್ಗೆ ಹೇಳುವುದೇನಾದರೂ ಇದೆಯೇ, ಮಕ್ಕಳನ್ನು ಕೇಳಬೇಕೆ ಎಂಬಂತಹ ಪ್ರಶ್ನೆಗಳು ಹಾಸ್ಯಾಸ್ಪದ. ಆ ಮಡದಿ ಮಕ್ಕಳಿಗೆ ತಾನೇ ಇಂಥದೊಂದು ಅವಕಾಶ ತಮಗೆ ಸಿಗಬೇಕು ಎಂಬ ಕಲ್ಪನೆ ಹೇಗೆ ಸಾಧ್ಯ? ಯಾವ ಹೆಣ್ಣಿಗೂ ಊರಿನ ಆ ವಾತಾವರಣದಲ್ಲಿ ಸಾಧ್ಯವಿಲ್ಲದ ಕಲ್ಪನೆ.

ಲಕ್ಷಮ್ಮನವರ ತಮ್ಮ ಈಶ್ವರಯ್ಯ ಭಾವನ ಮನೆಯಲ್ಲೇ ಇದ್ದರು. ಕೆಲವು ದಶಕಗಳ ಹಿಂದೆ ಹೀಗೆ ಬಂಧುಬಾಂಧವರು ವಿವಿಧ ಕಾರಣಗಳಿಗಾಗಿ ಕುಟುಂಬಗಳಲ್ಲಿ ಬೆರೆತು ಬಾಳುತ್ತಿದ್ದುದು ತೀರಾ ಸಾಮಾನ್ಯ. ಅದರಲ್ಲೂ ಹಳ್ಳಿಗಳಲ್ಲಿ ಈ ರಿವಾಜು ಸರ್ವೇಸಾಮಾನ್ಯ. ರಂಗಸ್ವಾಮಿಯುವರು ಈಶ್ವರಯ್ಯನನ್ನು ತಮ್ಮ ವ್ಯಾಪಾರ ವ್ಯವಹಾರಗಳಲ್ಲಿ ಹೀಗೆ ಕರೆದುಕೊಂಡಿದ್ದರು. ಆ ಹುಡುಗನೇನೂ ಅಸಹಾಯಕನಾಗಿ ಆಶ್ರಯ ಬೇಡಿ ಬಂದವನಲ್ಲ. ಲಕ್ಷಮ್ಮನವರ ತಂದೆಯ ಮನೆಯವರೂ ಸಾಧಾರಣ ಚೆನ್ನಾಗಿದ್ದವರೇ. ಬೆಂಗಳೂರಿನಲ್ಲಿ ನೆಲೆಸಿದ್ದರು. ಹುಡುಗ ಬಿ. ಕಾಂ. ಮುಗಿಸಿ ಸದ್ಯಕ್ಕಿರಲಿ ಎಂದು ಭಾವನೊಂದಿಗೆ ಕೆಲಸ ಕಲಿಯತೊಡಗಿದ್ದ. ಹದಿನಾಲ್ಕು ತುಂಬುತ್ತಿರುವ ಮಗಳನ್ನು ಈ ಮೈದುನನಿಗೆ ಕೊಡಬಹುದು ಎಂಬ ಆಲೋಚನೆ ರಂಗಸ್ವಾಮಿಯವರಿಗೆ ಬಂತು. ಬೇರೆ ಪ್ರಶ್ನೆ, ಅಭಿಪ್ರಾಯ ಎಂಥದೂ ಇಲ್ಲ. ಮದುವೆ ಮಾಡಿದ್ದೇ.

ಮದುವೆ ಹೀಗೆ ನಡೆದಿದ್ದನ್ನು ಅವರು ಹೇಳಿದಾಗ ನಾನು ಜಯಲಕ್ಷ್ಮಿಯವರನ್ನು 'ನಿಮ್ಮ ಮಾವನನ್ನು ಮದುವೆ ಮಾಡಿಕೊಳ್ಳಲು ಇಷ್ಟವಿತ್ತೇ?' ಎಂದು ಸುಮ್ಮನೆ ಕೇಳಿದೆ. ಮೊಮ್ಮಗುವೂ ಆಗಿ ಅಜ್ಜಿ ಎನಿಸಿರುವ ಆಕೆಯನ್ನು ಈ ಪ್ರಶ್ನೆ ಕೇಳಲು ಮೊದಲು ನನಗೆ ಸಂಕೋಚವಾಯಿತು. ಆದರೆ ಅವರ ಉತ್ತರ ನಮ್ಮ ಬಹುತೇಕ ಎಲ್ಲ ಹೆಣ್ಣು ಮಕ್ಕಳ ಪರಿಸ್ಥಿತಿಯನ್ನು ವಿವರಿಸುವಂತಿತ್ತು. ಇಂದಿಗೂ ಅನ್ವಯವಾಗುವಂತೆ. 'ಹದಿನಾಲ್ಕರ ವಯಸ್ಸಿಗೆ ನಾನು ಅಂಥದನ್ನೆಲ್ಲಾ ಎಷ್ಟು ಯೋಚಿಸಿರಬಹುದು ಹೇಳಿ. ಎಲ್ಲವನ್ನೂ ಅಪ್ಪ ಅಮ್ಮ ನಿರ್ಧರಿಸುತ್ತಾರೆ. ಅದರಲ್ಲೂ ಅಪ್ಪನೇ ಎನ್ನಿ. ಅಮ್ಮನ ಅಭಿಪ್ರಾಯವನ್ನೇನೂ ಯಾರೂ ಕೇಳಲು ಹೋಗುವುದಿಲ್ಲ. ಇನ್ನು ಹುಡುಗಿಯನ್ನು ಕೇಳುವ ಪ್ರಶ್ನೆಯೇ ಇಲ್ಲ. ಎಲ್ಲವೂ ನಿರ್ಧಾರವಾಗಿ ಕೂರು ಎಂದರೆ ಕೂತು ತಾಳಿ ಕಟ್ಟಿಸಿಕೊಂಡರೆ ಮದುವೆ ಆಯಿತು. ಆಮೇಲೆ ಆ ಗಂಡನೊಂದಿಗೆ ಬಾಳಿ ಬದುಕುವುದನ್ನು ಒಗ್ಗಿಸಿಕೊಳ್ಳುವ ಸಾಹಸ. ಎಲ್ಲ ಹೆಣ್ಣು ಮಕ್ಕಳ ಬದುಕೂ ಇಷ್ಟೇ ತಾನೆ' ಎಂದರು.

ಆದರೆ ಹಾಗೆಂದು ಅವರ ವೈವಾಹಿಕ ಬದುಕು ನಿರಾಸೆಯದೇನಾಗಲಿಲ್ಲ. ಚಿಕ್ಕಂದಿನಿಂದಲೇ ಜೊತೆಯಾಗಿ ಬೆಳೆದ ಮಾವ. ಕಲಿತವನು. ಬೆಂಗಳೂರಿನ ನಯ ನಾಜೂಕುಗಳನ್ನು ಕೂಡಿಸಿಕೊಂಡವನು. ಮೇಲಾಗಿ ಸ್ನೇಹಜೀವಿ. ಜಯಲಕ್ಷ್ಮಿಗೆ ಆಯ್ಕೆಯ ಅವಕಾಶ ದೊರೆಯಲಿಲ್ಲ ಎಂಬುದು ಪರಿತಾಪದ ವಿಷಯವೇನೂ ಆಗಲಿಲ್ಲ. ಹಾಗೆ ನೋಡಿದರೆ ಮನೆಯ ಹೊರಗೆ ಹಣಕಿ ನೋಡುವುದನ್ನು ಜಯಲಕ್ಷ್ಮಿಗೆ ಕಲಿಸಿದವರು ಈ ಮಾವನೇ. ಮದುವೆಯಾದ ಮೇಲೆ ಪತಿ ಈಶ್ವರಯ್ಯ ಸುಮಾರು ಏಳೆಂಟು ವರ್ಷಗಳ ಕಾಲ ಬದುಕಿನ ದಾರಿಯನ್ನು ಹುಡುಕುವುದರಲ್ಲಿ ಕಳೆದರು. ಬೆಂಗಳೂರು, ಭದ್ರಾವತಿ ಎಂದು ಸರ್ಕಾರಿ, ಅರೆ ಸರ್ಕಾರಿ ಉದ್ಯೋಗಗಳನ್ನು ಮಾಡುತ್ತಾ ಒಂದಿಷ್ಟು ಪ್ರಯತ್ನಿಸಿದರು. ಇದರಿಂದ ಒಂದಿಷ್ಟು ಲಾಭವಾದದ್ದು ಜಯಲಕ್ಷ್ಮಿಯ ತಂಗಿಯರಿಗೆ. ಇನ್ನೊಂದೆರಡು ವರ್ಷ ಹೆಚ್ಚಾಗಿ ಶಿಕ್ಷಣಾವಕಾಶ ದೊರೆಯಿತಷ್ಟೇ. ಅಷ್ಟಕ್ಕೆ ಅವರಿಗೂ ಮದುವೆಗಳಾಗಿಬಿಟ್ಟಿತು ಎನ್ನಿ. ಅದಿರಲಿ. ಕೊನೆಗೊಮ್ಮೆ ಅಲೆದಾಟಗಳನ್ನೆಲ್ಲಾ ಬಿಟ್ಟು ಕಂಪಲಾಪುರಕ್ಕೆ ಬಂದು ನೆಲಸುವ ನಿರ್ಧಾರ ಮಾಡಿದರು ಈಶ್ವರಯ್ಯ. ಕೆಲವು ಸಮಯ ಮಾವನ ಮನೆಯಲ್ಲೇ ಕಳೆಯಿತು. ಬಲು ಬೇಗನೆ ತಮ್ಮದೇ ವಹಿವಾಟುಗಳನ್ನು ರೂಢಿಸಿಕೊಂಡು ಈಶ್ವರಯ್ಯ ಬೇರೆ ಮನೆ ಕಟ್ಟಿಸಿಕೊಂಡು ಸ್ವತಂತ್ರವಾಗಿದ್ದೂ ಆಯಿತು.

ಈವರೆಗಿನ ಕತೆಯಲ್ಲಿ ವಿನೇನೂ ವಿಶೇಷವಿಲ್ಲವೆನ್ನಿ. ಬಹುತೇಕ ಹೆಣ್ಣುಮಕ್ಕಳ ಸಾಮಾನ್ಯ ಕತೆ. ಈ ಮಧ್ಯೆ ಎಷ್ಟೋ ವರ್ಷಗಳ ಮೇಲೆ ಜಯಲಕ್ಷ್ಮಿಯವರಿಗೆ ತಮ್ಮನೊಬ್ಬ ಹುಟ್ಟಿದ. ನಂತರ ಇಬ್ಬರು ತಂಗಿಯರು. ಈ ಮೂವರೂ ಎಷ್ಟು ಚಿಕ್ಕವರೆಂದರೆ ಜಯಲಕ್ಷ್ಮಿಯವರ ಮಗನನ್ನನುಸರಿಸಿ ಅವರೂ ಈ ಅಕ್ಕನನ್ನು ಮಮ್ಮಿ ಎಂದೇ ಕರೆಯುವುದನ್ನು ಕಲಿತರು. ಅಪ್ಪ ಅಮ್ಮಂದಿರನ್ನು ಮಮ್ಮಿ, ಡ್ಯಾಡಿ ಅನ್ನುವ ಆಧುನಿಕತೆ ಆ ಹಳ್ಳಿಯನ್ನು ಪ್ರವೇಶಿಸಿದ್ದು ಈಶ್ವರಯ್ಯನವರಿಂದಲೇ. ಅದು ವಿಪರೀತಕ್ಕೆ ಹೋದ ಬಗೆ ಎಂದರೆ ಜಯಲಕ್ಷ್ಮಿಯವರನ್ನು ಅವರ ತಮ್ಮ, ತಂಗಿಯರಿರಲಿ ಅಪ್ಪ ಅಮ್ಮಂದಿರೂ ಸೇರಿದಂತೆ ಊರವರೆಲ್ಲ ಮಮ್ಮಿ ಎಂದೇ ಕರೆಯುತ್ತಾರೆ. ಈಶ್ವರಯ್ಯನವರ ಆಧುನಿಕತೆ ಮಮ್ಮಿ ಡ್ಯಾಡಿಗಷ್ಟೇ ಉಳಿಯಲಿಲ್ಲ. ಜಯಲಕ್ಷ್ಮಿಯವರು ಸಾಮಾಜಿಕ ಜೀವನದಲ್ಲಿ ಪ್ರವೇಶಿಸಿ ಬೆಳೆಯಬೇಕೆಂಬ ಪ್ರೇರಣೆಯನ್ನು ಕೊಡಲಾರಂಬಿಸಿದರು. ಸಮಯಕ್ಕೆ ಒಂದು ಅವಕಾಶವೂ ಕೂಡಿ ಬಂದಿತು. ಸರ್ಕಾರವು ಗ್ರಾಮಗಳಲ್ಲಿ ಮಹಿಳಾ ಕಲ್ಯಾಣ ಕೇಂದ್ರಗಳನ್ನು ತೆರೆಯುವ ಯೋಜನೆಯನ್ನು ಜಾರಿಗೊಳಿಸಿತ್ತು. ಅದರ ಅಂಗವಾಗಿ ಊರಿನಲ್ಲಿ ಮಹಿಳಾ ಸಮಾಜವನ್ನು ಜಯಲಕ್ಷ್ಮಿ ಆರಂಭಿಸಿದ್ದು ಹೀಗೆ. ಈ ವೇಳೆಗೆ ಜಯಲಕ್ಷ್ಮಿ ಸುಮಾರು ನಲವತ್ತು ವರ್ಷದವರಿದ್ದಿರಬಹುದು. ಮೊದಮೊದಲಿಗೆ ಹಾಡು ಹಸೆ, ರಂಗೋಲಿ, ಅಡುಗೆ, ಸ್ವೆಟರ್ ಬಟ್ಟೆ ಹೆಣಿಗೆ-ಹೀಗೆಯೇ ಮಹಿಳಾ ಸಮಾಜದ ಕಾರ್ಯಕ್ರಮಗಳು ಆರಂಭಗೊಂಡದ್ದು. ಸೂಕ್ತ ಸಂದರ್ಭಕ್ಕಾಗಿ ಕಾಯುತ್ತಿತ್ತೇನೋ ಎಂಬಂತೆ ಜಯಲಕ್ಷ್ಮಿಯವರ ಒಳಗಿನ ಸಾಮರ್ಥ್ಯ ಅರಳತೊಡಗಿತು. ಅವರು ಈ ಮಹಿಳಾ ಸಮಾಜಕ್ಕಾಗಿ ಊರಿನ ಹೆಣ್ಣು ಮಕ್ಕಳನ್ನು ಒಂದೆಡೆ ಸಂಘಟಿಸುವ ಕೆಲಸದೊಂದಿಗೆ

ತಮ್ಮೊಳಗೇ ಹುದುಗಿದ್ದ ಅಪಾರ ಸಾಧ್ಯತೆಗಳನ್ನು ಬಲುಬೇಗನೆ ಗುರುತಿಸಿಕೊಳ್ಳತೊಡಗಿದರು. ಊರಿನಲ್ಲಿ ಹೆಣ್ಣು ಮಕ್ಕಳಿಗಾಗಿ ಒಂದು ವೇದಿಕೆ ದೊರಕಿದ್ದು ಎಂಬುದು ಹೊಸ ಹೊಸ ಪರಿವರ್ತನೆಗಳಿಗೆ ಅವಕಾಶಗಳನ್ನು ತೆರೆಯಿತು.

ರಂಗಸ್ವಾಮಿಯವರಿಗೆ ತಮ್ಮ ವಹಿವಾಟುಗಳ ಸಂದರ್ಭಗಳಲ್ಲಿ ತಮ್ಮ ಕ್ಷೇತ್ರದ ರಾಜಕಾರಣಿಗಳೊಂದಿಗೆ ಸಾಕಷ್ಟು ಸಂಪರ್ಕವಿತ್ತು. ಸ್ವತಃ ಅವರೇನೂ ರಾಜಕೀಯದಲ್ಲಿ ಧುಮುಕಲಿಲ್ಲ ನಿಜ. ಆದರೆ ಕ್ರಮೇಣ ಊರಿನ ಗಟ್ಟಿಕುಳವೆನಿಸಿ ಬೆಳೆದು ಪ್ರಬಲರಾಗಿದ್ದ ಅವರನ್ನು ಕ್ಷೇತ್ರದ ರಾಜಕಾರಣಿಗಳು ಬಿಡುವಂತೇನೂ ಇಲ್ಲ. ಭಾರತ ದೇಶವು ಪ್ರಜಾಪ್ರಭುತ್ವದ ಹಾದಿಯಲ್ಲಿ ದಶಕದಿಂದ ದಶಕಕ್ಕೆ ಸಾಗುತ್ತಾ ಆಯ್ದ ಕೆಲವೇ ಪ್ರಜೆಗಳ ಪ್ರಭುತ್ವ ಎಂಬ ಲಕ್ಷಣದ್ದಾಗಿರುವಾಗ ಇಂಥದೊಂದು ತೀರಾ ಸಹಜ. ಹಾಗಾಗಿ ರಂಗಸ್ವಾಮಿಯವರೇನೂ ಊರಿನ ತಮ್ಮ ವ್ಯಾಪಾರ ವ್ಯವಹಾರದಿಂದಾಚೆ ತಲೆಕೆಡಿಸಿಕೊಂಡಂತೆ ಇರಲಿಲ್ಲವಾದರೂ ಆ ಊರನ್ನು ಹಾಯ್ದು ಹೋಗುವ ರಾಜಕಾರಣಿಗಳೆಲ್ಲರೂ ಅವರನ್ನು ಕಂಡೇ ಹೋಗುತ್ತಿದ್ದುದು.

ಈ ಮಧ್ಯೆ ರಾಜಕೀಯ ವಲಯದಲ್ಲಿ, ವಿಶೇಷವಾಗಿ ಕರ್ನಾಟಕದಲ್ಲಿ ಪಂಚಾಯಿತಿ ರಾಜ್‌ದ ಗಾಳಿ ಬಲವಾಗಿ ಬೀಸತೊಡಗಿತ್ತು. ಪ್ರಜಾಪ್ರತಿನಿಧಿ ಸರ್ಕಾರದ ಕಲ್ಪನೆಯೇನೋ ಹಳೆಯದೇ. ಆದರೆ ಈ ಹಿಂದೆ ಪ್ರಬಲ ಶಕ್ತಿಗಳೇ ಪ್ರಜಾಪ್ರತಿನಿಧಿಗಳೆನಿಸಿ ತಮ್ಮ ಶಕ್ತಿಯನ್ನು ಅಧಿಕೃತಗೊಳಿಸಿಕೊಳ್ಳುವ ವಿಧಾನವಷ್ಟೇ ಪ್ರಜಾಪ್ರತಿನಿಧಿ ಸರ್ಕಾರಕ್ಕಿದ್ದದ್ದು. ಆದರೆ ಕಾಲಕ್ರಮೇಣ ಅಧಿಕಾರ ವಿಕೇಂದ್ರೀಕರಣದ ಈ ಪ್ರಕ್ರಿಯೆ, ವಿವಿಧ ರಾಜಕೀಯ ಕಾರಣಗಳಿಗಾಗಿಯೇ ಆದರೂ ಸರಿ, ಸಮಾಜದ ವಿವಿಧ ಸ್ತರಗಳಿಗೂ ವಿಸ್ತರಿಸತೊಡಗಿತ್ತು. ದೇವರಾಜ ಅರಸರು, ನಜೀರ್‌ಸಾಬರು ಮುಂತಾದ ಹಲವರಿಂದಾಗಿ ಕರ್ನಾಟಕದಲ್ಲಿ ಈ ಪ್ರಕ್ರಿಯೆ ಇನ್ನಷ್ಟು ಚುರುಕಾಗಿ ಬೆಳೆಯಿತು. ಜಿಲ್ಲೆ, ತಾಲ್ಲೂಕು, ಗ್ರಾಮಗಳೆಂಬ ಕೆಳಗಿನ ನೆಲೆಗಳನ್ನು ಅಧಿಕಾರದ ಎಳೆಗಳು ತಾಕತೊಡಗಿದವು. ಅದರೊಂದಿಗೇ ಸಮಾಜದಲ್ಲಿ ಈವರೆಗೆ ನಿರ್ಲಕ್ಷಿತವೆನಿಸಿದ್ದ ಸಮುದಾಯಗಳನ್ನೂ ಇವು ಆವರಿಸಿತೊಡಗಿದವು. ದುರ್ಬಲ ವರ್ಗ, ಜಾತಿಗಳವರು, ಮಹಿಳೆಯರು ಕೂಡ ಅವಕಾಶಗಳನ್ನು ಎದುರು ನೋಡಬಹುದೆಂಬಂತಾಯಿತು. ಇವೆಲ್ಲಾ ಹೇಗೆ, ಏಕೆ ಸಾಧ್ಯವಾಯಿತು ಎಂಬಂತಹ ವಿಶ್ಲೇಷಣೆಗಳು ಪ್ರತ್ಯೇಕ ವಿಸ್ತೃತ ಅಧ್ಯಯನಗಳು. ಸದ್ಯಕ್ಕೆ ನಮಗೆ ರಾಜಕೀಯ ಸಂದರ್ಭಗಳು ಮಹಿಳೆಯರಿಗೆ ಬಾಗಿಲುಗಳನ್ನು ತೆರೆಯಬೇಕಾದ ಅನಿವಾರ್ಯವನ್ನು ಒಪ್ಪಿಕೊಂಡವು ಎಂಬ ಸಂಗತಿ ಪ್ರಸ್ತುತವಾದದ್ದು. ಕಂಪಲಾಪುರದಂತಹ ಸಣ್ಣಗ್ರಾಮದ ಮಟ್ಟಿಗೆ ಹೇಳುವುದಾದರೆ ಈ ಸಂದರ್ಭ ತೀರಾ ಸಹಜವಾಗಿ ಜಯಲಕ್ಷ್ಮಿಯವರನ್ನು ಒಳಗೊಂಡು ಬಿಟ್ಟಿತು. ಜಾತಿಯಿಂದ ಹೇಳುವುದಾದರೆ ಜಯಲಕ್ಷ್ಮಿ ದುರ್ಬಲ ಗುಂಪಿಗೆ ಸೇರಿದವರೇ. ಕಂಪಲಾಪುರದಲ್ಲಿ ಅವರ ಈ ದೇವಾಂಗ ಜನದವರೇ ಬಹುಸಂಖ್ಯಾತರು. ಹಳ್ಳಿಯ ಮಟ್ಟಿಗೆ ಪ್ರಭಾವಿಗಳು ಎನ್ನಲೂಬಹುದು. ಆ ಸಣ್ಣ ಗ್ರಾಮ ಪಂಚಾಯಿತಿಯ

ಸದಸ್ಯರಾಗುವುದರೊಂದಿಗೆ ಜಯಲಕ್ಷ್ಮಿಯವರ ರಾಜಕೀಯ ಜೀವನ ಆರಂಭವಾಯಿತು. ಆಗ ಊರಿನಲ್ಲಿ ಪ್ರಬಲವಾಗಿದ್ದ ಜನತಾಪಕ್ಷದಲ್ಲಿ ಅವರು ಸೇರಿದರು. ಮೊದಮೊದಲು ಅವರು ಈ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವಾಗ ಆಪ್ತರೆನಿಸಿದವರನ್ನು ನಂಬಿ, ಅವರ ಸಲಹೆಗಳಂತೆ ನಡೆಯತೊಡಗಿದ್ದು ತೀರಾ ಸಹಜ. ಆದರೆ ಬಲುಬೇಗನೆ ಅಲ್ಲಿನ ಸೂಕ್ಷ್ಮಗಳನ್ನು ಗ್ರಹಿಸಿಕೊಂಡು ಹೇಗೆ ನಡೆದರೆ ತನ್ನ ಕ್ರಿಯಾಶೀಲತೆಗೆ ಸೂಕ್ತವಾದೀತು ಎಂದು ಸ್ವತಂತ್ರವಾಗಿ ಅರ್ಥಮಾಡಿಕೊಳ್ಳ ತೊಡಗಿದರು. ಹಿರಿಯ ರಾಜಕಾರಣಿಗಳು ತಮ್ಮನ್ನು ಒಳ್ಳೆಯ ಕಾರ್ಯಕರ್ತೆ ಎಂದು ಗುರುತಿಸುವಂತೆ ಕೆಲಸ ಮಾಡಿದರು.

೧೯೮೫ರಲ್ಲಿ ಆತ್ಮವಿಶ್ವಾಸದಿಂದಲೇ ಚುನಾವಣಾ ಟಿಕೆಟ್‌ಗಾಗಿ ಪ್ರಯತ್ನಿಸಿದಾಗ ಮಾತ್ರ ನಿರಾಸೆ ಕಾದಿತ್ತು. ಟಿಕೆಟ್ ದೊರೆಯಲಿಲ್ಲ. ತನ್ನ ಕಾರ್ಯಕ್ಷಮತೆಯ ಬಗ್ಗೆ ಎಷ್ಟೆಷ್ಟೊಂದು ಒಳ್ಳೆಯ ಮಾತುಗಳನ್ನಾಡುತ್ತಿದ್ದ ನಾಯಕಮಣಿಗಳು ಸಮಯದಲ್ಲಿ ಮಾತ್ರ ಹೀಗೇಕೆ ಮಾಡಿಬಿಟ್ಟರು ಎಂಬ ಗೊಂದಲವಾಯಿತು. ಇದರೊಂದಿಗೆ ಕಲಿತ ಪಾಠವೆಂದರೆ ಇಲ್ಲಿ ಉಳಿಬಾಳಲು ಶ್ರಮ, ಪ್ರಾಮಾಣಿಕತೆ, ನಿಷ್ಠೆ-ಇಂಥವಷ್ಟೇ ಸಾಲುವುದಿಲ್ಲ. ಇವೆಲ್ಲ ಜನರ ವಿಶ್ವಾಸವನ್ನು ಗಳಿಸುವಲ್ಲಿ, ಆತ್ಮ ಸಂತೋಷಕ್ಕಾಗಿ ಬೇಕೇನೋ ನಿಜ. ಆದರೆ ರಾಜಕೀಯದಲ್ಲಿರಬೇಕೆಂದರೆ ಇನ್ನಷ್ಟು ಬೇರೆ ಬಗೆಯ ಚಾಕಚಕ್ಯತೆಗಳೂ ಬೇಕು. ತನ್ನ ಕೆಲಸಕಾರ್ಯಗಳ ಬಗ್ಗೆ ವಿಶ್ವಾಸವಿದ್ದರೂ ಆಯಕಟ್ಟಿನ ಸಮಯದಲ್ಲಿ ಯಾವ ಮುಲಾಜೂ ಇಲ್ಲದೆ ಟಿಕೆಟ್ ನಿರಾಕರಣೆಯಾಗಿಬಿಟ್ಟಿತು ಎಂಬುದು ದೊಡ್ಡ ನಿರಾಸೆಯನ್ನು ತಂದಿತು. ಈಗಲೂ ಅವರ ನೈತಿಕ ಬೆಂಬಲಕ್ಕೆ ನಿಂತವರು ಪತಿ ಈಶ್ವರಯ್ಯನವರೇ. ಅವರ ಉತ್ಸಾಹವನ್ನು ಮೀಟಲು ಪ್ರಯತ್ನಿಸುತ್ತಾ 'ಸದ್ಯಕ್ಕೆ ಇದನ್ನೆಲ್ಲಾ ಪಕ್ಕಕ್ಕಿಟ್ಟು ನೀನು ಎಂ. ಎ. ಮಾಡು' ಎಂದರು. ಎಂಥಾ ಅನಿರೀಕ್ಷಿತ ಸಲಹೆ! ನಡೆಯಲಾರದ್ದೊಂದನ್ನು ಹೇಳಿದರೆ ಹೇಗೆ? ಆದರೆ ಜಯಲಕ್ಷ್ಮಿಯವರು ತಮ್ಮ ನಿರಾಸೆಯನ್ನು ಹೇಗಾದರೂ ಸರಿ ಮರೆಯಬೇಕಿತ್ತು. ಮೈಸೂರು ಮುಕ್ತ ವಿಶ್ವವಿದ್ಯಾಲಯದಲ್ಲಿ ಕನ್ನಡ ಎಂ. ಎ. ಗಾಗಿ ನೋಂದಣಿ ಮಾಡಿಸಿಯೇ ಬಿಟ್ಟರು. ವಿಶ್ವವಿದ್ಯಾಲಯವೇನೋ ಇಪ್ಪತ್ತೈದು ದಾಟಿದ ಯಾರಿಗೇ ಆದರೂ ಎಂ. ಎ. ಮಾಡುವ ಅವಕಾಶವನ್ನು ಮುಕ್ತವಾಗಿ ತೆರೆದಿದೆ. ಆದರೆ ಈ ಸವಾಲನ್ನು ಜಯಲಕ್ಷ್ಮಿಯಂಥವರು ಒಪ್ಪಿಕೊಳ್ಳುವುದು ಸಾಧ್ಯವೆಂಬುದನ್ನು ಊಹಿಸಲೂ ಕಷ್ಟಸಾಧ್ಯ. ಡಿಗ್ರಿ ಮುಗಿಸಿ, ಅನಿವಾರ್ಯವಾಗಿ ಅಷ್ಟಕ್ಕೇ ಓದು ನಿಲ್ಲಿಸಿ, ಮದುವೆಯಾಗಿ ಬಿಟ್ಟು, ಸಂಸಾರದ ಜಂಜಡದಲ್ಲಿ ಸಿಲುಕಿ ಹೊರ ಬರಲಾರದೆ, ಇನ್ನಷ್ಟು ಓದಬೇಕಿತ್ತು ಎಂಬ ತಮ್ಮ ಹಂಬಲದ ಬಗ್ಗೆ ಹಪಹಪಿಸುವ ಹೆಣ್ಣು ಮಕ್ಕಳನ್ನು ಕಂಡಾಗಲೆಲ್ಲ ಒಂದು ಬಗೆಯ ಸಂಕಟವಾಗುತ್ತದೆ. ಆದರೆ ಜಯಲಕ್ಷ್ಮಿಯವರಂತೆ ಅವಕಾಶಗಳ ಬೆನ್ನಟ್ಟಿ ಹೋಗುವ ಛಲವನ್ನು ಎಲ್ಲ ಹೆಣ್ಣು ಮಕ್ಕಳೂ ರೂಢಿಸಿಕೊಳ್ಳಬಾರದೇ ಎಂದು ಆಸೆಯಾಗುತ್ತದೆ. ಈ ಸಮಾಜ ನಮಗೆ ಅವಕಾಶಗಳನ್ನು ಎಂದೂ ಕೊಟ್ಟಿಲ್ಲ ನಿಜ. ಮುಂದೆಂದೂ ಕೊಡುವುದೂ ಇಲ್ಲ. ತೀವ್ರಗಾಮಿ ಹೋರಾಟ, ಪ್ರತಿಭಟನೆಗಳನ್ನು ಎಲ್ಲರೂ ಅಪ್ಪಿಕೊಳ್ಳಬೇಕೆಂದೇನೂ ಇಲ್ಲ.

ಅದು ಕೆಲವರಷ್ಟೇ ಆಯ್ದುಕೊಳ್ಳಬಹುದಾದ ದಾರಿ. ಆದರೆ ಇದ್ದಷ್ಟನ್ನು ನೇರ್ಪುಗೊಳಿಸಿಕೊಂಡು ಸಾಗುವ ಛಲದ ದಾರಿಯನ್ನು ಯಾರೂ ಕಂಡುಕೊಳ್ಳಬಹುದೆನಿಸುತ್ತದೆ. ಜಯಲಕ್ಷ್ಮಿ ತಮ್ಮೆಲ್ಲ ಸಾಮರ್ಥ್ಯವನ್ನೂ ತೊಡಗಿಸಿ ಎರಡು ವರ್ಷದಲ್ಲಿ ಎಂ. ಎ. ಮುಗಿಸಿಯೇ ಬಿಟ್ಟರು. ರೆಗ್ಯುಲರ್ ಕೋರ್ಸ್‌ಗಳಲ್ಲಿರುವ ವಿದ್ಯಾರ್ಥಿಗಳೇ ಹಿರಿಯ ಪ್ರೊಫೆಸರ್, ಅಧಿಕಾರಿಗಳನ್ನು ಕಂಡು ಮಾತನಾಡಲು ಹಿಂಜರಿಯುತ್ತಾರೆ. ವಾಸ್ತವವಾಗಿ ಈ ಹಿಂಜರಿಕೆ ವಿನಾಕಾರಣದ್ದು. ಜಯಲಕ್ಷ್ಮಿ ಮೈಸೂರು ವಿಶ್ವವಿದ್ಯಾಲಯದ ಹಲವಾರು ವಿದ್ವಾಂಸರೊಂದಿಗೆ ಭೇಟಿಯ ಸಂದರ್ಭಗಳನ್ನೂ ಒದಗಿಸಿಕೊಂಡು ಅವರಿಂದ ಅಗತ್ಯದ ಎಲ್ಲ ಸಲಹೆ, ಸಹಕಾರ, ಮಾರ್ಗದರ್ಶನಗಳನ್ನು ಪಡೆದರು. ಎಷ್ಟೋ ಸಂದರ್ಭಗಳ ವಿವರಗಳನ್ನು ಅವರು ಹೇಳುತ್ತಾ ಹೋದಂತೆ, ನಿಜವಾಗಲೂ ಇವರಿಗೆ ಚಿಕ್ಕಂದಿನಿಂದಲೇ ಸರಿಯಾದ ಶಿಕ್ಷಣಾವಕಾಶ ದೊರೆತಿದ್ದರೆ ಹೇಗಿರಬಹುದಿತ್ತು ಎಂದು ಕಲ್ಪಿಸುತ್ತಾ ಕೂರುವಂತಾಗುತ್ತದೆ. ಹಾಗೆ ನೋಡಿದರೆ ಅವರ ವಯಸ್ಸಿಗೂ, ಆ ಎಂ. ಎ. ಡಿಗ್ರಿಗೂ ನಂಟುಹಾಕಿದರೆ ಅಂಥಾ ವ್ಯಾವಹಾರಿಕ ಲಾಭವೇನಿರಲಿಲ್ಲ. ಮಗನ ಲಗ್ನ ಪತ್ರಿಕೆಯಲ್ಲಿ ಜಯಲಕ್ಷ್ಮಿ ಎಂ. ಎ ಎಂದು ಹೆಮ್ಮೆಯಿಂದ ಹಾಕಿಸಿಕೊಂಡು ಸಂತೋಷಪಟ್ಟರಷ್ಟೇ. ಆದರೆ ನಿಜಕ್ಕೂ ಈ ಡಿಗ್ರಿ ಅವರ ಆತ್ಮವಿಶ್ವಾಸವನ್ನಂತೂ ಗಟ್ಟಿಗೊಳಿಸಿತು. ಪುರುಷ ಪ್ರಾಬಲ್ಯದ ಪಕ್ಷದ ರಾಜಕಾರಣದ ಒರಟಾದ ಮೊಂಡೇಟಿನಿಂದ ನೊಂದು ನಿರಾಸೆಗೊಂಡಿದ್ದ ತಮ್ಮ ಮನಸ್ಸಿನ ನೇತ್ಯಾತ್ಮಕ ಸ್ಥಿತಿಯನ್ನು ಗುಣಾತ್ಮಕ ಸ್ಥಿತಿಗೆ ತಂದುಕೊಂಡ ಅವರ ವಿಧಾನ ನನಗೆ ತುಂಬಾ ಮೆಚ್ಚುಗೆಯದೆನಿಸಿದ್ದು. ರಾಜಕೀಯದಲ್ಲಿ ಏರುಪೇರುಗಳನ್ನು ತಾವು ಸಮಾಧಾನಚಿತ್ತದಿಂದ ನಿಭಾಯಿಸಬೇಕೆಂಬುದನ್ನು ಅವರು ಒಪ್ಪಿಕೊಂಡರು. ಪಕ್ಷದಲ್ಲಿ ಕೆಳಗಿನ ಹಂತದಲ್ಲೇ ಇದ್ದರೂ ಕ್ರಮೇಣ ಈ ಕ್ಷೇತ್ರದಲ್ಲೇ ತಾನು ಸಾಧಿಸಿ ತೋರಿಸುವೆನೆಂದು ಕ್ರಿಯಾಶೀಲರಾದರು.

ಮಹಿಳೆಯರಿಗೆ ಮೀಸಲಾತಿ ಇರುವಂತಹ ಸಂದರ್ಭಗಳನ್ನೂ ಪುರುಷರು ತಮ್ಮ ಅನುಕೂಲಕ್ಕೆ ಹೇಗೆ ಬಳಸುತ್ತಾರೆಂಬ ಬಗ್ಗೆ ಜಯಲಕ್ಷ್ಮಿ ಅನೇಕ ಚಿಕ್ಕ ಪುಟ್ಟ ಪ್ರಸಂಗಗಳಿಂದ ಹಿಡಿದು ಟಿಕೆಟ್ ನೀಡುವ, ನಿರಾಕರಿಸುವ, ಗೆಲ್ಲಿಸುವ ಪ್ರಸಂಗಗಳವರೆಗೆ ಹೇಳಿದರು. ಅವೆಲ್ಲ ವಿವರಗಳನ್ನು ಹೇಳಲು ಸೂಕ್ತ ಸಂದರ್ಭ ಇದಲ್ಲ. ಪ್ರಾಕ್ಸಿ ರಾಜಕಾರಣದಂತಹ ಪ್ರಚಲಿತ ತಂತ್ರ ವಿಧಾನದಿಂದ ಮೊದಲುಗೊಂಡು ಜಾತಿ, ಹಣ ಮೊದಲಾದ ಎಲ್ಲ ಕುತಂತ್ರಗಳೂ ಇವೆ ಎಂಬುದಷ್ಟನ್ನೇ ಗ್ರಹಿಸಿದರೂ, ಈಗಾಗಲೇ ಈ ಎಲ್ಲದರಲ್ಲೂ ಪರಿಣತರೆನಿಸಿ ತಮ್ಮ ಪ್ರಾಬಲ್ಯವನ್ನು ಮೆರೆಯುತ್ತಿರುವ ಪುರುಷರೇ ಬಹುಸಂಖ್ಯಾತರಾಗಿರುವ ರಾಜಕೀಯ ಕ್ಷೇತ್ರದಲ್ಲಿ ಮಹಿಳೆಯರು ಪ್ರವೇಶಿಸಿ ನಿಭಾಯಿಸುವ ಕಷ್ಟ ಎಂಥದೆಂಬುದನ್ನು ಊಹಿಸಬಹುದು. ಜಯಲಕ್ಷ್ಮಿ ಹೆದರಿ ಹಿಂತೆಗೆಯದೆ ಮುಂದೆ ಸಾಗಿದರು. ಅಂತೂ ೯೫ರ ಚುನಾವಣೆಯಲ್ಲಿ ಟಿಕೆಟ್ ದೊರೆಯಿತು.

ಮೈಸೂರು ಜಿಲ್ಲಾ ಪಂಚಾಯತಿ ಸದಸ್ಯರ ಒಟ್ಟು ಸಂಖ್ಯೆ-೪೩. ಈ ಪೈಕಿ ಜನತಾದಳದವರೇ ೨೭ ಜನ. ಉಳಿದಂತೆ ಕಾಂಗ್ರೆಸ್-೧೩, ಬಿಜೆಪಿ -೦೨, ಸ್ವತಂತ್ರ- ೦೧

ಸದಸ್ಯರು. ಜಿಲ್ಲಾ ಪಂಚಾಯತಿಗೆ ಈವರೆಗೆ ಅಧ್ಯಕ್ಷ ಸ್ಥಾನಕ್ಕಾಗಿ ಎರಡು ಬಾರಿ ಚುನಾವಣೆ ನಡೆದಿರುವುದು. ಮೊದಲ ಸಲದಲ್ಲಿ ಅಭ್ಯರ್ಥಿಯ ಆಯ್ಕೆ ಜನರಲ್ ಗುಂಪಿನಿಂದ. ಎಂದರೆ ಪುರುಷರಿಗೇ ಎನ್ನಿ. ಎರಡನೆಯ ಬಾರಿಗೆ ಈ ಸ್ಥಾನ ಮಹಿಳಾ ಮೀಸಲಾತಿಯ ಪ್ರಶ್ನೆಯೊಂದಿಗೆ ಥಳಕು ಬಿದ್ದಿದ್ದು. ಮೂವರು ಮಹಿಳೆಯರ ನಡುವೆ ಸ್ಪರ್ಧೆ. ಮೂವರೂ ಜನತಾದಳದವರೇ ಎಂದ ಮೇಲೆ ಪಕ್ಷದ ಒಟ್ಟು ಬೆಂಬಲ ಇತ್ಯಾದಿಗಳ ಮಾತಿಲ್ಲ. ವ್ಯಕ್ತಿಗಳು ಯಾರ್ಯಾರನ್ನು ಎತ್ತಿ ಹಿಡಿಯುವರೆಂಬುದೇ ಮುಖ್ಯ. ಈಗ ಯಾವ ಮಹಿಳೆಯನ್ನು ಗೆಲ್ಲಿಸಿದರೆ ತಮಗೆ ಅನುಕೂಲವಾದೀತು ಎಂದು ತಂತ್ರವಿಧಾನಗಳನ್ನು ರೂಪಿಸುವಲ್ಲಿ ಪುರುಷರ ಪಣಾಹಣಿ ಶುರುವಾಯಿತು. ನಿಜದಲ್ಲಿ ಆ ಮೂವರು ಮಹಿಳೆಯರ ನಡುವೆ ಸ್ಪರ್ಧೆ ನಡೆಯಲೇ ಇಲ್ಲ. ಬದಲಿಗೆ ಪುರುಷರಲ್ಲೇ ಜಾತಿ, ಹಣ, ಪ್ರತಿಷ್ಠೆಗಳನ್ನಾಧರಿಸಿದ ಸ್ಪರ್ಧೆ ನಡೆದು, ಅವರಲ್ಲಿ ಪ್ರಬಲರಾದವರು ತಮಗೆ ಬೇಕಾದವರನ್ನು ಗೆಲ್ಲಿಸಿದರು ಅಷ್ಟೆ. ಈ ಸಂದರ್ಭದಲ್ಲಿ ಪ್ರತಿಷ್ಠಿತ ಜಾತಿಗೆ ಸೇರಿದ ಹುಣಸೂರಿನ ಎಂಎಲ್ಎ ತನ್ನ ಜಾತಿಯ ಮಹಿಳೆಯನ್ನು ಗೆಲ್ಲಿಸಿದರು. ಆ ಮಹಿಳೆಯ ಎದುರು ದುರ್ಬಲ ಜಾತಿಯವರಾದ ಜಯಲಕ್ಷ್ಮಿ ಈ ಚುನಾವಣೆಯಲ್ಲಿ ಗೆಲ್ಲಲು ಸಾಧ್ಯವಾಗಲಿಲ್ಲ.

ಆದರೆ ಈಗ ಅವರ ಅನುಭವ ವಿಸ್ತಾರವಾಗುತ್ತಾ ನಡೆದಿದೆ. ಅವರೀಗ ಈ ಸೋಲುಗಳನ್ನು ಮುಂದಿನ ಗೆಲುವಿನ ಮೆಟ್ಟಿಲುಗಳನ್ನಾಗಿ ರೂಪಿಸಿಕೊಂಡೇನೆಂಬ ಆತ್ಮವಿಶ್ವಾಸದಿಂದ ನಡೆಯಬಲ್ಲವರಾಗಿದ್ದಾರೆ. ರಾಜಕೀಯ ಅನುಭವ ಅವರಿಗೆ ತೀವ್ರವಾದ ಅಗತ್ಯದ ಶಿಕ್ಷಣವನ್ನು ನೀಡುತ್ತಿದೆ. ರಾಷ್ಟ್ರ ರಾಜಕಾರಣವನ್ನು ಕುರಿತ ಮಾತುಗಳು ಬಂದಾಗ ಅವರ ಸೂಕ್ಷ್ಮ ವಿಶ್ಲೇಷಣಾ ಶಕ್ತಿ ಮೆಚ್ಚುವಂಥದ್ದು. ವರ್ಷಾನುಗಟ್ಟಲೆ ಔಪಚಾರಿಕ ಶಿಕ್ಷಣವನ್ನು ಪಡೆದಿದ್ದರೂ ನಮ್ಮ ಎಷ್ಟೋ ಹೆಣ್ಣು ಮಕ್ಕಳು ಇಂತಹ ಲೌಕಿಕ ತಿಳುವಳಿಕೆಗಳ ಬಗ್ಗೆ ಎಷ್ಟೊಂದು ಅಮಾಯಕರಾಗಿರುತ್ತಾರಲ್ಲ ಎನಿಸಿಬಿಡುತ್ತದೆ. ಇಂದಿರಾಗಾಂಧಿ, ಸೋನಿಯಾಗಾಂಧಿ, ಮೇನಕಾಗಾಂಧಿ, ರಾಬ್ಡಿದೇವಿ, ಮಮತಾ ಬ್ಯಾನರ್ಜಿ, ಜಯಲಲಿತ-ಹೀಗೆ ಹಲವು ಮಹಿಳೆಯರ ರಾಜಕೀಯ ಜೀವನ ಸಂದರ್ಭಗಳನ್ನು ಕುರಿತು ವಿಸ್ಮಯವೆನಿಸುವಷ್ಟು ಚೆನ್ನಾಗಿ ಮಾತನಾಡಿದರು.

ವೈಯಕ್ತಿಕ ಜೀವನದಲ್ಲಿ ಅವರೀಗ ತಮ್ಮ ನೈತಿಕ ಬೆಂಬಲವಾಗಿದ್ದ ಪತಿಯನ್ನು ಕಳೆದುಕೊಂಡಿದ್ದಾರೆ. ಇರುವ ಇಬ್ಬರು ಗಂಡುಮಕ್ಕಳೇನೋ ತಮ್ಮ ತಮ್ಮ ಬದುಕನ್ನು ಸಾಗಿಸುವಷ್ಟು ದೊಡ್ಡವರಾಗಿದ್ದಾರೆ. ಉದ್ಯೋಗಗಳನ್ನರಸಿ ಹೊರಟ ಅವರು ಈ ಸಣ್ಣ ಗ್ರಾಮದಲ್ಲಿ ತಾಯಿಯ ಜೊತೆಯಾಗಿ ನಿಲ್ಲುವುದಂತೂ ಸಾಧ್ಯವಿಲ್ಲ. ಹೀಗೆ ಮನೆಯಲ್ಲೀಗ ಜಯಲಕ್ಷ್ಮಿ ಒಂಟಿಯೇ. ಸಾಮಾನ್ಯವಾಗಿ ಇಂತಹ ಒಂಟಿತನದ ಪರಿಸ್ಥಿತಿಯಲ್ಲಿ ಹೆಂಗಸರಿರಲಿ ಗಂಡಸರೇ ಹೆದರಿ ಹೌಹಾರುತ್ತಾರೆ. ಆದರೆ ಜಯಲಕ್ಷ್ಮಿ ತಮ್ಮ ಬದುಕನ್ನು ಅರ್ಥಪೂರ್ಣವಾಗಿ ನಡೆಸುವ ದಾರಿಯನ್ನು ಕಂಡುಕೊಂಡಿದ್ದಾರೆ. ಆತ್ಮವಿಶ್ವಾಸದ ಈ ಹೆಣ್ಣಿಗೆ ಒಂಟಿತನವೇ ಕಾಡುವ ವಿಷಾದದ ಕಾರಣವಾಗಿ ಕೂತಿಲ್ಲ. ಅಸಹಾಯಕತೆಯ

ಯಾವ ಭಾವಕ್ಕೂ ಎಡೆಕೊಟ್ಟಂತೆಯೇ ಅವರು ಕಾಣುವುದಿಲ್ಲ. ತಮ್ಮ ಕ್ಷೇತ್ರದಲ್ಲಿ ಉಪಯುಕ್ತ ಕೆಲಸಗಳನ್ನು ನಡೆಸಲು ಪಕ್ಷದ ವತಿಯಿಂದ, ಸರ್ಕಾರದ ವತಿಯಿಂದ ಎಷ್ಟೆಷ್ಟು ನೆರವು ಪಡೆಯಬಹುದೆಂದು ಎಚ್ಚರಿಕೆಯಿಂದ ಲೆಕ್ಕಹಾಕಿ ನಡೆಯುತ್ತಾ ಊರಿನ ಜನರ ಮನಸ್ಸನ್ನು ಗೆಲ್ಲುತ್ತಿದ್ದಾರೆ. ಇದೇ ಚಾಕಚಕ್ಯತೆ ಪಕ್ಷದಲ್ಲೂ ಅವರ ವರ್ಚಸ್ಸನ್ನು ಕ್ರಮೇಣ ಹೆಚ್ಚಿಸುತ್ತಿದೆ.

ಈ ಬದುಕು ನಮಗೇನು ನೀಡುತ್ತದೆ ಎಂಬುದಕ್ಕಿಂತ ಅದನ್ನು ನಾವು ಹೇಗೆ ಗ್ರಹಿಸುತ್ತೇವೆ ಎಂಬುದೇ ಮುಖ್ಯವಲ್ಲವೇ?



# ಮೊಲೆ ಮೂಡಿ ಬಂದರೆ ಹೆಣ್ಣೆಂಬರು

ಎಚ್. ಎಸ್. ಶ್ರೀಮತಿ

ಈ ಹೊತ್ತಿನ ನಮ್ಮ ಸ್ತ್ರೀವಾದಿ ಚಿಂತನೆಗಳಿಗೆ ಕೆಲವು ಹೊಸ ಆಯಾಮಗಳನ್ನು ಕಾಣಿಸುವ ಒಂದಿಷ್ಟು ಟಿಪ್ಪಣಿಗಳನ್ನು ಇಲ್ಲಿ ಮಾಡಲಾಗಿದೆ. ಅಮೇರಿಕದ 'ಟೈಮ್ಸ್' ಪತ್ರಿಕೆಯಲ್ಲಿ ಬಂದ 'ದ ರಿಯಲ್ ಟ್ರೂಥ್ ಅಬೌಟ್‌ದ ಫೀಮೇಲ್ ಬಾಡಿ' ಎಂಬ ಲೇಖನ ಈ ಬರಹಕ್ಕೆ ಮುಖ್ಯ ಪ್ರೇರಣೆ. Woman - female, Sex- Gender ಎಂಬ ಹಲವು ಸೂಕ್ಷ್ಮಗಳಲ್ಲಿ ಆಧುನಿಕ ಸ್ತ್ರೀವಾದಿ ಚಿಂತನೆಗಳು ನಡೆದಿರುವಾಗ, ಕನ್ನಡದ ಮಟ್ಟಿಗಂತೂ ಇವಕ್ಕೆ ಸೂಕ್ತವೆನಿಸುವ ಯಾವ ಪದಗಳನ್ನು ಬಳಸಬಹುದು ಎಂಬ ಗೊಂದಲವೂ ನಿವಾರಣೆಯಾಗಿಲ್ಲ. ನಮ್ಮ ಚಿಂತನೆಗಳು ಸೂಕ್ಷ್ಮವಾದವುಗಳಲ್ಲ ಎಂಬುದು ನನ್ನ ಅರ್ಥವಲ್ಲ. ಆದರೆ ಸೂಕ್ತ ಪರಿಭಾಷೆಯನ್ನು ರೂಪಿಸಿಕೊಳ್ಳದೆ ಹಲವು ಸಮಾನ ಚಿಂತನೆಗಳೊಂದಿಗೆ ಮುಖಾಮುಖಿಯಾಗಿ ನಿಂತು ಸಂಕಥನವನ್ನು ಬೆಳೆಸುವುದು ತೀರಾ ಕಷ್ಟವಾಗಿ ಬಿಡುತ್ತದೆ. ಇಲ್ಲಿನ ಟಿಪ್ಪಣಿಗಳಲ್ಲೂ ಪರಿಭಾಷೆಯ ಸಮಸ್ಯೆ ಇದ್ದೇ ಇದೆ. ಈ ಬರೆಹದ ಸಂದರ್ಭಕ್ಕೆ ಸೂಕ್ತವೆಂದು ತೋರಿದಂತೆ ರೂಢಿಯಲ್ಲಿರುವ ಪರಿಭಾಷೆಯೊಂದಿಗೆ ಹೊಸ ಪದಗಳನ್ನು ರೂಪಿಸಿಕೊಳ್ಳುವ ಯತ್ನವನ್ನು ಮಾಡಲಾಗಿದೆ. ಅದೂ ಸಾಲದೆ ಬಂದಾಗ ಇಂಗ್ಲಿಷನ್ನೇ ಬಳಸಿದ್ದೇನೆ. ಈ ಪರಿಭಾಷೆಯ ಬಗೆಗಿನ ಚರ್ಚೆಯನ್ನು ಸದ್ಯಕ್ಕೆ ಮುಕ್ತವಾಗಿಟ್ಟುಕೊಳ್ಳಬಹುದು. ಆ ಮಾತಿರಲಿ.

## ಮಹಿಳೆ ಮತ್ತು ಹೆಣ್ಣು

ಮಹಿಳೆ ಅಥವಾ ಸ್ತ್ರೀ ಎಂದು ಕರೆಸಿಕೊಳ್ಳುವುದರಲ್ಲಿರುವ ಘನತೆ ಹೆಂಗಸು ಅಥವಾ ಹೆಣ್ಣು ಎಂದು ಕರೆಸಿಕೊಳ್ಳುವುದರಲ್ಲಿ ಕಡಿಮೆಯಾಗಿ ಬಿಡುತ್ತದೆ. ಇದು ಸಂಸ್ಕೃತ/ಕನ್ನಡ ಎಂಬ ಭಾಷಾ ತಾರತಮ್ಯಕ್ಕೆ ಸಂಬಂಧಿಸಿದ್ದು ಎಂದೇನಲ್ಲ. 'ಮಹಿಳೆ' ವ್ಯಕ್ತಿ ಎನಿಸಬಹುದಾದರೆ, 'ಹೆಣ್ಣು' ಅವಳ ದೇಹ ಲಕ್ಷಣಕ್ಕೆ ಪ್ರತಿನಿಧಿಯಾಗಬಹುದಾದಂಥದು. 'ಮಹಿಳೆ' ಗಣ್ಯಳು. ಮನೆತನ, ಅಧಿಕಾರ, ಸಾಮಾಜಿಕ ಸ್ಥಾನಮಾನಗಳನ್ನು ಪ್ರತಿನಿಧಿಸುವಾಕೆ. 'ಹೆಣ್ಣು' ಎಂದರೆ ತೀರಾ ನಗಣ್ಯಳು. ಮುಟ್ಟು, ಬಸಿರು, ಹೆರಿಗೆಗಳ ತಾಪತ್ರಯಗಳಲ್ಲಿ ರಕ್ತಹರಿಸುತ್ತಾ, ಮಾನವ ಸಂತತಿಯ ಪೈಕಿ ಅತಿ ಪುಟ್ಟದಾದ ಮೆದುಳಿನವಳೆನಿಸಿ, ಹಾಗಾಗಿ ಎರಡನೆಯ ದರ್ಜೆಯವಳಾಗಿರುವ ಮಾನವ ಪ್ರಾಣಿ. ಅರಿಸ್ಟಾಟಲನಿಂದ ಹಿಡಿದು ಫ್ರಾಯ್ಡನವರೆಗಿನ gender ಕುರಿತ ಎಲ್ಲ ಚಿಂತನೆಗಳೂ, ಜೀವ ವಿಕಾಸವಾಗಲು ತೊಡಗಿದ

ಅದ್ಭುತ ಮಥನದಲ್ಲಿ ಉದಿಸಿ ಬಂದದ್ದು ಏಕಮೇವ ಲಿಂಗ sex- ಅದು ಗಂಡು, ಹೆಣ್ಣಲ್ಲ - ಎಂಬುದನ್ನೇ ಪ್ರತಿಪಾದಿಸುತ್ತಾ ಬಂದಿದೆ.

ಜೀವವಿಜ್ಞಾನವಂತೂ ಮಾನವ ಸಂತತಿಯಲ್ಲಿ ಹೆಣ್ಣು ಗುಲಾಮಳು ಮಾತ್ರ ಎಂಬುದನ್ನು ಛಲ ಹಿಡಿದು ಹೇಳುತ್ತದೆ. ೬೦-೭೦ರ ದಶಕದ ಸಮಾಜೋ ಜೀವ ವಿಜ್ಞಾನಿಗಳೂ, ನಂತರ ೮೦ ರ ದಶಕದ ಜೀವವಿಕಾಸ ಮನೋವಿಜ್ಞಾನಿಗಳೂ ಈ ಹೆಣ್ಣು ತಳಿಯ ದರ್ಜೆಯನ್ನೇರಿಸುತ್ತೇವೆಂದರು. ಆದರೆ ಈ ಪ್ರಯತ್ನ ಮಾನವ ಜೀವವಿಕಾಸ ಸಿದ್ಧಾಂತಕ್ಕೆ ವ್ಯಭಿಚಾರದ ಬಣ್ಣ ಬಳಿಯುತ್ತಿದ್ದಾರೇನೋ ಎನ್ನುವಷ್ಟು ವಿಕಾರಕ್ಕೆ ತಿರುಗಿತು. ಏಕೆಂದರೆ ಈ ಚಿಂತನೆ 'ಇತಿಹಾಸ ಪೂರ್ವಯುಗದಲ್ಲಿ ಗಂಡು ಬೇಟೆಯಾಡುತ್ತಾ ಸ್ವಚ್ಛಂದವಾಗಿ ತಿರುಗುತ್ತಿದ್ದ. ಹೆಣ್ಣು ಇಂತಹ ಬೇಟೆಗಾರ ಗಂಡಿನ ಮೇಲೆ ಆಕ್ರಮಣ ನಡೆಸಿ ತನ್ನ ವಶದಲ್ಲಿರಿಸಿಕೊಂಡು ತನ್ನ ಲೈಂಗಿಕ ಅಗತ್ಯಗಳಿಗಾಗಿ ಬಳಸುತ್ತಿದ್ದಳು' ಎನ್ನುತ್ತದೆ. ಇಂದೂ ಕೂಡ ಮಾನವ ವಿಕಾಸದ ಚರಿತ್ರೆಯನ್ನು ಬಿಂಬಿಸುವ ಉದ್ದೇಶದ ಮ್ಯೂಸಿಯಂಗಳಲ್ಲಿ ಕೈಯಲ್ಲಿ ಬಿಲ್ಲುಬಾಣಗಳನ್ನು ಹಿಡಿದು ಬೇಟೆಯಾಡುತ್ತಿರುವ ಗಂಡುಗಳನ್ನೂ, ಬೆಂಕಿ ಕಾಯಿಸುತ್ತಾ ಮುದುರಿ ಕುಳಿತು ಮೊಲೆಯುಣಿಸುತ್ತಿರುವ ಹೆಣ್ಣುಗಳನ್ನೂ ಮಾದರಿಗಳಾಗಿ ಚಿತ್ರಿಸುವುದನ್ನು ಕಾಣಬಹುದು. ಪುರುಷ ಚಿಂತನೆಯ ಆಧುನಿಕ ಉದಾರನೀತಿಯು 'ಇಂಥ ಹೆಣ್ಣು ಇಂದು ಏನೆಲ್ಲವನ್ನೂ ಸಾಧಿಸಲು ಸಮರ್ಥಳಾಗುತ್ತಿದ್ದಾಳೆ' ಎಂದು ಚಕಿತಗೊಳ್ಳುತ್ತಲೇ 'ಏನಾದರೇನು, ಈ ಸಾಧನೆ ಮಾಡಬೇಕೆಂದರೆ ಅವಳು ತನ್ನೊಳಗಿನ ಹೆಣ್ಣನ್ನು ಇಲ್ಲವಾಗಿಸುವ ದುರಂತವಂತೂ ಇದ್ದೇ ಇದೆ.' ಎಂದು ವಿಷಾದವನ್ನೂ ವ್ಯಕ್ತಪಡಿಸುತ್ತದೆ.

'ಹೆಣ್ಣುತನ' ಎಂಬುದು ನಿಸರ್ಗದತ್ತ 'ಹೆಣ್ಣು ರಸಗ್ರಂಥಿಗಳ' ಫಲಿತವಾದ್ದರಿಂದ ಹೆಣ್ಣೆಂದರೆ ಇನ್ನೇನಾಗಲೂ ಸಾಧ್ಯವಿಲ್ಲ ಎಂಬ ತೀರ್ಪು ನೀಡುವ ಹಳೆಯ ಸಿದ್ಧಾಂತಗಳ ಬಗ್ಗೆ, ಹೊಸ ದೃಷ್ಟಿಕೋನದ ಸಂಶೋಧನೆಗಳು ಪ್ರಶ್ನೆಗಳನ್ನು ಕೇಳತೊಡಗಿವೆ ಎಂಬುದು ಆಶಾದಾಯಕವಾದ ಸಂಗತಿ. ಮಾನವ ಸಂತತಿಯ ಸಂದರ್ಭವನ್ನು gender ಆಧರಿಸಿ ವಿಭಜಿಸಿ ನೋಡುವ ಪ್ರವೃತ್ತಿಯನ್ನು ವಿರೋಧಿಸಲು ಈ ಚಿಂತನೆಗಳು ಆರಂಭಿಸಿವೆ. ಹೆಣ್ಣು ದೇಹದ ಋತುಚಕ್ರ, ಬಸಿರು, ಹೆರಿಗೆಗಳಂತಹ ಗುಣಲಕ್ಷಣಗಳನ್ನು ಅವಳ ದೌರ್ಬಲ್ಯಗಳೆಂದು ಗುರುತಿಸುವುದನ್ನು ಬಿಟ್ಟು, ಆ ಆವರ್ತಗಳೇ ಅವಳ ಶಕ್ತಿ ಸಂಕೇತಗಳು ಎಂದು ಒಪ್ಪಿಕೊಳ್ಳಲಾರಂಭಿಸಿವೆ. ಕೊನೆಗೆ ಅವಳ ಋತುಚಕ್ರ ಮುಕ್ತಾಯದ ಹಂತವನ್ನು ಕೂಡ 'ಅದು ಅವಳ ಶಕ್ತಿ ಸಾಧ್ಯತೆಗಳ ಕೊನೆಯಲ್ಲ, ಬದಲಿಗೆ ಅದು ಅವಳ ಶಕ್ತಿಸಾಧ್ಯತೆಯ ಹೊಸ ಹಂತ' ಎಂದೂ ಹೇಳುತ್ತದೆ. ಈವರೆಗೆ ವಿಕಾಸಸಿದ್ಧಾಂತದ ಮನೋವಿಜ್ಞಾನವು 'ಗಂಡು ಎಂದರೆ ಧೈರ್ಯದಿಂದ ಮುನ್ನುಗ್ಗುವ ಸ್ವಭಾವದ್ದು ಹಾಗೂ ಮುದ್ದಾದ ಪುಟಾಣಿ ಸಂಗತಿಗಳೆಂದರೆ ಆ ತಳಿಗೆ ತುಂಬಾ ಪ್ರಿಯ' ಎಂದು ವ್ಯಾಖ್ಯಾನಿಸುತ್ತಾ ಬಂದಿದೆ. ಇಂಥಾ ಶೋಧನೆಗಳು ತೀವ್ರ ಸವಾಲುಗಳನ್ನು ಇಂದು ಎದುರಿಸುತ್ತಿವೆ. ಶತಮಾನದ ಅಂಚಿನಲ್ಲಿ

ನಿಂತು ಇಂದು ನಾವು 'ಮಹಿಳಾ ವಿಮೋಚನೆ' ಎಂಬ ಚಿಂತನೆಗೆ ವಿದಾಯ ಹೇಳುತ್ತಾ 'ಹೆಣ್ಣಿನ ವಿಮೋಚನೆ' ಎಂಬ ಚಿಂತನೆಯನ್ನು ಅಪ್ಪಿಕೊಳ್ಳುತ್ತಿದ್ದೇವೋ ಏನೋ! 'ಹೆಣ್ಣು ಜೀವ' ವೆಂದರೆ ಮಾನವ ಸಂತತಿಯಲ್ಲಿ 'ಕೆಳದರ್ಜೆ' ಯ ತಳಿ ಎಂಬಂತೆ ಈವರೆಗೆ ನೀಡಿದ ವಿವರಣೆಯನ್ನು ಪಲ್ಲಟಗೊಳಿಸುತ್ತಾ, ಹೆಣ್ಣಿನ ಈಸ್ಟ್ರೋಜನ್ ರಸಗ್ರಂಥಿ, ಅವಳ ಅಂಡಾಶಯ, ಅವಳ ಮೆದುಳಿನ ಕಾರ್ಟೆಕ್ಸ್-ಇವೇ ಮೊದಲಾದವು ಅವಳ 'ಶಕ್ತಿ ಕೇಂದ್ರ' ಗಳು ಎಂದು ಹೇಳತೊಡಗಿವೆ.

## ಫೆಮಿನಿಸ್ಟ್ ಸಿದ್ಧಾಂತಗಳು

ಕನ್ನಡದಲ್ಲಿ ವಿವರಿಸಲು ಹೊರಟರೆ ಮತ್ತೆ ಪದಕೋಶದ ಸಮಸ್ಯೆ. ಈವರೆಗೆ ನಾವು 'ಫೆಮಿನಿಸ್ಟ್' ಎಂದರೆ 'ಸ್ತ್ರೀವಾದಿ' ಎಂದು ಬಳಸುತ್ತಿದ್ದೇವೆ. 'ದೇಹ ಕೇಂದ್ರಿತ' ವೆನ್ನುವಂತೆ ಬೆಳೆಯುತ್ತಿರುವ 'ಫೆಮಿನಿಸ್ಟ್ ' ಚಿಂತನೆಯನ್ನು 'ಸ್ತ್ರೀವಾದಿ' ಯಿಂದ ಬೇರೆಯಾಗಿ ಗುರುತಿಸದೆ ದಾರಿಯಿಲ್ಲ. ಇಂಗ್ಲಿಷಿನಲ್ಲಿ 'ಫೀಮೇಲಿಸ್ಟ್' ಎಂಬ ಪದದ ಬಳಕೆ ಇದೆ. ಇದನ್ನು ನಾವು 'ಹೆಣ್ಣು ವಾದಿ' ಎಂದರೆ ಸ್ವಲ್ಪ ಮುಜುಗರವಾಗಿ ಕೇಳಿಸಬಹುದೇನೋ. ಆದರೂ ಈವರೆಗಿನ gender ವ್ಯತ್ಯಾಸದ ಮೂಲತಂತ್ರ ಮುಖ್ಯವಾಗಿ 'ಸಂಸ್ಕೃತಿ ಚಿಂತನೆ' ಯಾಧಾರಿತವಾದದ್ದು, ಜೀನ್ಸ್ ಅಥವಾ ವಂಶವಾಹಿ ಸಂಗತಿಗಳ ನೆಲೆಯದ್ದಲ್ಲ ಎಂದು ವಿವರಿಸಬಹುದು. ಆಗ 'ವಂಶವಾಹಿ' ಯಂತಹ 'ವೈಜ್ಞಾನಿಕ' ಸಂಗತಿಗಳ ಬಗೆಗಿನ ಚಿಂತನೆಗಳನ್ನು 'ಸರಿಪಡಿಸಿ' ಪರಿಶೀಲಿಸುವುದೇ ಸಮಸ್ಯೆಯನ್ನು ಎದುರಿಸುವ ದಾರಿ ಎನ್ನಬೇಕಾಗುತ್ತಿದೆ. ಈವರೆಗಿನ 'ಫೆಮಿನಿಸ್ಟ್' ಚಿಂತನೆ 'ಸಮಾನತೆ'ಯ 'ಅವಕಾಶ' ವನ್ನು ಕುರಿತದ್ದಾಗಿದೆ. ಅಂದರೆ ರೂಢಿಯಲ್ಲಿರುವ 'ಸಾಮಾಜಿಕ ಚಿಂತನೆಗಳು' ಸ್ತ್ರೀ-ಪುರುಷರ ನಡುವೆ ಪೈಪೋಟಿಯನ್ನು ಸೃಷ್ಟಿಸಿ, ಈ ಪೈಪೋಟಿಯಲ್ಲಿ ಗೆಲ್ಲುವವರು ಪುರುಷರಾದ್ದರಿಂದ ಅವರೇ ಮಾನವ ಸಂತತಿಯಲ್ಲಿ ಶ್ರೇಷ್ಠರೆನ್ನಿಸುತ್ತಾರೆ ಎಂದು ತೀರ್ಮಾನಿಸಿಬಿಟ್ಟಿವೆ. ಆದರೆ ಈ ಪಂದ್ಯದ ನಿಯಮಗಳೇ ನ್ಯಾಯಬದ್ಧವಾಗಿಲ್ಲ. ಸಮಾನ ಅವಕಾಶಗಳನ್ನು ನಿರಾಕರಿಸಿ ಪುರುಷಪರವಾಗಿ ನಿಯಮಗಳನ್ನು ರೂಪಿಸಲಾಗಿದೆಯಾಗಿ ಈ ಆಟದ ನಿಯಮಗಳಲ್ಲಿ ಸೂಕ್ತ ಬದಲಾವಣೆಗಳನ್ನು ತರಬೇಕಾಗಿದೆ ಎಂಬುದು ಈವರೆಗಿನ ಸ್ತ್ರೀವಾದಿ ಚಿಂತನೆಯ ಮುಖ್ಯ ಎಳೆ. ಈ ಚಿಂತನ ನಿಜವಾಗಿಯೂ ಮಹಿಳೆಯ ವಿಮೋಚನೆಯ ದಾರಿಯನ್ನು ತೋರಬಹುದೇ ಎಂಬ ಬಗ್ಗೆ ಕೆಲವು ಪ್ರಶ್ನೆಗಳೇಳುತ್ತವೆ. ಏಕೆಂದರೆ ಅವಕಾಶಗಳನ್ನು 'ಗಳಿಸುವುದು' ಎಲ್ಲ ಮಹಿಳೆಯರಿಗೂ, ಎಲ್ಲ ದೇಶಕಾಲ ಹಾಗೂ ಸಂಸ್ಕೃತಿ ಪರಿಸರಗಳಲ್ಲೂ ಸಮಾನವಾಗಿ ಸಾಧ್ಯವಾಗಬಹುದಾದ ಕ್ರಿಯೆಯಾಗುವುದಿಲ್ಲ. ಅಂದಮೇಲೆ ಮಹಿಳೆಯರಲ್ಲೇ ಅನಗತ್ಯ ತಾರತಮ್ಯಗಳು ಉದ್ಭವಗೊಂಡು ಒಳ ಪೈಪೋಟಿಗೆ ದಾರಿಯಾಗುವ ಅಪಾಯವೇ ಇದೆ. ಹಾಗಾಗಿ ಈ ತಂತ್ರ 'ಮಹಿಳಾ ವಿಮೋಚನೆ'ಗೆ ದಾರಿಯನ್ನು ಹುಡುಕುತ್ತಾ ಹೊರಟದ್ದಾದರೂ ಸ್ವಯಂಕೃತ ಬಂಧನವೇ ಆಗಿ ಬಿಡಬಹುದು. ಹಾಗಾದರೆ 'ವಿಮೋಚನೆ'ಯ ದಾರಿಯನ್ನು ಹುಡುಕುವ

ಹೊಸತಂತ್ರವನ್ನು ನಾವೀಗ ರೂಪಿಸಬೇಕು. ಮಹಿಳೆಗೆ ನಮ್ಮ ಸಾಮಾಜಿಕ ಚಿಂತನೆಗಳು 'ಸಮಾನ ಅವಕಾಶ' ಗಳನ್ನು ನೀಡಿಲ್ಲ ಎಂಬುದನ್ನು ಪ್ರತಿಭಟಿಸುವ, ಅಂಥ ಅವಕಾಶಗಳನ್ನು 'ಗಳಿಸಲು' ಹೋರಾಡುವ ದಾರಿಯನ್ನು ಹೊಸ ಚಿಂತನೆಗಳು ಪ್ರಶ್ನಿಸುತ್ತಿವೆ.

ಹೆಣ್ಣು-ಗಂಡುಗಳ ಸಹಜ ಸಾಮರ್ಥ್ಯಗಳನ್ನು 'ವೈಜ್ಞಾನಿಕ' ಚಿಂತನೆಗಳು ಆಯಾ ತಳಿಗಳ ಗುಣಲಕ್ಷಣಗಳನ್ನಾಧರಿಸಿ ವ್ಯಾಖ್ಯಾನಿಸಿವೆ ಹಾಗೂ ಗಂಡು ತಳಿಯ ಲಕ್ಷಣಗಳನ್ನು ಗುಣಾತ್ಮಕವಾಗಿಯೂ, ಹೆಣ್ಣು ತಳಿಯುವನ್ನು ನೇತ್ಯಾತ್ಮಕವಾಗಿಯೂ ಪರಿಗಣಿಸಿ ಕ್ರಮವಾಗಿ ಸಶಕ್ತ-ಅಶಕ್ತ ಗುಂಪುಗಳೆಂದು ವಿಭಜಿಸಿ ತೀರ್ಮಾನಗಳನ್ನು ನೀಡಿವೆ. ಹೆಣ್ಣು, ಗಂಡು ತಳಿಗಳ ಗುಣಲಕ್ಷಣಗಳಲ್ಲಿ 'ವ್ಯತ್ಯಾಸ'ಗಳಿರುವುದೇನೂ ಸುಳ್ಳಲ್ಲ. ದೈಹಿಕ ಸಾಮರ್ಥ್ಯದಲ್ಲಿ ಮೇಲುನೋಟಕ್ಕೆ ಸಾಧಾರಣವಾಗಿ ಹೆಣ್ಣಿಗಿಂತ ಗಂಡು ಹೆಚ್ಚು ಬಲಶಾಲಿ ಎಂಬುದನ್ನು ನಿರಾಕರಿಸಲು ಕಾರಣಗಳಿಲ್ಲ. ತೂಕ, ಎತ್ತರ, ಶಕ್ತಿ ಎಲ್ಲದರಲ್ಲೂ ಅವನದೇ ಮೇಲುಗೈ. ಆದರೆ ದೇಹದ ಆಂತರಿಕ ಸಾಮರ್ಥ್ಯದ ಮಾತಿಗೆ ಬಂದರೆ ಇಲ್ಲಿ ಹೆಣ್ಣಿಗೇ ಗೆಲುವು, ದೇಹದ ಆಯಾಸವನ್ನು ಹೆಚ್ಚು ಹೊತ್ತು ತಡೆದುಕೊಳ್ಳುವ ಶಕ್ತಿ ಅವಳಲ್ಲೇ ಹೆಚ್ಚು. ಇತ್ತೀಚಿನ ಹಲವು ದಶಕಗಳಲ್ಲಿ ಮಹಿಳೆ ಕ್ರೀಡೆ, ಸೈನ್ಯ ವಿಭಾಗಗಳಂತಹ ಕ್ಷೇತ್ರಗಳಲ್ಲಿ ತೋರುತ್ತಿರುವ ಸಾಧನೆಗಳು ಅವಳ ಆಂತರಿಕ ಶಕ್ತಿ ಸಾಮರ್ಥ್ಯಗಳು ಪ್ರಕಟಗೊಳ್ಳಬಹುದಾದ ಸಾಧ್ಯತೆಗಳನ್ನು ಕುರಿತು ಸಾಕಷ್ಟು ಹೇಳುತ್ತಿವೆ. ಬರುವ ಶತಮಾನದಲ್ಲಿ ಗಂಡಿನ ಸಾಧನೆಗಳನ್ನು ಅತಿಕ್ರಮಿಸಿ ದಾಟುವ ಕುರುಹುಗಳನ್ನು ಅವಳು ತೋರುತ್ತಿದ್ದಾಳೆ.

ಗಂಡಿನಲ್ಲಿರುವ ಟೆಸ್ಟೋಸ್ಟರೋನ್, ಹೆಣ್ಣಿನಲ್ಲಿರುವ ಈಸ್ಟ್ರೋಜನ್ ರಸಗ್ರಂಥಿಗಳು ಆಯಾ ತಳಿಗಳನ್ನು ಪ್ರತ್ಯೇಕಿಸುವ ಮುಖ್ಯ ವೈಲಕ್ಷಣಗಳು ಎಂದು ಜೀವವಿಜ್ಞಾನ ಹೇಳುತ್ತಾ ಬಂದಿದೆ. ಆದರೆ ಬೆಳಕಿಗೆ ಬಂದಿರುವ ಹೊಸ ಶೋಧನೆಯೆಂದರೆ ಈ ಎರಡೂ ರಸಗ್ರಂಥಿಗಳೂ ಮಾನವ ಸಂತತಿಯ ಎರಡು ತಳಿಗಳಲ್ಲೂ ಇರುತ್ತವೆ. ಅಲ್ಲದೆ, ಈ ಪೈಕಿ ಈಸ್ಟ್ರೋಜನ್ ರಸಗ್ರಂಥಿಯೇ ಹೆಚ್ಚು ಚಟುವಟಿಕೆಯದು. ಸದಾಕಾಲ ದೇಹದ ಪ್ರತಿಯೊಂದು ಜೀವಕಣದೊಂದಿಗೂ ಪ್ರತಿಕ್ರಿಯೆಯಲ್ಲಿ ತೊಡಗಿರುವಂಥದು. ಜೀವಕಣಗಳೂ ಕೂಡ ಈ 'ಹೆಣ್ಣು' ರಸಗ್ರಂಥಿಗಳಿಗಾಗಿ ಪರಿತಪಿಸುತ್ತವೇನೋ. ಈ ರಸಗ್ರಂಥಿಯ ಕೊರತೆ ಗಂಡುಗಳಲ್ಲಿ 'ಪುರುಷತ್ವ' ದ ಕೊರತೆಗೂ, ಆಸ್ಟಿಯೋಪೋರೋಸಿಸ್ ಎಂಬ ಕಾಯಿಲೆಗೂ ಕಾರಣವಾಗಬಹುದು. ಹೆಣ್ಣು ಟೆಸ್ಟೊಸ್ಟೆರೋನ್ ರಸಗ್ರಂಥಿಯನ್ನು ಸ್ರವಿಸುವುದು ಲೈಂಗಿಕ ಚೋದನೆಗೆ ಅಗತ್ಯ. ಸಾಮಾನ್ಯವಾಗಿ ಗಂಡುಗಳಲ್ಲಿ ಟೆಸ್ಟೋಸ್ಟೆರೋನ್ ಪ್ರಧಾನವಾಗಿ, ಹೆಣ್ಣುಗಳಲ್ಲಿ ಈಸ್ಟ್ರೋಜನ್ ಪ್ರಧಾನವಾಗಿ ಇರುತ್ತದೆ ಎಂಬುದು ಒಂದು ಲಕ್ಷಣ ಎಂದ ಮಾತ್ರಕ್ಕೆ ಅವೆರಡರಲ್ಲಿ ಯಾವುದು ಶಕ್ತಿಯುತವಾದದ್ದು ಎಂಬ ತೀರ್ಮಾನವೇನೂ ಸಾಧ್ಯವಿಲ್ಲ.

ಎರಡೂ ಸೆಕ್ಸ್‌ಗಳಲ್ಲಿ ಕೆಲವು ಆದಿಭೌತಿಕ ದೇಹ ಲಕ್ಷಣಗಳಿರುವುದು ನಿಜ. ಆದರೆ ಯಾವ 'ಸೆಕ್ಸ್'ನ ಅಧಿಕಾರ ಚಲಾವಣೆ ನಡೆಯಬೇಕು ಎಂಬುದನ್ನೇನೂ ಇವು

ನಿರ್ಧರಿಸುವುದಿಲ್ಲ. ಹೆಣ್ಣಿನ ದೇಹರಚನೆಯೇ ಸಾಮಾಜಿಕ ಅಗತ್ಯಗಳನ್ನು ಪೂರೈಸುವ ಉದ್ದೇಶದ್ದು. ಅವಳ ಗರ್ಭಾಶಯ ಪ್ರತಿ ತಿಂಗಳೂ ಶಿಶುವೊಂದಕ್ಕೆ ಆಶ್ರಯತಾಣವಾಗುವೆ ಎನ್ನುವ ನಿರೀಕ್ಷೆಯಿಂದ ಸಜ್ಜಾಗುತ್ತದೆ. ಆ ಮಗುವಿಗೆ ಮುಂದೆ ಸೂಕ್ತ ಆಹಾರವನ್ನೊದಗಿಸುವ ಸಿದ್ಧತೆಯಲ್ಲಿ ಅವಳ ಎದೆ ತುಂಬಿ ನಿಲ್ಲುತ್ತದೆ. ಹೆಣ್ಣಿನ ಕಣಕಣವೂ ಸಮುದಾಯದ ಹಿತಚಿಂತನೆಯಲ್ಲಿರುತ್ತದೇನೋ. ಹೆಣ್ಣುತಳಿ ತಾನೊಮ್ಮೆ ಸ್ವೀಕರಿಸಿದ ಭ್ರೂಣಕೋಶಗಳನ್ನು ಮಗುವಿನ ಜನನದ ನಂತರದ ಎಷ್ಟೋ ದಶಕಗಳವರೆಗೂ ಕೂಡ ತನ್ನ ರಕ್ತಧಾರೆಯಲ್ಲಿ ಜೀವ ಸಹಿತ ಕಾದಿಡಬಲ್ಲದು. ಇಂಥವನ್ನು ಹೆಣ್ಣಿಗೊಂದು ಹೊರೆ ಎನ್ನಬಹುದೇ, ಅಥವಾ ಅವಳ ಸಾಮರ್ಥ್ಯದ ಪರಿ ಎನ್ನಬಹುದೇ? ಋತುಚಕ್ರದ ಆರಂಭ ಮುಜುಗರದ, ಅವಹೇಳನದ, ದುಃಖದ ಸಂಗತಿಯೋ ಎಂಬಂತೆ ಸಂಶೋಧನೆಗಳು ಹೇಳುತ್ತಾ, ಈ ಸಂದರ್ಭವನ್ನು ಹೆಣ್ಣು ಅಳುಮುಖದಿಂದ ಎದುರಿಸಬೇಕೆಂಬಂತೆ ಮಾಡಿಟ್ಟಿವೆ. ವಾಸ್ತವದಲ್ಲಿ ಈ ಅನುಭವ ಹೆಣ್ಣಿಗೆ ತನ್ನ ಅಸ್ಮಿತೆಯನ್ನು ಗುರುತಿಸಿಕೊಳ್ಳುವ ಮುಖ್ಯ ಕಾರಣವಾಗಬೇಕು. ಸಾಮಾಜಿಕವಾಗಿ ಆರೋಪಿತವಾದ ಮನೋಭಾವದಿಂದ ಹೊರಬಂದರೆ, ಹೆಣ್ಣು ತನ್ನ ದೇಹದ ಈ ಅನುಭವ ತನಗೆ ಆನಂದವನ್ನೂ, ಹೊಸ ಚೇತನವನ್ನೂ, ಪ್ರಬುದ್ಧತೆಯನ್ನೂ. ಸ್ವಸ್ಥತೆಯನ್ನೂ ನೀಡುತ್ತಿದೆ ಎಂಬುದನ್ನು ಗುರುತಿಸುವುದು ಸಾಧ್ಯ.

ಹಾಗೆಯೇ ಋತುಚಕ್ರವು ಕೊನೆಗೊಳ್ಳುವ ಹಂತವನ್ನೂ ಅಪವ್ಯಾಖ್ಯಾನ ಮಾಡುತ್ತಾ ಪ್ರೌಢಹೆಂಗಸಿನ ಮನಸ್ಥಿತಿಯನ್ನು ಹದಗೆಡಿಸಲಾಗುತ್ತಿದೆ. ಈ ಹಂತ ಹೆಣ್ಣು ಎದುರಿಸಬೇಕಾಗಿರುವ ದೊಡ್ಡ ದುರಂತ ಎಂಬಂತೆ ಸಾಮಾಜಿಕ ಚಿಂತನೆಗಳು ಪ್ರವರ್ತಿಸುತ್ತಾ ಅವಳನ್ನು ಪರದಾಟಕ್ಕೆ ಸಿಲುಕಿಸುತ್ತವೆ. ಅವಳೊಬ್ಬ ಮನೋರೋಗಿಯೇ ಎಂದು ಅವಳನ್ನೇ ಒಪ್ಪಿಸತೊಡಗುತ್ತವೆ. ಇಂಥ ಸಾಮಾಜಿಕ ಆಭಾಸಗಳನ್ನು ಗೆಲ್ಲುವ ದಾರಿಗಳನ್ನೀಗ ನಾವು ರೂಪಿಸಿಕೊಳ್ಳಬೇಕಾಗಿದೆ. ಈವರೆಗೆ ಮೂಲಭೂತವಾದ 'ಸಾಮಾಜಿಕ ಅಗತ್ಯ'ವನ್ನು ನನ್ನ ಋತುಚಕ್ರ ಪೂರೈಸಿದೆ, ಇದೀಗ 'ಸ್ವಂತ ಹಿತ' ದ ಕಡೆಗೆ ಗಮನಕೊಡುವ ಬಗ್ಗೆ ನನ್ನ ದೇಹ ನಿರ್ಧರಿಸಿದೆ ಎಂದು ಈ ಹಂತವನ್ನು ಮಹಿಳೆ ಪರಿಭಾವಿಸತೊಡಗಿದರೆ ಬದುಕಿನ 'ಹೊಸ ಅಧ್ಯಾಯ'ವೆಂದು ಇದನ್ನು ಸ್ವಾಗತಿಸುವುದು ಸಾಧ್ಯ.

ಅಂದರೆ, ಸಮಾನ ಅವಕಾಶಕ್ಕಾಗಿ ಹಾತೊರೆಯುವ, ಅದನ್ನು 'ಗಳಿಸಿ' ಈಗಿನ 'ಬಂಧನ' ದಿಂದ 'ವಿಮೋಚನೆ' ಪಡೆಯುವ ಹೋರಾಟದ ಹಾದಿಗಿಂತ, ನಮ್ಮ ಅಸ್ಮಿತೆಯನ್ನು ಗುರುತಿಸಿಕೊಳ್ಳುವ, ಈ ಅಸ್ಮಿತೆಯೇ ನಮ್ಮ ನಿಜವಾದ ಶಕ್ತಿ ಎಂದು ಸ್ಥಾಪಿಸುವ ಹಾದಿಯೇ ಹೆಚ್ಚು ಸುಸಂಗತವಾದದ್ದು. ಹೆಣ್ಣು ಗಂಡುಗಳಲ್ಲಿ ವ್ಯತ್ಯಾಸಗಳಿವೆ ಎಂಬುದೊಂದು ವಾಸ್ತವ. ಒಪ್ಪೋಣ. ಆದರೆ ಗಂಡು ಲಕ್ಷಣಗಳನ್ನು ಶ್ರೇಷ್ಠವೆಂದು ನಿರ್ಧರಿಸುವ ಅಥವಾ ಹೆಣ್ಣು ಲಕ್ಷಣಗಳನ್ನು ಕುಂದು ಕೊರತೆಗಳೆಂದೋ ರೋಗದ ಬಗೆಗಳೆಂದೋ ಗುರುತಿಸಲು ಯಾವ ಕಾರಣಗಳೂ ಇಲ್ಲ. ಹೆಣ್ಣು ಎಂದರೆ ಸೆಕೆಂಡ್‌ಸೆಕ್ಸ್ ಅಥವಾ ಎರಡನೆಯ ದರ್ಜೆಯ ತಳಿ ಎಂದಲ್ಲ. ಅವಳು ಗಂಡಿಗಿಂತ ವಿಭಿನ್ನ ಅಥವಾ ಸೆಪರೇಟ್ ಸೆಕ್ಸ್ ಅಷ್ಟೇ.

## ಜೀವವಿಕಾಸ ಸಿದ್ಧಾಂತದ ಮರು ವಿವೇಚನೆ

ನಮ್ಮ ಅಸ್ಮಿತೆಯನ್ನು ಸಾಧಿಸಲು ದೇಹದ ಆಂತರಿಕ ಸಾಮರ್ಥ್ಯಗಳನ್ನು ಪುರಸ್ಕರಿಸುವ ಬಗೆಯಲ್ಲಿ ಸಮಸ್ಯೆಗಳಿಲ್ಲವೆಂದಲ್ಲ. ದೇಹಲಕ್ಷಣಗಳನ್ನು ಎತ್ತಿ ಹಿಡಿಯುತ್ತಾ ಗಂಡಿನ ಅಹಂಕಾರವನ್ನೇ ಪೋಷಿಸುವಂತಾಗದೇ, ಅವನೆದುರು ಮರ್ಯಾದೆಯನ್ನೂ ಸ್ವಂತಿಕೆಯನ್ನೂ ಬಿಟ್ಟುಕೊಟ್ಟಂತೆ ಆಗಲಾರದೇ ಎಂಬ ಪ್ರಶ್ನೆಗಳು ಏಳಬಹುದು. ಜೀವ ವಿಕಾಸ ಸಿದ್ಧಾಂತವು ಗಂಡು ನಿಸರ್ಗದ ಹುಟ್ಟು ಬೇಟೆಗಾರ, ಹೆಣ್ಣು ಅವನ ಒಂದು ಸಾಧನ ಮಾತ್ರ ಎಂದು ಹೇಳಿತೆಂಬುದು, ಪುರುಷ ಸ್ವಾಮ್ಯದ ಸಮಾಜದಲ್ಲಿ ಜನಪ್ರಿಯವಾಗಿದ್ದು ಸಹಜವೇ. ಸ್ತ್ರೀವಾದಿ ಚಿಂತಕಿಯರು ಇದನ್ನು ಪ್ರತಿಭಟಿಸಿ ಜೀವವಿಜ್ಞಾನ ಎಂಬುದು ಸೆಕ್ಸಿಸ್ಟ್ ಚಿಂತನೆಯೇ ಹೊರತು ವಿಜ್ಞಾನವಲ್ಲ ಎಂದದ್ದೂ ಸಕಾರಣವಾದದ್ದೇ. ಸ್ತ್ರೀದಮನಕಾರಿ ಪುರುಷರಿಗೆ ಹೊಸತೊಂದು ಆಯುಧವನ್ನೊದಗಿಸಿದ ಒಬ್ಬ ಪುರುಷನಷ್ಟೇ ಎಂದು ಡಾರ್ವಿನ್ ಕುರಿತು ತಮ್ಮ ಸಿಟ್ಟನ್ನು ಫೆಮಿನಿಸ್ಟ್ ಚಿಂತಕಿಯರು ಪ್ರಕಟಿಸಿದರು. 'ಮಹಿಳೆಯರು ಇಂತಹ ಜೀವವಿಜ್ಞಾನ ಚಿಂತನಾಕ್ರಮಗಳನ್ನು ಲಕ್ಷಿಸಲು ಹೋಗಬಾರದು, 'ವೈಜ್ಞಾನಿಕ' ಚಿಂತನೆಗಳಾದ್ದರಿಂದ ಪ್ರಶ್ನಿಸಲು ಸಾಧ್ಯವಿಲ್ಲ ಎಂಬ ಭ್ರಮೆಗಳಿಂದ ಹೊರಬರಬೇಕು' ಎಂದು ಆಗ್ರಹ ಪಡಿಸಿದರು.

ಇಷ್ಟಾದರೂ ಇಂಥಾ ಅಪವಿಜ್ಞಾನಕ್ಕೆ ಮದ್ದು ಮಾಡಲು ಇನ್ನಷ್ಟು ವಿಜ್ಞಾನವನ್ನೇ ಬಳಸಬೇಕಾಗುತ್ತದೆ. ಮಾನವ ಜೀವವಿಕಾಸದ ಕತೆಯಲ್ಲೇ ಹೊಸ ಹೊಸ ಬಗೆಯ ಅಲೆಗಳೇಳತೊಡಗಿವೆ. 'ಗಂಡು ಸಹಜ ಬೇಟೆಗಾರ'ನೆಂಬ ಸಿದ್ಧಾಂತ ಮೇಲುನೋಟದಲ್ಲೇ ಹಲವು ಸಂದೇಹಗಳಿಗೆ ಸಿಲುಕುತ್ತದೆ. ಒಂದು ಸಂತಾನದ ಎರಡು ತಳಿಗಳನ್ನು 'ಶ್ರೇಷ್ಠತೆ'ಯ ಸೂಚಕದೊಂದಿಗೆ ಪ್ರತ್ಯೇಕಿಸುವ ವಿಜ್ಞಾನದ ಈ ಮಾತು ನಿಜವೇ ಆದರೆ, ಈ ವೇಳೆಗೆ ಗಂಡಸರು ಹೆಂಗಸರಿಗಿಂತ ಅತೀವ ಹೆಚ್ಚಳ ಸಂಖ್ಯೆಯಲ್ಲಿರಬೇಕಿತ್ತು. ಆದರೆ ಆ ಪ್ರಮಾಣ ಹೆಚ್ಚು ಕಡಿಮೆ ಸರಿಸಮಾನದಷ್ಟಿದೆ. ದುರ್ಬಲ ಹಾಗೂ ಅವಲಂಬಿತ ಸೆಕ್ಸ್ ಎನಿಸಿದ ಹೆಣ್ಣನ್ನು ಮಕ್ಕಳು ಮರಿಗಳನ್ನು ಕಾಯುತ್ತಾ ಕೂರಲು ವಾಸಸ್ಥಾನಗಳಲ್ಲೇ ಬಿಟ್ಟು ಗಂಡು ಬೇಟೆಗಾಗಿ ಹೊರಟು ಹೋಗುತ್ತಿದ್ದನಂತೆ. ಈ ಹೆಣ್ಣುಗಳು ಗಂಡುಗಳು ಹಿಂತಿರುಗಿ ಬರುವುದರ ಪ್ರತೀಕ್ಷೆಯಲ್ಲಿ ಇರುತ್ತಿದ್ದರಂತೆ. ಶಕ್ತ ಗಂಡಸರು ದುರ್ಬಲ ಹೆಂಗಸರ ಮೇಲೆ ಕಾಡು ಪ್ರಾಣಿಗಳ ಧಾಳಿಯಂತಹ ಅನೇಕ ಪ್ರಕೃತಿ ವಿಕೋಪಗಳನ್ನು ಎದುರಿಸುತ್ತಾ ಸಂತತಿಯ ರಕ್ಷಣೆ ಮಾಡಬೇಕಾದಂತಹ ಹೊಣೆಗಾರಿಕೆಯನ್ನು ಹೇಗೆ ತಾನೇ ಹೊರಿಸುತ್ತಿದ್ದರು? ಮಾನವ ಸಂತತಿಗೆ ಮೂಲನೆಲೆಯ ಕಲ್ಪನೆ ಹುಟ್ಟಿತಾಗಿ ಶ್ರಮವಿಭಜನೆಯ ಕಲ್ಪನೆಯೂ ಅನಿವಾರ್ಯವಾಯಿತು. ಇದು ಮಾನವ ತನ್ನ ಬುದ್ಧಿವಂತಿಕೆಯಿಂದ ರೂಪಿಸಿಕೊಂಡ ಸಂರಚನೆ. ಹಾಗಲ್ಲದೆ ಇದು ನಿಸರ್ಗ ಸಹಜವೇ ಆಗಿದ್ದಿದ್ದರೆ ನಮ್ಮ ದಾಯಾದಿ ಜೀವಸಂತತಿಗಳಲ್ಲೂ ಈ ಲಕ್ಷಣಗಳು ಕಾಣಿಸಬೇಕಿತ್ತು. ಉಳಿದ ಕಪಿ ಸಂತತಿಗಳಲ್ಲಿ ಇಂದಿಗೂ ಶ್ರಮವಿಭಜನೆಯ ಕ್ರಮವೇನಿಲ್ಲ. ಏನಿದ್ದರೂ ಗಂಡು ಹೆಣ್ಣುಗಳು ಒಟ್ಟೊಟ್ಟಿಗೆ ಗುಂಪುಗಳಲ್ಲಿ ಸಂಚರಿಸುತ್ತವೆ.

ಜೀವವಿಕಾಸ ಸಿದ್ಧಾಂತದ ಈ ಪುರುಷಕೇಂದ್ರಿತ ಚಿಂತನೆಯನ್ನು ಎಪ್ಪತ್ತರ ದಶಕದ ಮಹಿಳೆಯರು ಪ್ರಶ್ನಿಸತೊಡಗಿದರು. ಬೇಟೆಗಾರ ಜೀವಸಂತತಿ ಎನಿಸಿಯೂ ಮಾನವ ಸಮುದಾಯ ಒಟ್ಟಾರೆಯಲ್ಲಿ ಮಾಂಸಕ್ಕಿಂತ ಸಸ್ಯಮೂಲದಿಂದಲೇ ತನ್ನ ಆಹಾರದ ಅಗತ್ಯಗಳನ್ನು ಪೂರೈಸಿಕೊಳ್ಳಬೇಕಾಗುತ್ತಿತ್ತು ಎಂಬುದಕ್ಕೆ ಉತ್ಖನನಗಳು ಸಾಕ್ಷಿಗಳನ್ನು ತೋರಿಸುತ್ತವೆ. ಮೂಲನೆಲೆಗಳಲ್ಲಿ ಉಳಿದು ಸಸ್ಯ ಮೂಲದ ಆಹಾರ ಸಂಗ್ರಹ ಮಾಡುತ್ತಿದ್ದವರು ಹೆಂಗಸರು. ಬೇಟೆಯ ಶೌರ್ಯವನ್ನು ತೋರಿ ಗಂಡಸರು ತರುತ್ತಿದ್ದ ಮಾಂಸಾಹಾರ ಸಮುದಾಯದ ಹೊಟ್ಟೆಗೆ ಸಾಕಾಗುವಷ್ಟೇನೂ ಇರುತ್ತಿರಲಿಲ್ಲ. ಮಾನವ ಸಂತತಿಗೆ ತುತ್ತು ಕೊಟ್ಟು ಸಂಗೋಪನ ಮಾಡಿದವಳು ತಾಯಿಯೇ. ಸ್ವಂತ ರಕ್ಷಣೆಯ ಮಾತು ಬಂದರೆ ಗಂಡಿಗಿಂತಲೂ ಹೆಣ್ಣೇ ಹೆಚ್ಚು ಸ್ವಾವಲಂಬಿ.

ಅಂದಾಕ್ಷಣಕ್ಕೆ ಇವಳು ಎಂದೂ ಹೊರಗಿನ ನೆರವನ್ನು ಪಡೆಯಲೇ ಇಲ್ಲವೆಂದಲ್ಲ. ಹೆರಿಗೆ, ಬಾಣಂತನದಂತಹ ಸಂದರ್ಭಗಳಲ್ಲಿ ನೆರವು ಅಗತ್ಯವಾಗಿರಬೇಕು. ಮೊಲೆಯುಣಿಸುವ ಕ್ರಿಯೆ ತೀರಾ ಸರಳವಾದುದೆನಿಸಬಹುದು. ಆದರೆ ಈ ಕ್ರಿಯೆಗೆ ಅವಳು ಕನಿಷ್ಠ ದಿನವೊಂದಕ್ಕೆ ಐದುನೂರು ಕ್ಯಾಲೋರಿಗಳನ್ನು ವ್ಯಯಮಾಡಬೇಕು. ಹೆಚ್ಚೂ ಕಡಿಮೆ ಎಂಟು ಕಿ. ಮೀ.ಗಳಷ್ಟು ನಡಿಗೆಗೆ ಬೇಕಾಗುವ ಶಕ್ತಿ ಇದು. ಇಂತಹ ಹೆಚ್ಚುವರಿ ಸಂದರ್ಭಗಳಲ್ಲಿ ಅವಳಿಗೆ ಯಾರು ನೆರವಾಗುತ್ತಿದ್ದರು? ಗಂಡಸು ಹೆಂಗಸಿನ ರಕ್ಷಕನೆಂಬ ಸಿದ್ಧಾಂತವನ್ನು ಇಲ್ಲಿ ಎಷ್ಟು ಅನ್ವಯಿಸಬಹುದು? ಅಥವಾ ಅವಳು ಅದನ್ನು ಹೇಗೆ ನಿರ್ವಹಿಸುತ್ತಿದ್ದಳು ಎಂಬ ಇನ್ನೊಂದು ಮುಖವನ್ನು ಈ ಕತೆ ಮರೆಮಾಚುತ್ತದೆ. ಇನ್ನು ಋತುಚಕ್ರದ ಹಂತವನ್ನು ದಾಟಿದ ಮಹಿಳೆಯ ಅಸ್ತಿತ್ವಕ್ಕೆ ನಿಸರ್ಗ ಮೂಲದ ಕಾರಣವೇನು ಎಂಬ ಮಾತು. ಸಂತಾನಧಾರಣೆ, ಸಂಗೋಪನೆಗಳಷ್ಟೇ ನಿಸರ್ಗ ಹೆಣ್ಣಿಗೆ ನಿಯುಕ್ತಗೊಳಿಸಿರುವ ಕೆಲಸಗಳು ಎನ್ನುವುದಾದರೆ, ಋತುಚಕ್ರದ ಕೊನೆಯೊಂದಿಗೆ ಹೆಣ್ಣಿನ ಜೀವನವೂ ಮುಗಿದುಹೋಗಬೇಕು. ನಿಯುಕ್ತ ಜವಾಬ್ದಾರಿ ಇಲ್ಲದ ಜೀವದ ಬಗ್ಗೆ ನಿಸರ್ಗಕ್ಕೆ ದಾಕ್ಷಿಣ್ಯವೆಂಥದೂ ಇರುವುದಿಲ್ಲ. ಆದರೆ ಹೆಂಗಸು ಸಂತಾನವನ್ನು ಹೆರುವ, ಸಂಗೋಪನ ಮಾಡುವ ಜವಾಬ್ದಾರಿಗಳನ್ನು ಮುಗಿಸಿದ ಮೇಲೂ ಹಲವು ದಶಕಗಳವರೆಗೆ ಜೀವಿಸಿರುತ್ತಾಳೆ. ಅವಳ ಗರ್ಭಾಶಯ ಮಾತ್ರ ನಿವೃತ್ತಿ ಪಡೆಯುತ್ತದಷ್ಟೆ. ಜೀವ ವಿಕಾಸ ಸಿದ್ಧಾಂತವು 'ತರುಣಿಯರು ಹೊಸದಾಗಿ ತಾಯಂದಿರಾಗುತ್ತಾ ಹೋದಂತೆ ಈ ಅಜ್ಜಿಯರು ಸ್ವಲ್ಪ ಬೆಳೆದ ಮಕ್ಕಳ ಪಾಲನೆಗೆ ಅಗತ್ಯವಾಗುತ್ತಿದ್ದರು' ಎಂದು ವಾದ ಮಾಡಬೇಕಷ್ಟೆ.

ಹಾಗಾದರೆ ಋತುಚಕ್ರದ ನಂತರದಲ್ಲಿ ಹೆಣ್ಣಿನ ಬದುಕಿನ ಗುರಿಯಾದರೂ ಏನು? ಸಂತಾನವನ್ನು ಹೆರುವ ಕ್ರಿಯೆ ಮುಗಿದ ಮೇಲೂ ಸಮುದಾಯದ ಬದುಕಿನಲ್ಲಿ ಈ 'ಅಜ್ಜಿ'ಯರು ನಿರುಪಯುಕ್ತರೇನೂ ಆಗಿ ಬಿಡುವುದಿಲ್ಲ. ಹೆಚ್ಚಿದ ಆರೋಗ್ಯ ಮತ್ತು ಪ್ರೌಢತೆಗಳಿಂದ ಕೂಡಿದ ಅವರು ಈಗ ಸಂತತಿ ರಕ್ಷಣೆಗೆ ಹೊಸ ವೈವಿಧ್ಯದ ಕೊಡುಗೆ ನೀಡಬಲ್ಲ ಸಮರ್ಥರಾಗುತ್ತಾರೆ.

ಉದಾಹರಣೆಗೆ ಶಿಲಾಯುಗದಲ್ಲಿ 'ಪುರುಷನೇ ಬೇಟೆಗಾರನಾಗಿದ್ದ' ಎಂಬ ಸಿದ್ಧಾಂತವನ್ನು ಗಮನಿಸಿ. ಈ ಸೈದ್ಧಾಂತಿಕ ತೀರ್ಮಾನ ಎಂಬುದು ವಾಸ್ತವದಲ್ಲಿ ಒಂದು ಪ್ರಮೇಯ ಮಾತ್ರ. 'ಬೇಟೆ'ಯಲ್ಲಿ ಗದ್ದಲ ಸಲ್ಲದು. ಹೆಂಗಸರನ್ನು ಜೊತೆಗೊಯ್ದರೆ ಮಕ್ಕಳೂ ಬರಬೇಕಾದ್ದೇ. ಈ ಒಟ್ಟು ಗದ್ದಲ 'ಬೇಟೆ'ಯನ್ನು ಸಾಧ್ಯವಾಗಿಸುವುದಿಲ್ಲ. ಎಂದರೆ 'ಬೇಟೆಗಾರ ಗಂಡಸು' ತಾನೊಬ್ಬನೇ ಬೇಟೆಯಾಡುತ್ತಿದ್ದ ಎಂಬ ಪ್ರಮೇಯ. ಇದು ಯಾವುದೋ ಒಂದು ಬಗೆಯ ಬೇಟೆಯನ್ನಷ್ಟೇ ಹೇಳುತ್ತದೆ. 'ಗುಂಪುಬೇಟೆ'ಯ ವಿಧಾನದಲ್ಲಿ ಸದ್ದುಗದ್ದಲಗಳು ಅನುಕೂಲಕರವೇ ಆಗಿರುತ್ತದೆ. ಶಿಲಾಯುಗದಲ್ಲೂ 'ಗುಂಪುಬೇಟೆ' ಇತ್ತೆಂಬುದಕ್ಕೆ ಸಾಕಷ್ಟು ಪುರಾವೆಗಳು ದೊರಕದೆ ಈ ಮಾತನ್ನು ಪುರಸ್ಕರಿಸಲು ಕಷ್ಟವೆನಿಸಿತ್ತು. ಇಪ್ಪತ್ತೈದು ಸಾವಿರ ವರ್ಷಗಳಷ್ಟು ಹಿಂದೆ 'ಗುಂಪು ಬೇಟೆ'ಯ ವಿಧಾನದಲ್ಲಿ ಬಳಸುತ್ತಿದ್ದಿರಬಹುದಾದ ಬಲೆಯಂತಹುದೊಂದರ ಕುರುಹುಗಳನ್ನು ಓಲ್ಗಾ ಸಾಫರ್ ಎಂಬಾಕೆ ಗುರುತಿಸಿ ಇದನ್ನು ಉತ್ತರಿಸಿದಳು. ಬಲೆ ಬೀಸಿ ಬೇಟೆಯಾಡುವ ಗುಂಪು ಕ್ರಿಯೆಯಲ್ಲಿ ಗಂಡಸಿನ ಶೌರ್ಯ ಮಾತ್ರ ಇರುತ್ತಿರಲಿಲ್ಲ, ಅಲ್ಲಿ ಹೆಂಗಸರು ಮಕ್ಕಳು ಎಲ್ಲರೂ ಪ್ರಧಾನ ಪಾತ್ರವನ್ನೇ ವಹಿಸುತ್ತಿದ್ದರು. ಹೆಂಗಸು ತಾನೊಬ್ಬಳೇ ಬೇಟೆಯಾಡಲು ಹೋಗುತ್ತಿದ್ದ ಸಂದರ್ಭಗಳಿಗೂ ಸಾಕ್ಷಿಗಳು ಇವೆ ಎಂದ ಮೇಲೆ 'ಗಂಡಸು- ಬೇಟೆಗಾರ' ಎಂಬ ಸಿದ್ಧಾಂತ ಕೇವಲ ಪುರುಷ ಪಕ್ಷಪಾತದ ಚಿಂತನೆ ಮಾತ್ರವೆನಿಸುತ್ತದೆ. ಪ್ರಾಚೀನ ಹೆಣ್ಣು ದೇವತೆಗಳೆಲ್ಲರೂ ಕಾಡು ಪ್ರಾಣಿಗಳನ್ನು ಸ್ವಾಧೀನ ಪಡಿಸಿಕೊಂಡು ಮೆರೆಯುವ ಬೇಟೆಗಾರ್ತಿಯರೇ. ಜೀವವಿಕಾಸದ ಕತೆಯಲ್ಲಿ ಮಾನವ ಸಂತತಿಯ ಹೆಣ್ಣು ತಳಿಯ ಪಾತ್ರವನ್ನು ಇವು ಸ್ಪಷ್ಟವಾಗಿ ನಿರೂಪಿಸುತ್ತವೆ.

## ಸ್ತ್ರೀ ಪುರುಷ ಪಾತ್ರಗಳ ಪುನರ್ ಮೌಲ್ಯಮಾಪನ

ಇದನ್ನೇ ಬೆಳೆಸಿ ಹೆಣ್ಣೇ ಬೇಟೆಗಾರ್ತಿ, ಗಂಡೇನಿದ್ದರೂ ಸೋಮಾರಿ ಮೂಳ ಎಂಬ ಸಿದ್ಧಾಂತವನ್ನೇನೂ ಇಲ್ಲಿ ಮಂಡಿಸುತ್ತಿಲ್ಲ. ಮಾನವ ಸಂತತಿ ಲಕ್ಷಾಂತರ ವರ್ಷಗಳ ತನ್ನ ಯಾನದಲ್ಲಿ ಅವೆಷ್ಟು ವೈವಿಧ್ಯಮಯ ನಿಸರ್ಗ ಸವಾಲುಗಳನ್ನು ಹಾದು ಬರುತ್ತಿದೆ ಎಂಬುದನ್ನು ಗ್ರಹಿಸಿದರೆ, ಸಿದ್ಧಾಂತಗಳನ್ನು ಹೀಗೆ ಏಕಮುಖವಾಗಿ ನಿರ್ಮಿಸುವುದರ ಪ್ರಮಾದಗಳನ್ನು ಕಲ್ಪಿಸಬಹುದು. ನಿರಂತರವಾದ ಸವಾಲುಗಳನ್ನು ಸಂದರ್ಭೋಚಿತವಾಗಿ ಎದುರಿಸುತ್ತಾ ಬಂದದ್ದರಲ್ಲಿ ಒಟ್ಟು ಮಾನವ ಸಂತತಿಯ ಸಾಹಸವಿದೆ, ಪಾಲ್ಗೊಳ್ಳುವಿಕೆ ಇದೆ ಎಂಬುದನ್ನು ಮೊದಲು ಒಪ್ಪಬೇಕು. ಈ ಸಾಹಸ, ಪಾಲ್ಗೊಳ್ಳುವಿಕೆಗಳು ಹೆಣ್ಣು-ಗಂಡು ತಳಿಗಳಲ್ಲಿ ಭಿನ್ನರೂಪಗಳಲ್ಲಿ ವ್ಯಕ್ತವಾಗಿರಬಹುದೆಂಬುದು ಪ್ರತ್ಯೇಕ ಸಂಗತಿ. ಈ ಭಿನ್ನತೆ ಶ್ರೇಷ್ಠತೆ- ಕನಿಷ್ಠತೆಗಳ ಕುರುಹುಗಳಲ್ಲ. ವಾದಕ್ಕೆ ವಾದವಾಗಿ ದೇಹ ಸಾಮರ್ಥ್ಯ, ಆಂತರಿಕ ಸಾಮರ್ಥ್ಯ, ಬುದ್ಧಿಶಕ್ತಿ- ಇಂತಹ ನೆಲೆಗಳನ್ನು ಹಿಡಿದು ಯಾರು ಶ್ರೇಷ್ಠರು, ಯಾರು ಫಸ್ಟ್ ಸೆಕ್ಸ್, ಯಾರು ಸೆಕೆಂಡ್‌ಸೆಕ್ಸ್ ಎಂಬಂತಹ ಮಾತುಗಳನ್ನು ಬೆಳೆಸಬೇಕೆಂದರೆ, ಅಂಥವಕ್ಕೆ ಅಗತ್ಯವೆನಿಸುವ ಸಾಕ್ಷಿಗಳನ್ನೂ, ದಾಖಲೆಗಳನ್ನೂ, ತರ್ಕಗಳನ್ನೂ ಒಟ್ಟುಗೂಡಿಸುವುದೇನೂ ಕಷ್ಟವಲ್ಲ.

ಸದ್ಯದಲ್ಲಿ ಮಹಿಳೆಯರು ಈ ವಿತಂಡವಾದದ ವಿರುದ್ಧ ಸೆಣೆಸಬೇಕಾದ ಅಸಹಜ ಸ್ಥಿತಿಯೊಂದನ್ನು ನಮ್ಮ ಸಾಮಾಜಿಕ ಚಿಂತನೆಗಳು ಊರಿ ಬೆಳೆಸಿಬಿಟ್ಟಿವೆ. 'ಶ್ರೇಷ್ಠತೆ'ಯ ಸುಳಿಗೆ ಸಿಲುಕಿ ಚಿಂತನೆಗಳನ್ನು ಬೆಳೆಸುತ್ತಾ ಹೋದಂತೆಲ್ಲಾ ಒಳಸುಳಿಗಳಿಗೆ ಸಿಲುಕಿಕೊಳ್ಳುವ ಅಪಾಯವೇ ಹೆಚ್ಚಾಗುತ್ತದೆ. ಭಿನ್ನತೆ, ವಿಶಿಷ್ಟತೆಗಳನ್ನು ಒಪ್ಪಿ, ಅಸ್ಮಿತೆಯನ್ನೂ ಕಾಯ್ದುಕೊಳ್ಳುವುದು ಹೆಚ್ಚು ಕ್ಷೇಮಕರ ಹಾದಿ ಎನಿಸಬಹುದು.

## ಸೌಂದರ್ಯ ಲಹರಿ

ಹೆಣ್ಣಿನ ದೇಹಸಂಬಂಧದಲ್ಲಿ ಮಂಡನೆಯಾಗುತ್ತಿರುವ ಹೊಸ ಚಿಂತನೆಗಳ ಹಿನ್ನಲೆಯಲ್ಲಿ ಭಾರತೀಯ ಪಾರಂಪರಿಕ ಗ್ರಹಿಕೆಗಳನ್ನು ಮರಳಿ ವಿವೇಚಿಸಬೇಕಾದ ಅವಶ್ಯಕತೆಯಿದೆ. ಮನುಷ್ಯನ ಪರಮ ಸಾಧ್ಯತೆಯನ್ನು ದೇವರು ಎಂದು ತಿಳಿಯುವುದಾದರೆ ಅಂಥ ದೇವರುಗಳನ್ನು ಗಂಡಾಗಿ ಗ್ರಹಿಸಿರುವಂತೆ, ಹೆಣ್ಣಾಗಿಯೂ ಗ್ರಹಿಸಲಾಗಿದೆ. ಹೆಣ್ಣು ದೇವತೆಗಳನ್ನು ಗಂಡು ದೇವತಾ ಜಗತ್ತಿಗೆ ಅಧೀನವಾಗಿ, ಪರಿಶಿಷ್ಟವಾಗಿ ನೋಡುವ ಪರಂಪರೆಯೊಂದು ಇದೆ. ಆದರೆ ಅಷ್ಟೇ ಬಲವಾದ ಇನ್ನೊಂದು ಪರಂಪರೆಯಲ್ಲಿ ಹೆಣ್ಣು ಸರ್ವತಂತ್ರ ಸ್ವತಂತ್ರ ನೆಲೆಯಲ್ಲಿ ಮಂಡಿತಳಾಗಿದ್ದಾಳೆ. 'ಶಕ್ತಿ' ಎಂಬ ಪರಿಕಲ್ಪನೆಯ ವ್ಯಾಪ್ತಿಯಲ್ಲಿ ಈ ಹೆಣ್ಣು ದೇವರ ಅಪರಿಮಿತ ವಿನ್ಯಾಸಗಳನ್ನು ಇಲ್ಲಿ ಕಾಣಬಹುದಾಗಿದೆ. ನಮ್ಮ ಸಂಸ್ಕೃತಿಗಳು ಆರಾಧಿಸುವ ಹೆಣ್ಣು ಗ್ರಾಮ ದೇವತೆಗಳಿಂದ ಮೊದಲಾಗಿ ಈ ವಿನ್ಯಾಸ ಅತ್ಯಂತ ಅಮೂರ್ತವಾದ ಶ್ರೀ ಚಕ್ರಗಳವರೆಗೆ ಹರಡಿಕೊಂಡಿದೆ. ಗಂಡು ಜಗತ್ತಿನ ಹಂಗಿಲ್ಲದ ಈ ಹೆಣ್ಣು ದೇವರುಗಳಿಗೆ ಸಾಮಾನ್ಯವಾಗಿ ವಿನಾಶಕಾರಿ ಸಾಮರ್ಥ್ಯಗಳನ್ನು ಅಥವಾ ವಿನಾಶಗಳಿಂದ ರಕ್ಷಿಸುವ ಸಾಮರ್ಥ್ಯಗಳನ್ನು ಆರೋಪಿಸಲಾಗಿದೆ. ಸಾಂಪ್ರದಾಯಿಕ ಮಾನವ ಶಾಸ್ತ್ರಜ್ಞರು ಈ ದೇವತಾ ಲೋಕವನ್ನು ಸಂಸ್ಕೃತಿಯ ಮಾತೃಪ್ರಧಾನ ಹಂತದ ಪಳಿಯುಳಿಕೆಯಾಗಿ ವ್ಯಾಖ್ಯಾನಿಸುವುದುಂಟು. ಈ ಹೆಣ್ಣು ದೇವರುಗಳು ಸಾಮಾನ್ಯವಾಗಿ ದೇಹರಹಿತರಾಗಿದ್ದು ಮಾಧ್ಯಮಗಳಿಗಾಗಿ ತವಕಿಸುತ್ತಿರುತ್ತಾರೆ.

ಆದರೆ ಈ ಗ್ರಹಿಕೆಯ ಜೊತೆಗೆ ಸಂಪೂರ್ಣ ಸೌಷ್ಠವದೇಹಯುಕ್ತ ಹೆಣ್ಣು ದೇವರುಗಳನ್ನು ಆರಾಧಿಸುವ ಪರಂಪರೆಯೂ ಇದೆ. ಈ ಪರಂಪರೆಯಲ್ಲಿ 'ಶಕ್ತಿ' ಹೆಣ್ಣು ಮಾತ್ರವಷ್ಟೇ ಅಲ್ಲ, ಹೆಣ್ಣಿನ ಸಮಗ್ರ ಸೌಷ್ಠವದೇಹವನ್ನು ಹೊಂದಿರುವವಳು. ಈ ದೇವತೆಯ ದೇಹದ ಸೌಷ್ಠವತೆ ಮತ್ತು ಸಮೃದ್ಧಿಯನ್ನೇ ಆರಾಧಕರು ಆಚರಣೆಯ ಭಾಗವನ್ನಾಗಿ ಮಾಡಿಕೊಳ್ಳುತ್ತಾರೆ. ಅದ್ವೈತ ಚಿಂತಕರು, ಅದರಲ್ಲೂ ಆದಿ ಶಂಕರರು, ಇಂಥ ಆರಾಧನೆಗಳ ಪ್ರವರ್ತಕರಾಗಿರುವುದನ್ನು ನೋಡುತ್ತೇವೆ. ಶಂಕರಾಚಾರ್ಯರ ಸೌಂದರ್ಯಲಹರಿ ಒಂದು ಲೋಲುಪರಚನೆಯೆಂಬಂತೆ ಆಧುನಿಕ ದೃಷ್ಟಿಗೆ ತೋರಬಹುದು. ಆದರೆ ಹೆಣ್ಣಿನ ಪರಮ ಸಾಧ್ಯತೆಯನ್ನು ಹೆಣ್ಣು ದೇಹದ ಎಲ್ಲ ನೆಲೆಗಳಲ್ಲೂ ಗ್ರಹಿಸುವ ಮತ್ತು ಆರಾಧಿಸುವ ಈ ವಿಧಾನ ನಾವೀಗ ಅರಿಯಲು ಯತ್ನಿಸುತ್ತಿರುವ ಹೆಣ್ಣಿನ ಪರಿಕಲ್ಪನೆಗೆ ಸಮೀಪವಾಗಿದೆ. ಚೈತನ್ಯವನ್ನು ದೇಹರಹಿತವಾಗಿ ಗ್ರಹಿಸಿ ಅದನ್ನು ಲಿಂಗಭೇದ

ಮತ್ತು ಲಿಂಗತಾರತಮ್ಯಗಳಿಂದ ಬಿಡುಗಡೆಗೊಳಿಸುವ ಹೋರಾಟ ವಿಧಾನಕ್ಕೆ ಸಮಾಂತರವಾಗಿ, ಪೂರಕವಾಗಿ ಅಥವಾ ಪರ್ಯಾಯವಾಗಿ ದೇಹಸ್ಥ ಹೆಣ್ಣಿನ ಸಾಧ್ಯತೆಗಳನ್ನು ಒಪ್ಪುವ ವಿಧಾನ ಪರಿಶೀಲನಾರ್ಹವಾಗಿದೆ.



## ಅಭಿವ್ಯಕ್ತಿ : ಅಂದು

ಈ ಕವನ ಶ್ರೀಮತಿ ತುಳಸೀಬಾಯಿ ಸುಬ್ಬರಾವ್ ಅವರು ೧೯೧೯ರಲ್ಲಿ ಬರೆದದ್ದು. ತಿರುಮಲಾಂಬಾ ಅವರ 'ಸತೀ ಹಿತೈಷಿಣಿ'ಯಲ್ಲಿ 'ಮಲ್ಲಿಗೆ' ಎಂಬ ಕಾವ್ಯನಾಮದಲ್ಲಿ ಪ್ರಕಟಗೊಂಡಿದೆ.

- ಸಂ

# ಕಾಳಗೌಡ

### (ಗೋವಿನ ಕಥೆ ಮಟ್ಟು)

ಹಾಲಹಳ್ಳಿಯ ಕಾಳಗೌಡನು । ಮಾಳಿಯೆಂಬಾಮಡದಿಯೊಂದಿಗೆ ।
ಬಾಳಿದಾಪರಿ ಪೇಳ್ವೆನೀಗಳೆ । ಕೇಳಿರೆಲ್ಲರು ಕೂಡುತೆ ೧

ಕಾಳು ಕಣಜಗಳೊಳಗೆ ಬಿರಿವುದು । ಏಳುಹಸುಗಳ ಹೈನವಿರುವುದು
ಮೇಲೆ ಮೂರೆಮ್ಮೆಗಳು ಕರೆವುವು । ಚೀಲದೊಳುಬಲುರೊಕ್ಕವು ೨

ಇರುವುದಾತಗೆ ಚಲುವಮನೆಯು । ಎರಡುವರುಷದ ತರಳನಿರುವನು ।
ನೆರೆಯೊಳೀತನ ಮಾತುನಡೆವುದು । ಕಿರಿಯರಂಜುವರಿವನಿಗೆ ೩

ಇಷ್ಟು ಸಂಪತ್ತುಳ್ಳ ಗೌಡಗೆ । ಕೆಟ್ಟಸಿಟ್ಟಿನಚಾಳಿಯಿರುವುದು ।
ಕಷ್ಟಮಾಡುವಹೆಂಡತಿಯಂ । ದಿಟ್ಟತನದಲಿ ಬೈವನು ೪

ಎಚ್ಚರದ ಕೆಲಸಗಳಮಾಡಲು । ಮೆಚ್ಚಿಕೆಯಮಾತೇನುಹೊರಡದು ।
ಹುಚ್ಚು ಕೂಗುಗಳಿಂದಕಿರುಚುತೆ । ಮಚ್ಚರಿಸುವನು ಮಡದಿಯ ೫

ನೊಂದುಗೌಡನ ಮಡದಿಮನೆಯೊಳು । ಕುಂದನೆಣಿಸದೆ ಸುಮ್ಮನಿರುವಳು
ಎಂದಿಗಾದರು ಬುದ್ಧಿ ಗಂಡನಿಗೆ । ಬಂದೆಬರುವುದು ಎನ್ನುತಾ ೬

ಪೀಡೆಬಹಳ ಮಾಡತೊಡಗಲು । ಬೇಡಿಕೊಂಬಳು ಬೇಡವೆನ್ನುತೆ ।
ಗೌಡಕೇಳನು ಮಾಡಿಸಿಡುಕನು । ಕಾಡುತಿರುವನು ಮಡದಿಯ ೭

ಉರಿವಬೇಸಿಗೆಯೊಂದುದಿನದಲಿ । ಹೊರಗೆ ಗದ್ದೆಗೆ ಹೋಗಿ ಗೌಡನು ।
ಹೊರೆಯಹುಲ್ಲನು ಹೊತ್ತು ತಲೆಯೊಳು । ಕುರಿತುಮನೆಯನು ತೆರಳಿದ ೮

ಬಿಸಿಲಬೇಗೆಯು ಮೇಲೆಕಾಯ್ವುದು । ಹಸಿವಿನಿಂದಲೆಹೊಟ್ಟೆಬೆಯ್ವುದು ।
ನೊಸಲುಬೆವರಿಂ ತುಂಬುತಿರುವುದು । ದೆಸೆಯುಕಾಣದು ಗೌಡಗೆ ೯

ಬಂದುಮನೆಯನು ಸೇರಿಗೌಡನು । ಗೊಂದಲವಮಾಡುತ್ತ ಬೋನವ ।
ತಿಂದು ನುಡಿದನು ಗೌಡಸಾನಿಗೆ ಮುಂದೆಪೇಳುವತೆರದೊಳು ೧೦

ಏನಲೇ ! ನಿನಗೇನುತಿಳಿವುದು । ನಾನುಬಿಸಿಲೊಳು ಪಡುವಬವಣೆಯು
ಗೋಣಬಾಗಿಸಿ ಹುಲ್ಲಕುಯ್ವುದು । ಶಾನೆಗಾಸಿಯು ! ಗಾಸಿಯು ೧೧

ಹೆಂಗಸರಿಗೇನಿಹುದು ಗಾಸಿಯು? ಅಂಗಳದೊಳೆಳೆಬಿಸಿಲಕಾಸುತೆ ।
ಸಂಗಡಿಗರೊಡನಾಡಿಮೆರೆವುದು । ಹೆಂಗಸು ಪಡೆದಿರುವುದು ೧೨

ಸುಡುವಬಿಸಿಲೊಳು ಹೊರಗೆಹೋಗದೆ । ಮಡದಿಯರು ಮನೆಯೊಳಗೆ ನಿಲ್ಲುತೆ ।
ಪಡದೆ ಗಂಡಸುಪಡುವಬವಣೆಯ । ಕಡುಗಿಪದುಳದೊಳಿರುವರು ೧೩

ನಾನು ಮಾಡುವ ಕಷ್ಟ ಕೆಲಸಗಳೇನುಸಾಧ್ಯವೆ ನಿನಗೆ? ಬಲುಬಿ ।
ನ್ನಾಣತನದಿಂ ಮಾಡಹೋದರೆ ಬೇನೆಬರುವುದು ತಪ್ಪದೆ ೧೪

ಕೇಳಿಗಂಡನಮಾತ ಮಾಳಿಯು । ತಾಳಿಕೊಳ್ಳುತೆ ಬಂದಸಿಟ್ಟನು ।
ಓಲೆಯಲ್ಲಾಡಿಸುತೆ ಕಿವಿಯೊಳು । ಪೇಳಿದಳು ಮೇಲ್ನುಡಿಯೊಳು ೧೫

ತರುವುದಕ್ಕೇ ಗಂಡನಿರುವುದು । ನೆರೆದುತಿನ್ನುವುದಕ್ಕೆ ಹೆಂಡಿರು ।
ಇರುವರೆನ್ನುತೆ ಹೇಳಿಕೊಳ್ಳುವ ಹಿರಿಯರಾ ನುಡಿಯರಿಯಿರಾ ೧೬

ಮಡದಿಪೇಳಿದಮಾತಕೇಳುತ । ಪೊಡೆಯೊಳಗೆಮಿಗೆ ಬೆಂಕಿಬೀಳಲು
ಸಿಡಿದುಬೀಳುತೆ ಸಿಟ್ಟಿನಿಂದಲೆ । ನುಡಿದನೀಪರಿ ರೇಗುತೆ ೧೭

ನಾವುಹೇಸರಕತ್ತೆಗಳು ದಿಟ ; ಸೇವೆಮಾಡುವುದೆಮ್ಮ ಕೆಲಸವು ।
ನಾವುದುಡಿದುದ ಕುಳಿತು ಸುಮ್ಮನೆ । ಮೇವ ಕೆಲಸವು ನಿಮ್ಮದು ೧೮

ಸಮ್ಮತವು ಸಿಟ್ಟೇಕೆ ಹೊರಗಡೆ । ನಿಮ್ಮ ಕೆಲಸವೆ ಮಿಗಿಲು ।
ಮನೆಯೊಳಗೆಮ್ಮ ಪಾಲಿಗು ಕೆಲಸವಿಲ್ಲದೆ ಸುಮ್ಮನೆಯೆಕುಳಿತಿರುವೆವೆ ೧೯

ಉಡುಗೆಸಾರಣೆಯೊಂದು ಕೆಲಸವೆ? ಅಡುಗೆಮನೆಯಾಕೆಲಸಲೆಕ್ಕವೆ?
ಬಿಡುವುಹೇರಳವಾಗಿದೊರೆಯಲು । ಬಡಿವುತಿರುಪಿರಿ ಹರಟೆಯ ೨೦

ಇದಕೆತಕ್ಕುದ ಮಾಡದಿದ್ದರೆ । ಪದುಳ ಹೆಚ್ಚಲು ಸೊಕ್ಕಿಬಿರಿಯುವೆ
ಮೊದಲು ಮಾಡುವೆನಿದಕೆದಾರಿಯ । ಹದನನೋಡುವೆ ಎಂದನು ೨೧

ಸುಮ್ಮ ಸುಮ್ಮನೆ ಕೋಪವೇತಕೆ ! ನಮ್ಮನಮ್ಮೊಳು ಜಗಳವೇತಕೆ?
ನಿಮ್ಮ ಮಾತಿಗೆ ಬೇರೆನುಡಿವೆನೆ ! ಹಮ್ಮುನನಗೇನಿರುವುದೆ? ೨೨

ಹೆಚ್ಚು ನುಡಿಗಳನಾಡದಂತೆ ! ಮುಚ್ಚುಬಾಯನು ಕೇಳುಮಾತನು ।
ಕೊಚ್ಚದಿರು ಜಂಬವನು ಎನ್ನಯ । ಇಚ್ಛೆಗಿದಿರೇ ಹುಚ್ಚಿಯೇ ೨೩

ಇಷ್ಟು ದಿವಸಗಳಿಂದ ನಾನೆಯೆ । ಕಷ್ಟಪಟ್ಟೆನು ಹೊರಗೆ ಬಿಸಿಲೊಳು ।
ಬಿಟ್ಟು ಬಿಡುವೆನು ನಾಳೆಯಿಂದೀ ಕಷ್ಟವನು ನಿನಗಾಗಿಯೇ ೨೪

ನಾಳೆ ಬೆಳಗಿನಜಾವದಿಂದ । ಕೇಳು ನನ್ನಯ ಕೆಲಸಗಳನು ।
ಮಾಳಿ ನೀನೆ ಮಾಡು ಮನೆಯೊಳು । ಕೂಳನಡುವೆನು ನಾನೆಯೇ ೨೫

ಎಂದಮಾತಿಗೆ ಗೌಡಸಾನಿಯು ಮುಂದೆಬಾರದೆ ಹಿಂದುಗಡೆಯೇ ।
ನಿಂದುನುಡಿವಳು ತನ್ನ ಗಂಡಗೆ । ಮುಂದೆಪೇಳುವೆ ತೆರೆದೊಳು ೨೬

ಕಷ್ಟದಾಕೆಲಸಗಳು ನಿಮ್ಮವು । ಹಿಟ್ಟನಡುವುದು ನಮ್ಮ ಕೆಲಸವು ।
ಇಷ್ಟಬಂದರೆ ನಮ್ಮ ಕೆಲಸವ । ಚಟ್ಟನೆಯೆ ನೀಂಮಾಳಿರಿ ೨೭

ಹೆಂಗುಸಿರದೆಯೆ ನಿಮ್ಮ ಕೆಲಸಕೆ । ಸಂಗಡಲೆತಾಂ ಕೈಯಹಾಕಲು ।
ಮಂಗಮೋರೆಯತಾಳಿಕೊಳ್ಳುತೆ । ಕಂಗೆಡುತ್ತಲೆ ಸಾಯ್ವಳು ೨೮

ಮುಚ್ಚು ಬಾಯನು ಹುಚ್ಚುನಾಯಿಯೆ ! ಎಚ್ಚರಿಲ್ಲದೆ ಏನ ಬೊಗಳುವೆ?
ಹೆಚ್ಚು ಮಾತಾಡಿದರೆ ನಿನ್ನನು । ಚೆಚ್ಚಿಬಿಡುವೆನು ಎಂದನು ೨೯

ಹುಚ್ಚುಕೂಗುಗಳನ್ನು ಕೇಳುತ । ಚಚ್ಚರುಳ್ಳಾ ಗೌಡಸಾನಿಯು
ರಚ್ಚೆ ಹೆಚ್ಚಳವಾಗದಂತೆ । ಬಿಚ್ಚದಿದ್ದಳು ಬಾಯನು ೩೦

ಕಾಳಗೌಡನು ಮತ್ತೆ ನುಡಿದನು ನಾಳೆ ಎರಡನೆ ಜಾವದೊಳಗೆ ।
ಮೇಲುಬೋನವ ಮಾಡಿಕೊಂಡು । ವೇಳೆತಪ್ಪದೆ ಬರುವೆನು ೩೧

ಎರಡುಚೀಲವು ಬಿರಿಯುವಂತೆ । ಭರದಿಕುಯ್ಯುವೆ ನಾನು ಹುಲ್ಲನು ।
ಸರಿಯಹುಲ್ಲನು ತಾರದಿದ್ದರೆ । ಇರೆನು ಸುಮ್ಮನೆ ಖಂಡಿತ ೩೨

ಮಾಳಿ ಕಳೆಯುತ ರಾತ್ರಿಯನ್ನು । ಕೋಳಿ ಕೂಗಲು ಬಿಟ್ಟು ಹಾಸುಗೆ ।
ಕಾಳಗೌಡನು ಪವಡಿಸಿರಲು । ಬೀಳುಕೊಂಡಳು ಮನೆಯನು ೩೩

ಚಿಕ್ಕವಾಹಾರೆಯನು ಹಿಡಿಯುತೆ । ಚಿಕ್ಕವೊಂದನು ಹಾಕಿ ಹೆಗಲಿಗೆ ।
ಬೆಕ್ಕುಹಾದಿಯೊಳಡ್ಡ ಬಂದರು । ಲೆಕ್ಕಮಾಡದೆ ಹೊರಟಳು ೩೪

ಸಾರಿಬೇಗನೆ ಗದ್ದೆಯನ್ನುರೆ । ಮೂರು ತಾಸುಗಳೊಳಗೆಹುಲ್ಲನು ।
ಸೇರಿಸಿಡುತಲೆ ಬಂದು ಕುಳಿತಳು । ನೇರಳೆಯಗಿಡದಡಿಯೊಳು ೩೫

ಕೋಲಪುರದದಾರಿಯಾಗಿರೆ । ಹಾಲು ಮಾರುವರೆಲ್ಲದಣಿಯುತೆ ।
ಮಾಳಿಕುಳಿತಾ ಗಿಡದಕೆಳಗಡೆ । ಕಾಲಹಾಕುತೆ ಬಂದರು ೩೬

ಗೌಳಿಗಿತ್ತಿಯರನ್ನು ಕರೆಯುತೆ । ಮೇಲುಕತೆಗಳನವರಿಗರುಹುತೆ ।
ಮಾಳಿಯವರಾಮಡಕೆಯೊಳಗಿನ । ಹಾಲಕೇಳುತೆ ಕುಡಿದಳು ೩೭

ಕುಪ್ಪಿಯೆಂಬಾ ಗೊಲ್ಲಳೊಬ್ಬಳು । ಕುಪ್ಪಸವನೊಂದನ್ನು ಹೊಲಿಸಲು ।
ಚಿಪ್ಪಿಗನು ಪುರದಲ್ಲಿ ದೊರೆಯದೆ । ಒಪ್ಪಿಸಿದಳಾಮಾಳಿಗೆ ೩೮

ಹೊಲಿಗೆಕೆಲಸವ ನಳ್ತಿಯಿಂದಲಿ । ಕಲಿತ ಮಾಳಿಯು ಕೊಂಡುರವಿಕೆಯ ।
ಚಲುವಪರಿಯೊಳು ಗೊಲ್ಲಗಿತ್ತಿಗೆ । ಹೊಲಿದುಕೊಟ್ಟಳು ಬೇಗನೆ ೩೯

ಅಡಿಕೆ ಸುಣ್ಣವವೀಳ್ಯೆದೆಲೆಯನು । ಕೊಡಲುತೆಗೆದುಕೊಂಡುಮಾಳಿಯು ।
ಹುಡುಕಿಚೀಲದೊಳಿದ್ದ ಕಡ್ಡಿಯ । ಪುಡಿಯಹಂಚಿದಳವರಿಗೆ ೪೦

ಹರಿಸಿದಣಿವನು ಗಿಡದ ನೆರಳೊಳು । ಇರಲು ಮನೆಯೊಳು ಕಾಳಗೌಡನು ।
ಎರಡುತಾಸಿನಮೇಲೆನಿದ್ದೆಯು । ತೊರೆದು ದಿಗಿಲೊಳಗೆದ್ದನು ೪೧

ಬಿಸಿಲುಬೆಳಕುಗಳೆಲ್ಲ ಕಡೆಯೊಳು । ಪಸರಿಸಿವೆ ಮೇಣ್ ತರಳನಳುವನು ।
ಹಸುಗಳೆಲ್ಲವು ಕೂಗುತಿರುವುವು । ಕಸವಕಾಲೊಳುಕೆರೆಯುತಾ ೪೨

ಒಡನೆಮೆಯ್ಯನುಕೊಡವಿಕೊಳುತೆ । ಹುಡುಕಿಮನೆಯೊಳಗೆಲ್ಲ ನೋಡಲು ।
ಅಡುಗೆಮನೆಯೊಳು ಕಸದ ಕುಪ್ಪೆಯು । ಬಡಿಯುತಿರುವುದು ನಾತವು ೪೩

ದಿಟ್ಟಮನದಾಕಾಳಗೌಡನು । ತಟ್ಟನೆಯೆನೀರ್ಮನೆಗೆಹೋಗುತೆ ।
ತೊಟ್ಟಿಯೊಳುತಾಂತೊಂಗಿನೋಡಲು । ಬಟ್ಟು ನೀರೂ ಕಾಣದು ೪೪

ದನದಕೊಟ್ಟಿಗೆಯೆಲ್ಲ ಸಗಣಿಯು । ಮನೆಯೊಳಗೆಬಲುರಂಪುತುಂಬಿರೆ !
ಮನದಿಕಳವಳಗೊಂಡುಗೌಡನು । ಕನಲುತಿದ್ದನು ಸಿಡಿಯುತಾ ೪೫

ಕಡಿದುಕಷ್ಟವು ಬಂದಿತೆನ್ನುತೆ । ಅಡುಗೆಮನೆಯೊಳು ಹೊಕ್ಕುನೋಡಲು ।
ಗಡಿಗೆಮಡಿಕೆಗಳಿರವಕಂಡು । ಬಡವಗೌಡನು ಬೆದರಿದ ೪೬

ಒಲೆಯಬೂಧಿಯನೆತ್ತಿಸಾಗಿಸಿ । ನೆಲವಗುಡಿಸುತೆ ಮತ್ತೆಸಾರಿಸಿ ।
ಗೆಲುವುದೆಂತುಟು ನಾನು ಎನ್ನುತೆ । ಹಲುಬಿನೊಂದನುಮನದೊಳು ೪೭

ಇಂತುಗೌಡನು ಹಲವುಪರಿಯಲಿ । ಚಿಂತಿಸುತ್ತಿರಲತ್ತ ತರಳನು ।
ಪಂತಹಿಡಿಯುತ ಅಳುವಕಿತ್ತಿದ । ನೆಂತುಪೇಳಲಿ ಅಂದವ ೪೮

ಹೊರಕಡೆಗೆಕರೆದೊಯ್ವರಿಲ್ಲದೆ । ತರಳಮಲಗಿದ ಕಡೆಯೆಹೋಗಿರೆ ।
ಇರವೆಹೊರಳಲು ಮೆಯ್ಗೆಮೆತ್ತಿರೆ । ಪರಿಯೆಮೂತ್ರದಕೋಡಿಯು ೪೯

ನೋಡಿಗೌಡನು ಕೆಟ್ಟೆನೆನ್ನುತ । ಓಡಿಹೋದನು ನೆರೆಯಹಟ್ಟಿಗೆ ।
ಬೇಡಿತಂಬಿಗೆತುಂಬನೀರನು । ಕೂಡಲೆಯೆ ತಾಂ ತಂದನು ೫೦

ಎರೆದುನೀರನುತರಳನೂಡಲಿಗೆ । ಒರಸಿಮೆಯ್ಯನು ಪಿರಿದುಬಯ್ಯಲು
ಇರದೆತರಳನು ಕರೆದುಕಂಬನಿ । ಮರುಗಿಕೂಗುತ್ತಳಲಿದ ೫೧

ಕಂಗೆಡುತ್ತಿಹಕಂದಗೋಸುಗ । ತಂಗಳಾಗಿಹ ರೊಟ್ಟಿಯೊಂದನು ।
ಅಂಗಳಕೆತಾಂ ತಂದುಮಗುವನು । ಸಂಗಡಲೆಯೆಕರೆತಂದನು ೫೨

ಪುಟ್ಟಮಗುವಿಗೆ ರೊಟ್ಟಿಕೊಡುತಲಿ । ಕೊಟ್ಟಿಗೆಯಕಡೆ ಗೌಡಪೋಗಲು
ಕೆಟ್ಟಕಾಗೆಯು ಪುಟ್ಟಮಗುವಿನ । ರೊಟ್ಟಿಯನು ಕಸಿದೋಡಿತು ೫೩

ಮಿಗಿಲುಹೊತ್ತಾಯ್ತೆಂದುಗೌಡನು । ದಿಗಿಲಿನಿಂದಲೆ ಕೊಟ್ಟಿಗೆಯಕಡೆ
ಹೊಗುತೆಹಾಲನುಕರೆಯತೊಡಗಲು । ಸಿಗಿದುಹಸುವಿರದೊದ್ದಿತು ೫೪

ಒದ್ದ ಪೆಟ್ಟಿಗೆ ಸಗಣೆರಾಸಿಯ । ಮುದ್ದೆಯೊಳುಮುಳುಗುತ್ತೆಗೌಡನು ।
ಸುದ್ದಿಯಿಲ್ಲದೆ ಸದ್ದುಮಾಡದೆ । ಎದ್ದಗಳಿಗೆಯ ಬೈದನು ೫೫

ಬೇರೆಬಟ್ಟೆಯ ಹಾಕಿಕೊಳ್ಳುತೆ । ಸಾರಿನಡೆದನು ನೆರೆಯಹಟ್ಟಿಗೆ ।
ಸೇರುಹಾಲನು ಕೊಂಡುತಂದನು । ಕೀರಮಾಡುವೆನೆನ್ನುತಾ ೫೬

ಕಸವುಮನೆಯೊಳು ಪಸರಿಸಿರಲು । ಮುಸುರೆಮಡಕೆಯತೊಳೆಯದಿರಲು ।
ಹಸಿವುಗೌಡನ ಕಾಡುತಿರಲು । ಬಸಿದಮಡಕೆಗೆ ಹಾಲನು ೫೭

ಚಕ್ಕಮುಕ್ಕಿಗೆ ಬೆಂಕಿಹತ್ತದೆ । ಪಕ್ಕದಲ್ಲಿಯ ಮನೆಗೆಹೋಗಿ ।
ಚಿಕ್ಕಸೌಟೊಳು ಬೆಂಕಿಬೇಡಲು । ನಕ್ಕುಕೊಟ್ಟಳು ಕೊಂಚವ ೫೮

ತಂದುಬೆಂಕಿಯ ಕುಳಿತುಒಲೆಯ । ಮುಂದೆ ಗೌಡನು ಊದುತ್ತಿರಲು ।
ಹಿಂದುಗಡೆಯೊಳು ಹಸುವುಕೊಟ್ಟಿಗೆಯಿಂದ ಮಾಳಿಗೆಹತ್ತಿತು ೫೯

ಕಟ್ಟುಬಿಚ್ಚದೆ ಹಸುವು ಬೇಸರ । ಪಟ್ಟು ಹಗ್ಗವಜಗ್ಗಿ ಹಂತವ ।
ನೆಟ್ಟನೇರುತೆ ಸೇರಿಮಾಳಿಗೆ । ತಟ್ಟತಟ್ಟನೆ ಕುಣಿಯಿತು ೬೦

ಸದ್ದುಕೇಳುತೆ ಕಾಳಗೌಡನು । ಎದ್ದು ಮೇಲ್ಕಣ್ಣೆತ್ತಿನೋಡಲು ।
ಬಿದ್ದುಮಣ್ಣಿನಧೂಳು ಕಣ್ಣೊಳು । ಶುದ್ಧಬೆಪ್ಪನಮಾಡಿತು ೬೧

ಆಗಗೌಡನು ರೇಗಿಕೊಂಡುರೆ । ಕೂಗಿಕೊಳ್ಳುತೆ ಹಂತದಿಂದಲೆ ।
ಸಾಗಿಹತ್ತುತೆ ಸೇರಿಮಾಳಿಗೆ । ತಾಗಿಬಡಿದನು ಹಸುವನು ೬೨

ಹಿಡಿದುಮೂಗಿನ ಹಗ್ಗವನ್ನುರೆ । ಬಿಡದೆಸೆಳೆಯಲು ಕಾಳಗೌಡನು ।
ಬಡಿದಸಿಟ್ಟಿಗೆ ಕೊಂಬಿನಿಂದಲಿ । ಜರಿದುತಿವಿಯಲು ತೊಡಗಿತು ೬೩

ಕಡಿದುಕಷ್ಟವು ಬಂದಿತೆನ್ನುತೆ । ಒಡನೆ ಗೌಡನು ದನದಹಗ್ಗವ ।
ಬಿಡುತೆಬೆಳಕಿನ ಕಂಡಿಯಿಂದಲಿ । ಕಡೆಗೆಬಂದನು ಕೆಳಗಡೆ ೬೪

ಬಿಟ್ಟುಹಗ್ಗವ ಕೆಳಗೆಕೈಯೊಳು । ಗಟ್ಟಿಯಾಗಿಯೆ ಪಿಡಿದುಕೊಂಡು ।
ಸುಟ್ಟೆಲೆಯಾ ಬಳಿಗೆಬರಲಾ । ಕೆಟ್ಟಹಸುಬಲುಜಗ್ಗಿತು ೬೫

ಕೈಲಿಹಿಡಿಯಲು ಬಲವುಸಾಲದೆ । ನೂಲಹಗ್ಗವ ಬಿಗಿಯೆ ಸೊಂಟಕೆ ।
ಹಾಳುಹಸುವದು ಬೆದರಿಬೇಗನೆ । ಮಾಳಿಗೆಯ ಬಿಟ್ಟಿಳಿಯಿತು ೬೬

ಆಗಗೌಡನು ಹಸುವಿನೆಳತದಿ । ತೂಗಬೀಳುತೆ ಬೆಳಕುಕಂಡಿಗೆ
ಕೂಗಿಕೊಳ್ಳಲು ಹೊರಗಿನಿಂದಲಿ । ಬೇಗಬಂದನು ತರಳನು ೬೭

ಉರಿಯುತಿರುವುದಕಂಡು ಭರದೊಳು । ತರಳನಿರದೆಯೆ ಕರವನೊಲೆಯೊಳು ।
ಸರಿಸಿಚಾಚಲು ಬಿಸಿಯುತಾಕಲು । ಕಿರಿಚಿಕೂಗುತೆ ಸೊರಗಿದ ೬೮

ಏನುಮಾಡಲು ಕೈಲಿಸಾಗದೆ । ಶಾನೆಕಳವಳಗೊಂಡುಗೌಡನು ।
ಮಾನಹೋದರೆ ಹೋಗಲೆನ್ನುತೆ । ದೀನನಂದದೆ ಹಲುಬಿದ ೬೯

ಹೊತ್ತುಮೀರಲು ಮಾಳಿಮನದಲಿ । ಹೆತ್ತಮಗುವಿನಮೇಲಿನೆರಕದಿ ।
ತತ್ತರವಗೊಳ್ಳುತ್ತಲಾಕ್ಷಣ । ಹೊತ್ತುಹೊರೆಯನು ಹೊರಟಳು ೭೦

ಬಂದುನೋಡಿದಳೆಲ್ಲಪರಿಯನು । ನೊಂದುಮನದಲಿ ಬಿಡಿಸಿಗಂಡನ
ದಂದುಗಂಗೊಂಡೆಲ್ಲಕೆಲಸವ । ಅಂದಮಾಡಲು ಹೊರಟಳು ೭೧

ಬೇಗಬೋನವಮಾಡಿ ಬಡಿಸಲು । ಆಗಗೌಡನು ನುಡಿದನೀಪರಿ ।
ಸಾಗದೀಮನೆಕೆಲಸ ನನ್ನಿಂದೇಗಲಾರದು ಮಾಳಿಯೇ ೭೨

ಬರಿದೆನಿನ್ನನು ಜರಿಯುತ್ತಿದ್ದೆನು । ಸರಿಯತೆರದಿಂ ಅರಿವಕಲಿತೆನು ।
ಮರೆಯೆನೆಂದಿಗು ನಾಳೆಯಿಂದಲಿ ಹೊರಗೆಹೊರಡುವೆ ಹುಲ್ಲಿಗೆ ೭೩

ಇಂತುಕಾಳನು ಮಾಳಿಮಕ್ಕಳು । ಸಂತಸದಿ ತಾವಿನ್ನುಮನೆಯೊಳು
ಚಿಂತೆಗಳಿಗೆಡೆಗುಡದೆ ಬಾಳಿದರಂತೆ ಮುಗಿದುದು ಇಲ್ಲಿಗೆ ೭೪



ಇತ್ತೀಚಿನವರಲ್ಲಿ ಉತ್ತಮ ಕತೆಗಾರ್ತಿಯೆನಿಸಿ ಪ್ರಸಿದ್ಧಿಗೆ ಬರುತ್ತಿರುವವರಲ್ಲಿ ಡಾ. ಎಂ. ಎಸ್. ವೇದಾ ಕೂಡ ಒಬ್ಬರು.

# ಹೀಗೊಬ್ಬ ಸತ್ಯವಾನನ ಕಥೆ

**ಡಾ. ಎಂ. ಎಸ್. ವೇದಾ**

"ಇದ್ಯಾಕ್ರವ್ವಾ ನೀವು ಹಿಂಗಾಗ್ ಬುಟ್ರಿ" ಒಂದೆರಡು ಎಲೆ, ಮೇಲಿನ ಅಡಿಕೆಗಾಗಿ ಕಾದು, ಅದು ಕೈಗೆ ಬಿದ್ದ ತಕ್ಷಣ, 'ಅವ್ವ'ನೊಡನೆ ಮಾತನಾಡಿಯೇ ತೀರಬೇಕೆಂದು ಹಠಹಿಡಿದು ಕಳೆದ ಹಲವಾರು ದಿನಗಳಿಂದ ತಹತಹಿಸುತ್ತಿದ್ದ ಚಿಂಕ್ರಿ ಬೆನ್ನು ಹಾಕುವ ಮುಂಚೆಯೇ ತನ್ನ ಮಾತಿನಿಂದ ಅವ್ವನನ್ನು ಹಿಡಿದು ಪಟಕ್ಕನೆ ಇರಿಸಿಕೊಂಡಿದ್ದಳು. ಮೇಲಿನೋರು, ದೊಡ್ಡೋರು ಎಂಬ ಪೂರ್ವಗ್ರಹ ಅವಳನ್ನು ಅವರಿಂದ ದೂರಪಿಟ್ಟಿದ್ದರೂ, ಅವಳ ಮಾತುಗಳ ಭಾವ ಅವರ ಭುಜಹಿಡಿದು ಅಲುಗಾಡಿಸಿ ಉತ್ತರ ಬೇಕೇಬೇಕು ಎನ್ನುವ ನಿಲುವಿನಿಂದ ಕೂಡಿದ್ದಾಗಿತ್ತು.

"ಹೆಂಗಿದ್ದೀನ್ಯ" ತಮ್ಮ ಮೈಮೇಲೆ ಬೇಕೂಬೇಡವೆಂಬಂತೆ ಕಣ್ಣಾಡಿಸಿ ಕೊಂಡಿದ್ದ ಸಾತಮ್ಮ ನೀರಸವಾಗಿ ಕೇಳಿದ್ದರು. "ಹೆಂಗಿದ್ದನಿ ಅಂದರ್ರಿsss" ಕಣ್ಣು ಕಿರಿದುಗೊಳಿಸಿ ಮೂತಿ ಉದ್ದ ಮಾಡಿದ್ದಳು ಚಿಂಕ್ರಿ. "ಎಲ್ಲಾ ಆಗೋದ ಮೇಲೆ ಇನ್ ಹೆಂಗಿದ್ದರೇನಾ ತಗಾ ಚಿಂಕ್ರಿ" ಅವರ ಮಾತುಗಳು ಭಯಂಕರ ಉದಾಸೀನದ ಶಿಖರಕ್ಕೆ ಕಳಶದಂತೆ ಹೊರಹೊಮ್ಮಿತ್ತು. ಅದು ಬರೀ ಮಾತಿನ ಉದಾಸೀನವಲ್ಲ. ಬದುಕಿನದೇ ಉದಾಸೀನ.

"ನಾವ್ ಬೈಕಂತ ಈ ಸಿತಿ ಕ್ಯಾಳ್ಕಂಡ ಬಂದಾವಳಿ. ಕೊಟ್ಟಾಗ ಈಸ್ಗಂಡು ಕ್ಯಾಳ್ದಾಗ ಕೊಟ್‌ಬುಡಬೈಕೂ ಅವ್ವಾರ. ಅಷ್ಟ್ ತಾನೆ ಆ ನಮ್ ಸಿವಾ ನಮ್ ಕೈನಾಗೆ ಮಡಗಿರಾದು. ಅದ್ರು ಮ್ಯಾಕೆ ಇನ್ನಿನ್ನಿದಾತು ಅಮ್ಮಣಮ್ಮುನ ಕಡುಬು" ಚಿಂಕ್ರಿ ಕೈ ಬಾಯಿ ಆಡಿಸುತ್ತಾ ನುಡಿದ ಕೊನೆಯ ನುಡಿಗೆ ಸಾಕಮ್ಮ ನಿಗೂ ನಗು ತಡೆಯಲಾಗಲಿಲ್ಲ. ಬಾಯಿಗೆ ಸೆರಗು ಹಚ್ಚಿ ಮುಸಮುಸನೆ ನಕ್ಕುಕೊಂಡುಬಿಟ್ಟರು !

"ಈ ಸ್ಥಿತಿನಾಗೂ ನಗುವೇನೆ ನಿಂಗೆ. ಅಯ್ಯಾ ನಿನ್ನಾ. ನಿನ್ನ ಗಂಡ ಅನ್ನಿಸಕಂಡೋನು ನಾನು.... ನಾನು ಸತ್ತು ಸರ್ರ್ಯಾಗಿನ್ನೂ ಆರ್ ತಿಂಗಳು ಆಗಿಲ್ಲ. ಆಗ್ಲೆ ನಗಾಟ ಶುರು ಹಚ್ಕಂಡ್ಯನೇ ಸುಬ್ಬಿ. ನಾ ಸಾಯೋದ್ನೆ ಕಾಯ್ತಾ ಇದ್ಯಾ ಈ ನಗಾಟಕ್ಕೆ. ಆಹಹಾ ನಾಗಿಣಿ ವಂಶದೋಳೆ"

ತನ್ನ ಮಾತುಗಳಿಗೆ ಇದೀಗ ತಾನೆ ನಗು ತೋರಿದ ಅವ್ವನೋರಾ ಮುಖ ಏನ್ನನ್ನೋ ಆಲಿಸುವ ಪರಿಯಲ್ಲಿದ್ದು, ಮುಖದ ನಗು ಮಾಯವಾಗಿ ಅಲ್ಲಲ್ಲಾ ಭಯದ ಗೆರೆಗಳು ಮೂಡಲಾರಂಭಿಸಿದ್ದು ಕಂಡು ಚಿಂಕ್ರಿಗೆ ಎತ್ತಿಂಟಂತಾಗಿತ್ತು. "ಅವ್ವಾರೆ.... ಅವ್ವಾರೆ....." ಗಾಬರಿಯಿಂದ ಕೂಗಿದ್ದಳು. ಆ ಕಡೆ ಸಾತಮ್ಮನ ಗಮನ ಒಂದು ಇಂಕರವೂ ಇರಲಿಲ್ಲ. "ಸಿಲ್ಸೆ ಬಡ್ಡಿ ನಿನ್ನ ನಗುವಾ...." ಆಲಿಸುತ್ತಿದ್ದ ಸಾತಮ್ಮನ ನಗು ಸಂಪೂರ್ಣವಾಗಿ ನಿಂತು ಹೋಗಿತ್ತು. ಮೊದಲೇ ಅರಿಶಿನ, ಕುಂಕುಮ ಕಾಣದ ಬೆಳ್ಳಗಿದ್ದ ಮುಖ ಹತ್ತಿಯಂತೆ ಮತ್ತೆಯೂ ಬಿಳಿಚಿಕೊಂಡುಬಿಟ್ಟಿತ್ತು.

"ಇಲ್ಲ ಕಣಿವದ್ರೆ ಇಲ್ಲ... ಬಂದೆ ...ಬಂದೆ "ತಮಗೆ ತಾವೇ ನುಡುಕೊಳ್ಳುತ್ತಾ ಒಳಗೆ ಓಡಿಬಿಟ್ಟಿದ್ದರು. ಹಸುವಿಗೆ ಹಿಂಡಿ ಕಲಿಸುತ್ತಿದ್ದ ಹಿರೀಮಗ ಗಿರಿ ಅವ್ವನ ಹಿಂದೆ ಓಡಿದ್ದ. ಕ್ಷಣಕಾಲ ಜಗುಲಿಯ ಮೇಲೆ ಕುಳಿತಿದ್ದ ಚಿಂಕ್ರಿ "ಆ ಗಂಡ ಅನ್ನಿಸ್ಕೊಂಡೋನ ಬಾಯಿಗ್ ಮಣ್ಣಾಕ" ಕವಳ ಜಗಿಯುತ್ತಾ ಹಟ್ಟಿ ಹಾದಿ ಹಿಡಿದು ಶಾಪ ಹಾಕಿದ್ದಳು. "ಎದೆ ಮ್ಯಾಕ್ಕೆ ಮೂರು ಬಂಡಿ ಮೊಣ್ಣಾಕ್ಕಂಡ ನಂತ್ರನೂವಿ ಹಿಂಗೂ ಕಾಡ್ತಾರಾ ಹೆಂಡ್ರಾ" ಅಚ್ಚರಿಯಿಂದ ಪ್ರಶ್ನೆ ಹಾಕಿಕೊಂಡಿದ್ದಳು.

"ಏನಾಯ್ತು ಗಿರಿಯಣ್ಣ" ಕಿರಿ ಮಗಳು ರಾಧಾ ಹಿಂಡಿ ಕಲೆಸುತ್ತಿದ್ದ ಕೈಯ್ಯಲ್ಲೆ ಧಾವಿಸಿದ್ದ ಅಣ್ಣನನ್ನು ಕಂಡು ಕೇಳಿದ್ದಳು. "ಅವ್ವಾ... ಅವ್ವಾ... ನೋಡ್ಕಾ" ನುಡಿದವ ಕೈ ತೊಳೆಯಲು ತೊಟ್ಟಿಗೆ ಇಳಿದಿದ್ದ. ರಾಧ ಅವ್ವನ ಬೆನ್ನು ಹಿಡಿದು ಕಿರು ಕೋಣೆಗೆ ಬಂದಿದ್ದಳು. ಮೂಲೆ ಹಿಡಿದು ಕುಂತುಬಿಟ್ಟಿದ್ದ ಅವ್ವಾ ತೊಡೆ ಸಂದಿಗೆ ಮುಖ ತೂರಿ ಗೋಳೋ ಎಂದು ಅಳುತ್ತಿದ್ದರು. "ಅವ್ವಾ" ಬೆನ್ನ ಮೇಲೆ ಕೈಯಾಡಿಸಿದ ಮಗಳ ಕೈ ಹಿಡಿದ ಸಾತಮ್ಮನ ದುಃಖ ಮತ್ತೂ ಹೆಚ್ಚಾಗಿತ್ತು. "ನನ್ನಾ ಬಿಟ್ಟು ಹ್ವಾಗಬೇಡ ಕಣಾ ರಾಧಾ. ನಂಗೆ ಹೆದ್ರಿಕೆ ಆಯ್ತದೆ " ಪುಟ್ಟ ಮಗುವಿನಂತೆ ಅಲವತ್ತು ಕೊಂಡ ಅವ್ವನನ್ನು ಕಂಡು ರಾಧಾಳಿಗೂ ಅಳು ಬರುವಂತಾಗಿತ್ತು. " ನಾವ್ಯಾರೂ ಯೆಲ್ಲೂ ಹೋಗಲ್ಲ ಕಣವ್ವಾ. ನಿನ್ನ ತಲಿ ದಂಡೀನೇ ಇದ್ದೀವಿ ಮಲಗವ್ವಾ. ನಿದ್ದೆನಾರೂ ಮಾಡು" ಗಿರಿ ಒಳ ಬರುತ್ತಾ ಸಮಾಧಾನಿಸಿದ್ದ. "ನಿದ್ದಾ" ಬೆಚ್ಚಿ ನುಡಿದಿದ್ದ ಸಾತಮ್ಮ "ಹೆಂಗಾರಾ ಮಾಡ್ಲೋ ಗಿರಿ ನಿದ್ದೇನಾ" ಕೇಳಿದ್ದರು. ರಾಧಾ-ಗಿರಿ ಮೌನವಾಂತು ಕುಳಿತರು. 'ಹೆಂಗಾರಾ ನಿದ್ದೆ ಮಾಡಲಿ'? ಎಂದು ಕೇಳಿದ್ದ ಸಾತಮ್ಮ ಅಳುತ್ತಳುತ್ತಲೇ ನಿದ್ದೆ ಹೋಗಿದ್ದರು. ರಾಧಾಳೂ ಹೊರಹೋದಾಗ ಅವ್ವನ ಮುಖ ನೋಡುತ್ತಾ ಗಿರಿ ನೆನಪಿನಾಳದ ಕತ್ತಲೆಯೊಳಗೆ ಕೈ ತೂರಿ ಹುಡುಕಾಟ ನಡೆಸಿದ್ದ.

ಅವನಿನ್ನೂ ಏಳೆಂಟು ವರ್ಷದವನಿರಬಹುದು. ಅಲ್ಲಿಂದ ಆರಂಭವಾಗುತ್ತದೆ ಅವನ ನೆನಪುಗಳ ಕೆದಕಾಟ. ಮನೆಯ ಪ್ರತಿ ಅಂಗುಲ ಅಂಗುಲಗಳಲ್ಲಿಯೂ ಅಪ್ಪನ ದರ್ಬಾರಿನ ಪಡಿಯಚ್ಚು ಒತ್ತುಕೊಂಡಿತ್ತು. ಅದು ಮನೆಯನ್ನು ದಾಟಿ ಊರನ್ನೂ ವ್ಯಾಪಿಸಿತ್ತು. ಊರು ವ್ಯಾಪಿಸಿ ಸುತ್ತಲಿನೂರುಗಳನ್ನು ಪಬ್ಬಿಸಿತ್ತು. "ಯಾನಾ ಮಾರಾಯ ತಿಮ್ಮಪ್ಪಯ್ಯ ನೋರು

ಬ್ರಾಂಬ್ರು ಜಾತೀನಾಗೆ ವುಟೇಲ್ಲ ಅನ್ನಾದೊಂದು ಬುಟ್ರಾ ಯಿನ್ನೇನ್ನಾರಾ ಕುಂದ್ ಕಂಡಿದ್ದ ಯ್ಯಾ. ಅವು ಮಾಡಾ ಪೂಜಾ ನ್ವಾಡಬ್ಯೆಕು ನಮ್ ಸುಬ್ಬರಾಯಪ್ಪೋರು ಯಾನ್ಲೂ ಬ್ಯಾಡಾ ಅವುರ್ ಮುಂದಾ ಹಂಗ್ ಮಾಡ್ತಾರ. ನಿಂಗೊತ್ತುಡಾ ಮಾಂವ್ನ ಮಡ್ಡೀನೂ ಮಾಡಾಕಿಲ್ಲಂತ ಅವ್ರು ಪಟ್ಟಾಗೆ" ಅವರ ಮನೆಯಾಳುಗಳೇ ಅಚ್ಚರಿ, ಆತಂಕಗಳಿಂದ ಪ್ರಶ್ನಿಸಿಕೊಳ್ಳುತ್ತಿದ್ದ ಕಾಲವದು. ಎಷ್ಟೋ ಬಾರಿ ಪುಟ್ಟವನಾದ ಗಿರಿ ಅವರ ಪ್ರಶ್ನೆಗೆ ಉತ್ತರ ಕಂಡುಕೊಳ್ಳಲು ಸರಿಯಾದ ವ್ಯಕ್ತಿಯಾಗುತ್ತಿದ್ದ. "ಗಿರ್ಯಪ್ಪೋರಾ, ನಿಮ್ಗಾ ಆ ಮ್ಯಾಗಡೇರಾ ಅಣ್ ತಾನಾ ಬ್ಯಾಕಾಗಿರದಳಿ. ಇಲ್ಬನ್ನಿ. ನಾ ಕಿತ್ ಕೊಟ್ಟೇನು. ನಿಮ್ಮಯ್ಯನೋರು ತಪುಕ್ಕೆ ಅಂತ ಕುಂತ್ಗಂಡ್ರು ದ್ಯಾವ್ರೆ ಅವುರ್ ಜತೆ ಮಾತಾಡದಂತೆ ದಿಟವಳಿ". ಮನೆಯೊಳಗೆ ದೇವರ ಪೂಜೆಗಾಗಿ ಕುಂತ ಅಪ್ಪಯ್ಯ, ಅದಕ್ಕಾಗಿ ಅವ್ವನನ್ನು ಯಾವ್ಯಾವ ರೀತಿಯಲ್ಲಿ ಗೋಳು ಹುಯ್ದುಕೊಳ್ಳುತ್ತಾರೆ, ಕುಂತ ಕಡೆ ಕುಂದಿರಗೊಡಿಸುವುದಿಲ್ಲ, ಸಿಡಿ ಸಿಡಿಯಾಗಿಯೇ ಮಂತ್ರ ವದರುತ್ತಾರೆ-ಎಂಬುವು ಮಾತ್ರ ಗಿರಿಯ ನೆನಪಿಗೆ ಬರುತ್ತಿತ್ತೇ ವಿನಾ ಅಪ್ಪಯ್ಯ ತಪುಕ್ಕೆ ಕುಂತು ದೇವರೊಡನೆ ಮಾತನಾಡಿದ್ದು ಎಂದಿಗೂ ಅಲ್ಲ. "ಹೇಳ್ರಾ ಗಿರಿಯಪ್ಪೋರೆ" ಗಿರಿಯನ್ನು ಒತ್ತಾಯಿಸುವಾಗ ಗಿರಿ ವಿಧಿಯಿಲ್ಲದೆ ತಲೆಯಾಡಿಸುತ್ತಿದ್ದ "ದ್ಯಾವೆತೆಯೋ? ದ್ಯಾವ್ರೊ? " ಅವರು ಮತ್ತೂ ವಿಷಯ ಸಂಗ್ರಹಣೆಗೆ ತೊಡಗುತ್ತಿದ್ದರು. ಗಿರಿ ಅವ್ವನನ್ನು ನೆನೆಯುತ್ತಾ "ಹೆಣ್ಣ್ ದ್ಯಾವ್ರು" ಉತ್ತರಿಸುತ್ತಿದ್ದ. "ಹಂಗಲ್ವಾ ಮತ್ತಾ ಅದ್ಕಾ ಸುಬ್ಬರಾಯಪ್ನಂತ ಮ್ಯಾಲ್ ಜಾತ್ಯೋರೂ ಇವುರ ಹಟ್ಟಿಗೆ ಹ್ವಾಗದು ಅಂದ್ರೆ ಸುಮ್ನೆಯಾ" ಅವರು ನಿರ್ಧರಿಸುತ್ತಿದ್ದರು.

ಗಿರಿ ಇವುಗಳ ನಡುವೆ ಹದಿನೈದು ಹದಿನಾರು ಮುಟ್ಟಿದಾಗ ಎಲ್ಲವೂ ಸ್ಪಷ್ಟವಾಗ ಹತ್ತಿತ್ತು. ತಿಮ್ಮಪ್ಪಯ್ಯನೋರ ಭರಾಟೆ ಸಂಘ, ಸಭೆ, ಗೋಷ್ಠಿಗಳ ರೂಪನ್ನು ಪಡೆದುಕೊಂಡಿತ್ತು. ದಿನಬೆಳಗಾದರೆ ಮನೆಯಲ್ಲಿ ನಡೆಯುತ್ತಿದ್ದ 'ಸತ್ಸಂಗಗೋಷ್ಠಿ' ಆ ಊರು, ಸುತ್ತಲೂರುಗಳ ಮನೆಮನೆಮಾತಾಗಿತ್ತು. "ಅದ್ಯಾನಳಿ ಗಿರಿಯಪ್ಪೋರಾ ಅವ್ರೆಲ್ಲಾ ವಟ್ಗಿ ಕುಂತ್ಕಂಡು ಮಾತಾಡ್ತಾ ಇರಾದು" ಇದೇ ಚಿಂಕ್ರಿ ಅವನನ್ನು ಕುತೂಹಲದಿಂದ ಕೇಳಿದ್ದೆಷ್ಟೋ ಬಾರಿ! "ಸತ್ಸಂಗಗೋಷ್ಠಿ ನಡೀತಾ ಅದೆ ಕಣಮ್ಮಾ" ಗಿರಿ ನುಡಿಯುತ್ತಿದ್ದ. ಅದು ಮುಗಿದ ಮೇಲೆ ತಾನಾಗಲಿ, ತನ್ನಂತಹ ಬೇರೆ ಆಳುಗಳಾಗಲಿ ಅಂಗಳದಲ್ಲಿ ತಮ್ಮ ತಮ್ಮ ಕೆಲಸಕಾರ್ಯಗಳಲ್ಲಿ ನಿರತರಾಗಿರುವುದನ್ನೂ ಕ್ಯಾರು ಮಾಡದೆ ತಿಮ್ಮಪ್ಪಯ್ಯ ಹೆಂಡತಿಗೆ ತೆಗೆದುಕೊಳ್ಳುವ 'ಲೆಸನ್ನು'ಗಳನ್ನಷ್ಟೇ ಕಿವಿಯಾರೆ ಕೇಳುತ್ತಿದ್ದ ಚಿಂಕ್ರಿಗೆ ನಗು ಬಂದುಬಿಡುತ್ತಿತ್ತು. "ಸತ್‌ಸಂಗ..... ಅದ್ಯಾಕಳಿ ಹಂಗಂದರು. ಅವ್ರೆಲ್ಲಾ ಬದ್ಕೆ ಅವ್ರುಲ್ಲಾ" ಕಿಚಾಯಿಸಿಬಿಡುತ್ತಿದ್ದಳು ಗಿರಿಯನ್ನ. " ಅವ್ವಾ ನೋಡು ಬಾ ಇಲ್ಲಿ ಇವಳು ಏನೇನೋ ತಲೆ ಹರಟೆ ಮಾಡ್ತೋಳೆ" ಗಿರಿ ಅವ್ವನನ್ನೇ ಕರೆದುಬಿಡುತ್ತಿದ್ದ. ಎರಡು ಕೈಗಳನ್ನು ಹತ್ತು ಕೈಯಾಗಿಸಿಕೊಂಡು, ಮೂಗಿಗೆ ಕವಡೆ ಕಟ್ಟಿ ನುಡಿಯುತ್ತಿದ್ದ ಸಾತಮ್ಮ ಹೆಂಗಿರುತ್ತಿದ್ದರೋ ಹಂಗೇ ಓಡಿಬರುತ್ತಿದ್ದರು. ಚಿಂಕ್ರಿಅವರ ಸ್ಥಿತಿಗೆ ಬೇಸರ ಮಾಡಿಕೊಳ್ಳುತ್ತಿದ್ದಳು. "ಏನಾ ಗಿರಿ ಅದು ನಿನ್ನ ಗಲಾಟೆ" ಅವ್ವ ವಿಚಾರಿಸುವಾಗ ಗಿರಿಗ್ಯಾಕೋ ಚಿಂಕ್ರಿ ಹೇಳುವ ಮಾತುಗಳೇ

ನಿಜವೆನ್ನಿಸಿ ಬಿಡುತ್ತಿತ್ತು. "ಸತ್ಸಂಗ ಸಾಯ್ಲಿ. ಅವ್ವನ್ನ ಇಷ್ಟು ವಟ್ಟೆ ಉರಿಸ್ಕಂಡು ಈ ಸಭೆ ನಡೆಸ್‌ಬೇಕಾ" ತನಗೆ ತಾನೇ ಎಷ್ಟೋ ಬಾರಿ ಪ್ರಶ್ನೆ ಹಾಕಿಕೊಳ್ಳುತ್ತಿದ್ದ. ಗಿರಿಯೂ ಸಹ ಚಿಂಕ್ರಿಯ ನಿಲುವಿಗೇ ಅಂಟಿಕೊಳ್ಳುವಂತಹ ಘಟನೆಗಳು ಮುಂದೆ ನಡೆದುಬಿಡುತ್ತಿದ್ದವು. ಬಂದವರನ್ನು ಓಣಿಯ ಕೊನೆ ತನಕಾ ಬಳಿಗಳಿಸಿ ಬಿಟ್ಟುಬರುತ್ತಿದ್ದ ಅಪ್ಪಯ್ಯ ಇಲ್ಲಿಗಂಟಾ ನಡೆದ ಸತ್ಸಂಗಗೋಷ್ಠಿಯಿಂದ ಪಡಕೊಂಡದ್ದೇನು? ಎಂಬ ಬೃಹತ್ ಪ್ರಶ್ನೆಗೆ ಉತ್ತರವಾಗುವಂತೆ ನಡೆಕೊಳ್ಳುತ್ತಿದ್ದರು. "ಏನೇ ಸಾತಿ ಆ ಚಂದ್ರಣ್ಣ ಕಾಪಿ ಕೇಳುದ್ರೆ ಟೀ ಕೊಟ್ ಬುಟ್ಯಂತೆ ? ಇವತ್ತ್ಯಾಕೆ ಪಾಯ್ಸಕ್ಕೆ ಬೆಲ್ಲ ಹಾಕಿದ್ದು. ಸಕ್ಕರೆ ಹಾಕಕ್ಕೆ ನಿಮ್ಮಪ್ಪನ ಮನೀಂದ ತರ್ತಿದ್ಯಾ ? ಲಿಂಗರಾಜನ್ನ ಕಂಡ್ರೆ ಕೆಳಜಾತ್ಯೋರ್ನ ನೋಡ್ದಂಗೆ ನೋಡ್ತಿಯಂತೆ" ಎಲ್ಲವೂ ಪ್ರಶ್ನೆಗಳಾಗಿ ಅವ್ವನ ಮುಂದೆ ಬೀಳುತ್ತಿದ್ದವು. "ತಗ್ಗಿ ಬಗ್ಗಿ ನಡಿಯಾದಾ ಕಲ್ತಗೋ. ಹುಸಾರು. ಯಾರ ಹೆಂಡ್ರು ಅಂದ್ಕಂಡಿದ್ದಯ್ಯಿ" ಎಚ್ಚರಿಕೆಯ ಘಂಟನಾದದೊಂದಿಗೆ ಮುಕ್ತಾಯವಾಗುತ್ತಿತ್ತು.

ಭೂಮಿಗಂಟಾ ತಗ್ಗಿದ್ದ ಅವ್ವಾ ಅದನ್ನೂ ಬಗೆದು ಒಳಹೋಗಿಬಿಡುವವಳಂತೆ ತಗ್ಗಿ ಬಿಡುತ್ತಿದ್ದಳು. ಒಂದಾದರೂ ಮಾತು ಅವಳ ಬದುಕಿನ ಯಾವ ಸಂದರ್ಭಗಳಲ್ಲಿಯೂ ಹಲ್ಲಿನ ಸಂದಿಯಿಂದಲೂ ಉಸಿರು ಪಡೆದುಕೊಂಡಿರಲಿಲ್ಲ. ಬದುಕು ಹೀಗೇ ಮುಂದೆ ಮುಂದೆ ಸಾಗಿತ್ತು. ಅಥವಾ ಅವ್ವನೇ ಬದುಕಿನೊಡನೆ ಸಾಗಿದ್ದಳು. ಇಂಥ ಸಂದರ್ಭಗಳಲ್ಲೆಲ್ಲಾ ಗಿರಿಯ ಬಾಯಿ ತುದಿ ತನಕವೂ ಅಪ್ಪಯ್ಯನನ್ನು ಇದೆಲ್ಲಾ ಯಾಕೆಂದು? ಏನೆಂದು ? ಸರಿಯೇ ಎಂದು ? ಪ್ರಶ್ನೆ ಮಾಡುವ ಉಮೇದು ಬಂದು ಕೂತು ಬಿಡುತ್ತಿತ್ತು. ಆದರದು ಸ್ವರ ಪಡೆದುಕೊಳ್ಳುತ್ತಿರಲಿಲ್ಲ. ಅಪ್ಪಯ್ಯನ ಹೆದರಿಕೆಯೊಂದಿಗೆ, "ಯಾಕ ಗಿರಿ ಇಲ್ಲಿ ನಿಂತಿದ್ದಯ್ಯಿ ಹೋಗು ಆಡ್ಕಾ" ಇದಕ್ಕೂ ನಿನಗೂ ಏನೇನು ಸಂಬಂಧವಿಲ್ಲ ಎಂಬಂತೆ ನುಡಿದು ಬಿಡುತ್ತಿದ್ದ ಅವ್ವನ ಇಚ್ಚೆಯೂ ಅಡ್ಡಿಯಾಗುತ್ತಿತ್ತು. ತವರು ಮನೆಯಿಂದ ದೂರಾಗಿ, ಇರುವ ಮನೆಯಲ್ಲಿ ಯಾರ ಬೆನ್ನು ಕಟ್ಟುವಿಕೆಯೂ ಇಲ್ಲದೆ ಮೂಗೆತ್ತಿನಂತೆ ದುಡಿಯುತ್ತಾ, ಅಪ್ಪನ ಎಲ್ಲಾ ಅವತಾರಗಳಿಗೂ ಬಲಿಯಾಗುತ್ತಾ ಹೋದ ಅವ್ವನಲ್ಲಿ ಯಾವ ಭಾವವನ್ನು ಗುರುತಿಸದ ನಿರ್ವಿಕಾರ ಭಾವವಷ್ಟೇ ಸ್ಥಾಯಿಯಾಗಿ ಕೂತುಬಿಟ್ಟಿತ್ತು. ಈ ಅವತಾರಗಳೆಲ್ಲಾ ಯಾಕೆ? ನಾನೇ ಯಾಕೆ ಅದರ ಬಲಿ ?' ' ಉಹೂಂ. ಯಾವ ಪ್ರಶ್ನೆಯೂ ಅವಳಲ್ಲಿ ಮೂಡಿರಲಿಲ್ಲ. ಹಾಗೆಂದು ಅದೆಲ್ಲಾ ಅವಳನ್ನು ಕಾಡಲಿಲ್ಲ ಎಂದೂ ಹೇಳಲು ಸಾಧ್ಯವಿಲ್ಲ. ಅವಳನ್ನು ಹಾಗೆ ಕಾಡಿದ್ದು ಬೆಣ್ಣೆ ಕಡೆವ ಮಂತಿಗೆ, ಹಾಲು ಕರೆಸಿಕೊಳ್ಳುವ ಗಂಗೆಗೆ, ತೊಪ್ಪೆ ತಾರಿಸಿಕೊಳ್ಳುವ ಅಂಗಳಕ್ಕೆ, ಬೆರಳುಗಳ ನಡುವೆ ಅಂದವಾದ ಹಸೆಯಾಗಿ ಅರಳುವ ರಂಗೋಲಿಗೆ- ಹೀಗೆ ಅವಳಂತೆಯೇ ಮೌನವಾಂತ ಅವಳ ಸಂಗಾತಿಗಳಿಗೆ ಮಾತ್ರ ಅರಿವಾಗಿದ್ದಿರಬಹುದು.

ಇಂತಹ ಸ್ಥಿತಿಯಲ್ಲಿಯೇ ಗಿರಿಯ ಹಿಂದೆ ಹಿಂದೆ ಮೂರ್ನಾಲ್ಕು ಮಕ್ಕಳುಗಳಾಗಿದ್ದವು. ಕೊನೆಯ ಬಸಿರನ್ನು ಒಡಲಲ್ಲಿ ಹೊತ್ತಿದ್ದ ಅವ್ವನ ಮುಂದೆ ಅಪ್ಪ ದೊಡ್ಡದೊಂದು ಆಟಂಬಾಂಬನ್ನು ಹಾಕಿದ್ದರು. "ಸಾತಿಗೊಬ್ಬಳಿಗೇ ಮನೆ ಕೆಲ್ಸ ನೋಡಕ್ಕಾಗಲ್ಲ. ಕಷ್ಟ

ಆಯ್ತದೆ. ಮಕ್ಕಳ ಸುಧಾರಿಸಬೇಕು. ಮನೆಗೆ ಗೋಷ್ಠಿ, ಬೈಠಕ್ಕು, ಸಭೆ, ಸಮಾರಂಭ ಅಂತ ಬಂಪ್ರೋರು ವೋರ್ದೋರ್ನ ಸುಧಾರಿಸ್ಕಂಬೇಕು. ಎರೆಡೆರಡ್ನೂ ನೋಡಕ್ಕಾಗಲ್ಲ." ಅಪ್ಪಯ್ಯನ ಮಾತು ಕೇಳುತ್ತಾ ಬೆಳೆದು ನಿಂತ ಮಕ್ಕಳಿಗೆ ಯುಗಾಂತರದ ನಂತರ ಉಸಿರು ಎಳೆದುಕೊಳ್ಳುವಷ್ಟು ಸಮಾಧಾನ ತಟ್ಟಿತ್ತು. "ಈಗಲಾದರೂ ಅವ್ವನ ಕತ್ತೆ ಚಾಕರಿಯ ಬಗೆಗೆ ಉಭಶುಭ ಎನ್ನುವ ಮಾತು ಅಪ್ಪಯ್ಯನಿಂದ ಹೊರ ಬಂತಲ್ಲ" ಎಂದು. ಸಾತಮ್ಮನಿಂದ ಯಾವ ಪ್ರತಿಕ್ರಿಯೆಯೂ ಇರಲಿಲ್ಲ. ಮುಂದಿನ ಮಾತುಗಳನ್ನ ಕೇಳಲಷ್ಟೇ ಅವರು ತಯಾರಾಗಿದ್ದಂತೆ ಇತ್ತು. "ಅದ್ಕೆ ನಾನು ಇನ್ನೊಂದ್ ಲಗ್ಣ ಮಾಡಿಕಳ್ಳಾಂವ ಅಂತಿದ್ದೀನಿ"

ಇಡೀ ಮನೆ ಮೌನದ ರಣರಂಗವಾಗಿ ಬಿಟ್ಟಿತ್ತು. ತಿಮ್ಮಪ್ಪಯ್ಯ ಕೂರುವ ಸಭೆ, ಬೈಠಕ್ಕು, ಸತ್ಸಂಗಗಳು-ಇತ್ತೀಚೆಗಾಗಿ 'ಸ್ವಾತಂತ್ರ್ಯಕ್ಕಾಗಿ ಹೋರಾಟ' ಎಂದು ಪದೇ ಪದೇ ಪ್ರಸ್ತಾಪಿಸಿ ಅದಕ್ಕಾಗಿ ಏನ್ನೆಲ್ಲಾ ಮಾಡಬೇಕು ಎಂದೆಲ್ಲಾ ಆಲೋಚಿಸುತ್ತಿದ್ದುದು ಅರಿವಿನಲ್ಲಿದ್ದ ಮನೆಯವರಿಗೆಲ್ಲಾ ತಿಮ್ಮಪ್ಪಯ್ಯನ ಮಾತು ತಮ್ಮೆಲ್ಲರ ರೆಕ್ಕೆ ಪುಕ್ಕಗಳನ್ನು ಕಿತ್ತು ಕುಪ್ಪಳಿಸಲೂ ಸಾಧ್ಯವಾಗದಂತಹ ಸ್ಥಿತಿಗೆ ತಂದಿಟ್ಟಂತಾಗಿತ್ತು. "ಇದ್ಯಾವ ಸೀಮೆಯ ಸ್ವಾತಂತ್ರ್ಯ ಹೋರಾಟ?" ಹೆಂಡತಿ, ಮಕ್ಕಳಿಗೇ ಅದನ್ನು ಕೊಡದ ವ್ಯಕ್ತಿ ಅದರ ನಾಯಕನಿಲ್ಲಿ?!

ಹೆಣ್ಣು ಮಕ್ಕಳು ದಿನವಿಡೀ ಅತ್ತೂ ಕರೆದಿದ್ದರು. ಗಂಡು ಮಕ್ಕಳು ಅಪ್ಪಯ್ಯನ ಮೇಲೆ ಏರಿಹೋಗಬೇಕೆಂದುಕೊಂಡಿದ್ದರು. ಎಲ್ಲರಿಗೂ ಸಾತಮ್ಮನ ನಿಲುವು ತಣ್ಣೀರು ಎರಚಿತ್ತು. "ಅವ್ರಿಗೆ ಏನನ್ನಿಸ್ತದೆ ಅದಾ ಮಾಡ್ಲಿ. ನೀವ್ಯಾರೂ ಅಡ್ಡಿ ಆಗಬೇಡಿ ಏನೇನ್ ಆಗಬೇಕೋ ಅದೆಲ್ಲಾ ಆಗೇ ತೀರ್ತದೆ." ಆರಂಭದ ಕಣ್ಣೀರೂ ಇಲ್ಲದ ಸಾತಮ್ಮ ನಿರ್ಲಿಪ್ತರಾಗಿ ನುಡಿದಿದ್ದರು. ಅಪ್ಪಯ್ಯನ ಕೈಯಲ್ಲಿ ಉಣ್ಣುತ್ತಿರುವ ಅವ್ವನ ದುಃಖ, ಅವ್ವನಿಗೇ ಚಟವಾದಂತಹ ನಿಲುವನ್ನು ಗಿರಿ ಅಂದು ಅವ್ವನಲ್ಲಿ ಗುರುತಿಸಿದ್ದ. ವಾಪಾಸ್ಸು ಆ ಚಟದಿಂದ ಕರೆತರುವ ಮಾರ್ಗ ಯಾವುದೂ ಗಿರಿಯ ಮುಂದೆ ಮೂಡಿರಲಿಲ್ಲ. ಯಾರ ವಿರೋಧವೂ ತಿಮ್ಮಪ್ಪಯ್ಯನನ್ನು ತಾವಿಟ್ಟ ಹೆಜ್ಜೆಯಿಂದ ಹಿಂದೆ ಸರಿಸಿರಲಿಲ್ಲ ಎರಡನೆಯ ಹೆಂಡತಿಯಾಗಿ ಭಾಗ್ಯಮ್ಮ ಅವರ ಮನೆಯ ಹೊಸಿಲು ಮೆಟ್ಟಿದ್ದಳು.

ಬಂದ ಭಾಗ್ಯಮ್ಮನಿಂದ ಸಾತಮ್ಮ ನಿರೀಕ್ಷಿಸುವುದೇನೂ ಇರಲಿಲ್ಲ. ಎಲ್ಲವೂ ಯಥಾಪ್ರಕಾರ ಇವರ ಗೆಯ್ಮೆಯಿಂದಲೇ ಸಾಗಬೇಕಿತ್ತು. ಗಂಡನ ಬಗೆಗಾಗಲಿ, ಹೊಸ ಹೆಣ್ಣಿನ ಬಗೆಗಾಗಲಿ ಒಂದು ಮಾತೂ ಆಡಲು ಸಾತಮ್ಮ ತಯಾರಿರಲಿಲ್ಲ. "ಇದೆಲ್ಲಾ ಏನವ್ವ?" ಗಿರಿ ಕೆದಕುವುದು ಜಾಸ್ತಿಯಾದಾಗ "ಯೆಲ್ಲಾ ಬೇಡ್‌ಕಂಡ್ ಬಂದ ಭಾಗ್ಯಕಪ್ಪಾ" ಕೈಯಾಡಿಸಿಬಿಡುತ್ತಿದ್ದರು. ಒಡಲಲ್ಲಿದ್ದ ಕಿರಿಮಗಳು ರಾಧಾಳನ್ನು ಭುವಿಗೆ ತಂದ ಒಂದೆರಡು ತಿಂಗಳಲ್ಲಿಯೇ ತುಂಬಿದ ಬಸುರಿ ಭಾಗ್ಯಮ್ಮಳ ಬಾಣಂತನ, ಬಸುರಿತನಗಳ ಕಾರ್ಯವೂ ಸಾತಮ್ಮನನ್ನು ಆತುಕೊಂಡಿತ್ತು. ಕೈಗೂಸಿಗೆ ಹಾಲುಕುಡಿಸುವಷ್ಟು ವ್ಯವಧಾನವಿಲ್ಲದ ಸಂದರ್ಭದಲ್ಲಿ, ಕಿರುಚುವ ಕೂಸನ್ನು ಎತ್ತಿಕೊಂಡು ಗಿರಿ ಸುಧಾರಿಸುತ್ತಿದ್ದ. "ಈಗ್ಲಾರಾ

ವಸಿ ಜೋರಾಗವ್ವಾ. ಯಾಕೆ ನಿನ್ ಬಾಳಿವೆ ನೀನೆ ಹಾಳು ಮಾಡಕಂತಿ'' ಗಿರಿ ಕಣ್ಣೀರುದುಂಬುತ್ತಿದ್ದಿ. “ಈ ಬಾಳುಮೆ ಯಾವತ್ತಾರಾ ನಂದಾಗಿತ್ತಪ್ಪ ಗಿರಿ. ನಂದು ಅನ್ನಾದು ನಡಿಯಂಗಿದ್ರೆ ನಾ ಯಾಕ ಹಗಲು ಕಂಡ ಬಾವ್ಯಾಗೆ ಇರುಳೋಗಿ ಬಿದ್ರು ಅನ್ನಂಗೆ ಈ ಮನಿಗೆ ಬತ್ತಿದ್ದೆ ಯೇಳು'' ಗಿರಿಯ ಮುಂದೆ ಸಾತಮ್ಮನ ಕಣ್ಣೀರು ಕೋಡಿಯಾಗುತ್ತಿತ್ತು. “ಆಗಿದ್ದು ಆಗೋಯ್ತು ಈಗಲಾರಾ ನೀ ಯೆಚ್ಚೆತ್ತ್‌ಕಬೇಕು ಕಣವ್ವಾ'' “ಊರು ಕೊಳ್ಳೆ ಹ್ವಾದ ಮೇಲೆ ದಿಡ್ಡಿ ಬಾಗ್ಲು ಹಾಕುದ್ರಂತೆ ಹಂಗೆ ... ಹೆಂಗೋಃ ನಡೀಲಿ ಬುಡು ಗಿರಿ''

ತನ್ನ ಭವಿಷ್ಯವನ್ನು ಯಾರಿಗಾದರೂ ಒಪ್ಪಿಸಿ ಕುಂತುಬಿಟ್ಟಿದ್ದ ಅವ್ವ ಏಣೇಲಿ ಸೋಣೇಲಿಯಾದರೂ ಅಪ್ಪನ ವಿರುದ್ಧ ನಿಲ್ಲಲಿಲ್ಲ. ನುಡಿಯಲಿಲ್ಲ. ಹಾಗಾಗಿದ್ದರೆ ಅಪ್ಪಯ್ಯ, ಅವ್ವನೊಂದಿಗೆ ತಮ್ಮನ್ನೂ ಬೀದಿಪಾಲು ಮಾಡುವುದಕ್ಕೇನೂ ಹಿಂಜರಿಯುತ್ತಿರಲಿಲ್ಲ . ಅವ್ವನ ಹೆದರಿಕೆಯಲ್ಲಿದ್ದ ದೊಡ್ಡದೊಂದು ಪಟ್ಟಿಯಲ್ಲಿ ಇದೂ ಸ್ಥಾನ ಪಡೆದಿದ್ದಿರಬಹುದು.

ಇಡಿಯಾಗಿ ಅವ್ವಾ ಸಾವಿತ್ರಿಯಂತಹ ಪತಿವ್ರತೆ, ಸತಿಶಿರೋಮಣಿಯಾಗಿಯೇ ಬಾಳುತ್ತಾ ಹೋದಳು. ಹೋದವಳ ಹಾದಿಯಲ್ಲೀಗ ಪತಿಯ ಮರಣದ ಮೈಲಿಗಲ್ಲು.... ಹಲವಾರು ಪ್ರಶ್ನೆಗಳನ್ನು ಅವಳ ಮುಂದೆ ಒಗೆದಿದ್ದವು. ಉತ್ತರ ಸಿಗದ ಚಡಪಡಿಕೆ. ಅದೇ ಮೊದಲ ಬಾರಿಗೆ ಯಾರಾದರೂ ಸಾತವ್ವನನ್ನು ಕಂಡರೆ “ನಿಮ್ಹಾನ್ಸ್‌ನಲ್ಲಿ ಒಂದ್ಸಲ ಟ್ರೈ ಮಾಡಿ'' ಎಂದು ಸಲಹೆ ಕೊಟ್ಟುಬಿಡುವಂತಹ ಪರಿಸ್ಥಿತಿ.

ರಾಧಾ ನೆನಪಿಸಿಕೊಳ್ಳುತ್ತಾಳೆ. ಅಪ್ಪಯ್ಯನಿಗಾಗಿ ಯಾರೂ ಸಹ ಮನಃಪೂರ್ವಕವಾಗಿ ಕಣ್ಣೀರು ಹಾಕಬೇಕಾದ ಅಗತ್ಯ ಕಂಡಿರಲಿಲ್ಲ. ಆದರೆ ಅವ್ವನಿಂದ ...?! ಅವ್ವ ಬೆಳ್ಳಗಿನ ಮುಖದಲ್ಲಿ ಅರಿಶಿನ ಬಳಿಸಿಕೊಂಡು ಕಾಸಗಲದ ಕುಂಕುಮದಲ್ಲಿ ರಾರಾಜಿಸುತ್ತಾ ತಲೆಯಲ್ಲಿ ಮುಡಿ ತಂಬಾ ಹೂ ಮುಡಿದಿದ್ದಳು. ಅರಿಶಿನ ಹಚ್ಚಿದ ಮುಖದಲ್ಲಿ ಒಂದೇ ಒಂದು ಕಣ್ಣೀರಿನ ಗೆರೆಯೂ ಮೂಡಿರಲಿಲ್ಲ. ಊರವರ ಮಾತು ಈ ಬಗೆ ಮುಂದುವರೆಯುವಷ್ಟರಲ್ಲಿ ಚಿಂಕ್ರಿ“ಬದುಕ್ನಾಗೆ ಏನ್ ಆಟ್ಟೆಕ್ಕಿ ಬಳುಗಳ್ದಾಂತ್ರಿ. ಈಗಾರಾ ನೆಮ್ದಿ ಕಾಣ್ತರ. ಅಳ ಬಂದ್ರಾ ಕುಂತ್ಗಂಡು ನೀವಾರ ಅಳ್ರಿ. ಅವುರ್ ಯಿಷ್ಯ ನಿಮಗ್ಯಾಕೆ. ಉಂಡೋಳು ಅರುಸ್ತಾಳೆ, ಅನುಭೋಸ್‌ದೋಳು ಬಯುಸ್ತಾಳೇಂತ ಕ್ಯಾಳಿಲ್ವಾ ನೀವು ಗೋಳು''. ತಪರಾಕಿ ನೀಡಿದ್ದಳು. ಆದರೆ ಅವಳಿಂದ ಅದನ್ನು ಅಷ್ಟು ಸಲೀಸಾಗಿ ಸಾಗಹಾಕಿಲು ಸಾಧ್ಯ ಇರಲಿಲ್ಲ.

“ಯಾಕ ರಾಧಾ ಗಂಡುನ್ನ ಹಂಗೆ ಎದ್ರು ವಾದಿಸ್ತಿ ನಂಗ್ಯಾಕೋ ಇವೆಲ್ಲಾ ಸರಿ ಕಾಣಲ್ಲ ಕಪ್ಪಾ. ಯೇನಾರಾ ಅಂದ್‌ಕಳ್ಳಲಿ ಬುಡು. ಮಾತುಗ್ ಮಾತು ಸೋತೋನೆ ಜಾಣನಲ್ವಾ. ಬೆಳಕಂತಾ ಹೋದ್ರೆ ಸಂಸಾರ ಆದೀತಾ'' ಅವ್ವಾ ತನ್ನ ಮನೆಗೆ ಬಂದಾಗ ಗಂಡನೊಂದಿಗಿನ ಇರುಸು ಮುರುಸು ತಮ್ಮ ಕಿವಿಗೆ ಬಿದ್ದಾಗಲ್ಲೆಲ್ಲಾ ಅವ್ವ ನುಡಿಯುತ್ತಿದ್ದ ಮಾತುಗಳು ಇವೇ ಆಗಿತ್ತು. “ ಸಂಸಾರ ಸಾಗಬೇಕು ಎಂಬುದರ ಉಸಾಬರಿ ಹೆಂಡತಿಯೊಬ್ಬಳೇದಾ?

ಗಂಡನದು ಇಲ್ಲವಾ. ಅವ್ವಾ" ಕೇಳಬೇಕೆನ್ನಿಸುವುದನ್ನು ತಡೆಯುತ್ತಿದ್ದಳು. ಯಾಕಂದರೆ ಮಗಳ ಬದುಕಿನಲ್ಲಿಯೂ ತನ್ನದೇ ಗಂಡನ ಮತ್ತೊಂದು ರೂಪ ಮಗಳ ಗಂಡನಾಗಿರಬಹುದಾದ ವಿಪರ್ಯಾಸಕ್ಕಾಗಿ ಅವ್ವ ಹಲವು ಭಾರಿ ಕಣ್ಣೀರು ಹಾಕಿಕೊಂಡಿದ್ದಳು. ಬಾಳಿವೆಯಿಡೀ ಬಾಯ್ಮುಚ್ಚಿ ಅನುಭವಿಸಿದ ಅವ್ವಾ, ಅಪ್ಪನ ಸಾವಿನ ಅನಂತರ ಭ್ರಮೆಗಳಿಗೆ ಒಳಗಾಗಿದ್ದರೆ, ತಾನು ಏನೂ ಅನ್ನದೆ ಹಾಗೆಯೇ ಸಂಸಾರ ಸಾಗಿಸಿದರೆ ಈಗಲೇ ಭ್ರಮೆಗೊಳಗಾಗಿ ಬಿಡುವ ಆತಂಕ ಎದುರಿಸುತ್ತಿದ್ದ ರಾಧಾ ಅವ್ವನಿಗೆ ಏನೂ ನುಡಿಯುತ್ತಿರಲಿಲ್ಲ. ಗಂಡನಿಂದ ಲೆಕ್ಕಾಚಾರ ತಪ್ಪಿದ ಒಂದು ಪ್ರಶ್ನೆಯನ್ನೂ ಕೇಳಲಿಚ್ಛಿಸದ ತಾನು ಅವ್ವನ ಮಗಳಾಗಿದ್ದು ಹೇಗೆ? ಅವ್ವಾ ಪ್ರಶ್ನೆಗಳೇ ಇಲ್ಲದೆ ಬದುಕುತ್ತಾ ಬಂದವಳು. ಎಲ್ಲರಿಗೂ ಪ್ರಶ್ನೆಯಾದವಳು !

ಅಪ್ಪಯ್ಯನ ಕಾರುಭಾರುಗಳು ಕುಂಟಿತಗೊಂಡಂತೆ ಚಿಕ್ಕಮ್ಮನ ಕಡೆಗೇ ಎಲ್ಲಾ ಆಸ್ತಿ ಪಾಸ್ತಿಯೂ ಸರಿಯತೊಡಗಿತ್ತು. ಅವ್ವನ ಮೈಮೇಲಿದ್ದ ಭಾರ ಭಾರದ ಒಡವೆಗಳೂ ಆ ತಕ್ಕಡಿಗೇ ತೂಕ ಹಾಕಲ್ಪಟ್ಟಿತ್ತು. "ಯಾಕಂತವ್ವಾ ನಿಂಗೇನೂ ಇರಬಾರದಂತಾ." ರಾಧಾ ಕನಲಿ ಕೇಳಿದ್ದಳು. "ಇರಬೇಕಾದ್ದೆ ನನ್ನ ಹತ್ರ ಇರ್ನಿಲ್ಲಾ. ಇನ್ನು ಇದಾ ಇಟ್ಕಂಡು ನಾ ಯೇನ್ ಮಾಡ್ಲಿನು ರಾಧಾ" ಅದಕ್ಕೆ ಉತ್ತರವೇನೂ ಇವಳ ಬಳಿ ಇರಲಿಲ್ಲ. ಕೇಳಿ ಕೇಳಿದ್ದನ್ನ ಅವ್ವ ಕಳೆದು ಕೊಡುವುದರಲ್ಲಿಯೇ ಒಂದು ಅರ್ಥ ಕಂಡಿರಬಹುದು. ಗಿರಿ ಯಾರಿಗೂ ಅದನ್ನು ತಡೆಯದಂತೆ ತಾಕೀತು ಮಾಡಿಬಿಟ್ಟಿದ್ದ "ಈಗಲಾದರೂ ಈ ಬಗೆಯಲ್ಲಾದರೂ ತನಗನ್ನಿಸಿದಂತೆ ಮಾಡಿಬಿಡಲಿ" ಎಂದು.

ಉಳಿದವಕ್ಕೆ ಅವರು ಹಾಗೇ ಕೂರುವಂತಿರಲಿಲ್ಲ. ಪಾಲಿನ ವಿಷಯ ಕೋರ್ಟಿನ ಕಟ್ಟೆಯನ್ನು ಏರಿತ್ತು. ಜಮೀನು ಮನೆಗಳು ಅಂಗಡಿ ಸಾಲು ಇವುಗಳನ್ನೊಳಗೊಂಡ ಪಾಲಿನ ವಿಷಯಕ್ಕೆ ಅವ್ವ ಮುಖ ಹಾಕಿರಲಿಲ್ಲ. "ನಿಮ್ಮ ಬದುಕಿನ ಪ್ರಶ್ನೆ ಕಂಡ್ರಪ್ಪಾ ಅವು". ಒಪ್ಪಿಗೆ ಸೂಚಿಸಿತ್ತು ಅವ್ವನ ನಿಲುವು. ಕೋರ್ಟಿನಲ್ಲಿ ನಿರ್ಧಾರ ಆಗುವ ಮುಂಚೆಯೇ ಅಪ್ಪಯ್ಯ ತೀರಿಕೊಂಡಿದ್ದರು. "ನೀವುಗೋಳು ಅಪ್ಪ ಬದುಕಿರ್‌ಬ್ಯಾಕಾದ್ರೆ ಕೋರ್ಟು ಕಛೇರಿ ಹತ್ತಿ ನನ್ ಗಂಡನ್ನ ನುಂಗ್ ಹಾಕ್ ಬುಟ್ರಿ" ಚಿಕ್ಕಮ್ಮ ಹೊಕ್ಕಾಗಿ ಊರು ತಲುಪಿದಾಗ ಬಂದ ಬಂದವರಿಗೆಲ್ಲಾ ಗೋಳೆಂದು ಅಳುತ್ತಾ ನುಡಿಯುತ್ತಿದ್ದ ಒಂದೇ ಒಂದು ಮಾತು ಅದಾಗಿತ್ತು. ಅವ್ವಾ ಯಥಾಸ್ಥಿತಿಯ ನಿರ್ಲಿಪ್ತತೆಯಲ್ಲಿದ್ದರು. ಅವರ ಇಡೀ ಬದುಕಿನ ಪ್ರತಿಭಟನೆಯಾಗಿ ಯಾರಾರಾ ನೋಡ್ಯಾರು ಎಂಬ ಕಾರಣಕ್ಕಾಗಿಯಾದರೂ ಅವರ ಕಂಗಳಿಂದ ಒಂದು ಹನಿ ನೀರು ತೊಟ್ಟಕ್ಕಿರಲಿಲ್ಲ.

ತಿಮ್ಮಪ್ಪಯ್ಯ ಬಾಳಿ ಬದುಕಿದ ರೀತಿಯಲ್ಲಿಯೇ ಅವರ ಸಂಸ್ಕಾರ ನಡೆದಿತ್ತು. ಹನ್ನೆರಡನೆಯ ದಿನದ ಕಾರ್ಯದಲ್ಲಿ ಎಡೆಯಿಟ್ಟಾಗ ಒಂದಾದರೂ ಕಾಗೆಗಳು ಬಂದು ಪಿಂಡವನ್ನು ಮುಟ್ಟದಿದ್ದದ್ದು, ಎಲ್ಲರ ಮನಸ್ಸುಗಳಲ್ಲಿಯೂ ವಿವಿಧ ಭಾವಗಳನ್ನು ಮೂಡಿಸಿತ್ತು. ಬಲವಂತವಾಗಿ ಒಂದು ಕಾಗೆಯಿಂದ ಎಡೆಯನ್ನು ಮುಟ್ಟಿಸುವಷ್ಟರಲ್ಲಿ

ಸಾಕು ಸಾಕಾಗಿತ್ತು. ಆ ಕಾರ್ಯ ಮುಗಿಸಿ ಹಿಂತಿರುಗಿದರೆ ಅವ್ವನ ಮುಖ ಹೆಣದ ಮುಖದಂತೆಯೇ ಆಗಿಬಿಟ್ಟಿತ್ತು "ನಿಮ್ಮಪ್ಪಯ್ಯಂಗೆ ಇನ್ನೂ ಬದ್ಕಾ ಆಸೆ ಬಂಡಿಯಾಗಿತ್ತು. ಇಲ್ಲಿದ್ನೆಲ್ಲಾ ಬುಟ್ಟು ಹೋಗಾ ಇಚ್ಛೆ ಇಂಕರವೂ ಇರಲಿಲ್ಲ. ಏನಾದರೋ ಏನ್ಕಥೆಯೋ." ಅವ್ವನ ಬಡಬಡಿಕೆ ತಕ್ಷಣ ಎಲ್ಲರಿಗೂ ಅರ್ಥವಾಗಿರಲಿಲ್ಲ. ಚಿಂಕ್ರಿಗೆ ಅರ್ಥವಾಗಿತ್ತೋ ಏನೋ "ಸತ್‌ಮ್ಯಾಕ್ಕೂ ಯೋಚ್ನೆ ಮಾಡೀರಳಿ. ತಗಳಿ ಸತ್ತೋರ ತಿಕಾ ತೆಂಕ್ಲೋ ಬಡುಗ್ಲೋ ನಿಮ್ಮದೊಂದು ವುಚ್ಚಾಟ ಕಂಡ್ರುವ್ವಾ " ನಿಸೂರಾಗಿ ನುಡಿದಿದ್ದಳು.

ರಾಧಾ ನೋಡುನೋಡುತ್ತಿದ್ದಂತೆಯೇ ಅವ್ವನ ಪಿಕೀರು, 'ವುಚ್ಚಾಟ' ದ ಹಂತವನ್ನೇ ತಲುಪತೊಡಗಿತ್ತು. ಅಂದು ರಾತ್ರಿ ಸಾಕವ್ವ ಮಲಗಿದ್ದರು. ಕಾರ್ಯಕ್ಕಾಗಿ ಬಂದಿದ್ದವರೆಲ್ಲಾ ಸಾಕಾಗಿ ನಿದ್ದೆ ಹೋಗಿದ್ದರು. ಸಾಕವ್ವ ಇಡೀ ಜನ್ಮದಲ್ಲಿ ಕೂಗದಂತಹ ಕೂಗೊಂದನ್ನು ಕೂಗಿದಾಗ ಇಡೀ ಮನೆ ಎಚ್ಚರಗೊಂಡಿತ್ತು. "ಅವ್ವಾ ಏನಾಯ್ತುವ್ವಾ?" ಮಕ್ಕಳು, ಸೊಸೆಯಂದಿರೂ ಎಲ್ಲರೂ ಸಾಕವ್ವನ ಬಳಿಯಲ್ಲಿ ಗುಂಪುಗೂಡಿದ್ದರು. ಹನ್ನೆರಡು ದಿನಗಳ ಹಿಂದೆ ಕಂಡಿದ್ದ ನೆಮ್ಮದಿಯ ಮುಖದಲ್ಲಿ ಪ್ರೇತ ತಾಂಡವವಾಡುತ್ತಿತ್ತು. "ಅವ್ರು ಕಾಣಿಸ್ಕಂಡಿದ್ರು ಕಣಾ ಗಿರಿ" ಮಗನನ್ನು ಹಿಡಿದು ಗೋಳೋ ಎಂದು ಅಳತೊಡಗಿದ್ದರು. "ಏನವ್ವಾ ಹಂಗಂದ್ರೆ" ಗಿರಿ ಪೆಚ್ಚಾಗಿದ್ದ. ಅವ್ವ ಏನು ತಾನೇ ಹೇಳಿಯಾರು?

'ಸಾಯುವ ಮನಸ್ಸಿಲ್ಲದೆ ಸಾವಿಗೆದುರಾಗಿದ್ದಾರೆ ಯಜಮಾನರು' ಎಂಬುದನ್ನು ಕಾರ್ಯ ನಡೆಸುವಾಗ ಮನಕ್ಕೆ ನಾಟಿಸಿಕೊಂಡಿದ್ದ ಸಾತಮ್ಮ ಆ ಪಿಕೀರಿನಲ್ಲಿಯೇ ನಿದ್ದೆ ಇಲ್ಲದೆ ಹೊರಳಾಡಿದ್ದರು. ಕೊಂಚ ಮಂಪರಿನ ಜೊಂಪು ಹತ್ತಿದಂತಾಗಿರಬಹುದು. "ಸಾತಿ ಬಾ ಇಲ್ಲಿಗಾ. ಇಲ್ಲ್ಯಾರೂ ಕೆಲ್ಸ ಮಾಡಾರಿಲ್ಲ." ಎಲ್ಲೋ ಕೂಗಿದಂತಾಗಿ ನೋಡುತ್ತಾರೆ; ಎದುರಲ್ಲಿ ಗಂಡ ! "ಬಾ ಸಾತಿ ಇಲ್ಲಿ ಕೆಲ್ಸ ಮಾಡಾರ್ ಯಾರಿಲ್ಲ" ಮತ್ತೊಮ್ಮೆ ಕರೆದಿದ್ದಾಗ ಸಾತವ್ವನಿಗೆ ಏನು ಹೇಳಬೇಕೆಂದು ತೋರಿರಲಿಲ್ಲ. ಕಪ್ಪು ಆಗಸದಲ್ಲಿದ್ದ ನಕ್ಷತ್ರಗಳು ನೋಡನೋಡುತ್ತಾ ಮಾಲೆಯಾಗಿ, ಆ ಮಾಲೆ ಇವರ ಕೊರಳ ಕುಣಿಕೆಯಾಗಿ ಅಲ್ಲೆಲ್ಲೋ ತೇಲುತ್ತಿರುವ ತಿಮ್ಮಪ್ಪಯ್ಯನ ಬಳಿ ಸೆಳೆದುಕೊಂಡು ಹೋಗುವಂತೆ, ಇವರಿಗೆ ಉಸಿರುಗಟ್ಟಿದಂತೆ, ಗಿರಿಯನ್ನು ಕೂಗಿ ಕೊಳ್ಳತೊಡಗಿದ್ದರು.

ಅವ್ವನ ಸ್ಥಿತಿಯನ್ನು ಕಂಡು ಏನೇನೋ ಊಹಿಸಿಕೊಂಡು ಬಿಟ್ಟ ರಾಧಾ ಬಿಕ್ಕಿ ಬಿಕ್ಕಿ ಅಳತೊಡಗಿದ್ದಳು. "ಏನ್ರುವ್ವಾ ಅದು ನೆನ್ನಿ ಜಿನ ಅದೇನೋ ಅವ್ವಾರು ಕೂಗ್ ಕಂಡ್ರಂತಳಿ" ಚಿಂಕ್ರಿ ದುಃಖದಿಂದ ಕೇಳಿದ್ದಳು. ರಾಧಾ ನಡೆದ ವಿಷಯ ಹೇಳಿದಾಗ "ಯಾಕಂತ ಅಲ್ಲಿ ಮ್ಯಾಲ್ನಾಗೂ ಇಂದ್ರು ಪಂದ್ರು ಅನ್ನೋರ ಜತೆ ಸತ್‌ಸಂಗ ಮಾಡ್ತಾ ಕುಂತೋರಂತ ಅಯ್ನೋರು. ಕಾಪಿ, ಟೀ ಕಾಯ್ಸಿ ಕೊಡ್‌ಬೇಕಂತ, ಅದಕ್ ಕರೀತಾ ಅವ್ರಂತಾ. ವುಚ್ಚು.... ವುಚ್ಚು. ಇವೆಲ್ಲ ವುಚ್ಚು ಕಂಡ್ರುವ್ವಾ. ನಾ ಅವತ್ತೇ ಅಂದೆ ಕಣಳಿ. ಸತ್ತೋನ್ ತಿಕಾ ತೆಂಕ್ಲೋ ಬಡುಗ್ಲೋ ಅಂತಾ. ಈ ಅವ್ವಂದೊಂದು ಪಿಕೀರು. ಸತ್ ಮ್ಯಾಕ್ಕೂ ನಿರುಂಬಳವಾಗಿ ಇರಾಕ್ ಬುಡಲ್ಲವಲ್ಲ ಈ ಅಯ್ನೋರು". ಚಿಂಕ್ರಿಯ ಮಾತುಗಳಿಗೆ ರಾಧಾಳ ಒಪ್ಪಿಗೆ ಇತ್ತು. ಆದರೆ ಚಿಂಕ್ರಿಯಂತೆ ಮೇಲೆ ಹೇಳುವ ಧೈರ್ಯ ಮಾಡಿರಲಿಲ್ಲ. ಅವರದಲ್ಲದ ವ್ಯಕ್ತಿತ್ವಕ್ಕೆ

ತಮ್ಮ ದೇಹ ಜೋಡಿಸಿಕೊಂಡ ಅವ್ವಾ ಮತ್ತೆಯೂ ಅದರಿಂದ ಹೊರಬಾರದಂತಹ ಸ್ಥಿತಿಯಲ್ಲಿ ಹೇಗೆ ತಮ್ಮ ವ್ಯಕ್ತಿತ್ವವನ್ನೆ ಇಲ್ಲವಾಗಿಸಿಕೊಂಡು ಬಿಟ್ಟಿದ್ದಾರೆ ಎನ್ನಿಸಿತ್ತು.

ಅಲ್ಲಿಂದಾಚೆಗೆ ಸಾತವ್ವನ ಮನಸ್ಥಿತಿ ಮತ್ತೆಯೂ ಹದಗೆಡುತ್ತಾ ಹೋಗಿತ್ತು. ಮಕ್ಕಳು ತಕ್ಕಮಟ್ಟಿಗೆ ಚೆನ್ನಾಗಿಯೇ ನೋಡಿಕೊಳ್ಳಲು ಶಕ್ತಿಮೀರಿ ಪ್ರಯತ್ನಿಸುತ್ತಲೇ ಇದ್ದರು. ಅವರಿಗಾಗಿ ಅವರು ಯಾರ ಮುಂದೂ ಈಗಲೂ ಕೈ ಚಾಚದಂತಿರಲು ಅಂಗಡಿಗಳ ಬಾಡಿಗೆ ಅವರ ಕೈಗೇ ಬರುವಂತೆ ಮಾಡಿದ್ದರು. ಬಂದ ಹಣ ಬಂದಂತೆಯೇ ಯಾರಾದರೊಬ್ಬರ ಕೈ ಸೇರುತ್ತಿತ್ತು. "ನಂದೂ ಅಂತ ಆಗಿರಲಿಲ್ಲ ಈಗಿರಲಿಲ್ಲ. ಇನ್ನು ಮುಂದುಕ್ಯಾಕೆ ತಗಾ ಗಿರಿ ಇಟ್ಕಾ" ಸಾತವ್ವನ ಡೈಲಾಗು ಎಲ್ಲರ ಬಳಿಯೂ ಒಂದೇ ಆಗಿರುತ್ತಿತ್ತು. "ಔಷಧಿ... ಅದೂ ... ಇದೂ ...ಹೋಗ್ಲಿ...ಮೊಮ್ಮಕ್ಳ ಕೈಗೆ ಕೊಡಕಾದ್ರೂ ನಿನ್ನ ಹತ್ರ ಒಂದಷ್ಟು ದುಡ್ ಇದ್ರೆ ಏನಾಯ್ತದವ್ವಾ" ಗಿರಿ ನುಡಿಯುತ್ತಿದ್ದ. "ಯಾವತ್ತೂ ಇಲ್ಲದ್ದ ಯಜಮಾನ್ಕೆ ಒಂದು ಕಾಸಿಗಾದ್ರೂ ನಂಗೆ ಅದೆ ಅಂದ್ರೆ ಹೆದ್ರುಕೆ ಆಯ್ತುದೆ ಕ ಗಿರಿ ."

ಸಾತವ್ವನ ಭ್ರಮೆ ದಿನೇ ದಿನೇ ಹೆಚ್ಚಾದಂತೆ ಅದು ದೈಹಿಕವಾಗಿಯೂ ಪರಿಣಾಮ ಉಂಟುಮಾಡಿತ್ತು. ಐದು ತಿಂಗಳ ಹಿಂದೆ ನೋಡಿದ್ದ ಸಾತವ್ವನಿಗೂ ಈಗ ನೋಡುವ ಸಾತವ್ವನಿಗೂ ಏನೇನೂ ಸಂಬಂಧ ಇಲ್ಲ ಎಂಬಂಥ ಪರಿಸ್ಥಿತಿ ಉಂಟಾಗಿತ್ತು. "ಅದ್ಯಾಕ್ರವ್ವಾ ಈಗ್ಲೂ ಹೆದುರ್‌ಕಂಡರಿ ಅವ್ರುಗೆ. ನೀವು ಈ ರಂಡೆ ಯಾಕ ಹಿಂಗ್ ಮಾತಾಡ್ತಳು ಅಂತಾನಾರಾ ಅನ್ಕಳ್ಳಿ. ಮತ್ತ ಅವು ಬಾ ಅಂದ್ರೆ ಕಂಡ್‌ತುಂಡ್ನಾಗಿ ಯೇಳ್‌ಬುಡಿ ನೀವು ಸತ್ತು ನನ್ ಕರ್ಮಣಿ ಸರ ಅರ್ರಾಕಿ, ಕುಂಕ್ಮ ಅಳುಸ್‌ಕೊಂಡಾಗ್ಲೆ ನನ್ಗೂ ನಿಮ್ಗೂ ಇದ್ದ ಸಂಬಂಜ ಮುಗ್ದೋಯ್ತು ಕಣಪ್ಪಾಂತ. ಅಲ್ವಾ ರಾಧವ್ವ" ಚಿಂಕ್ರಿ ಬಹಳ ದೊಡ್ಡ ಮನಶ್ಯಾಸ್ತ್ರಜ್ಞಳಂತೆ ಸುಲಭವಾದ ಸೂಚನೆ ಕೊಟ್ಟಿದ್ದಳು "ಈ ಸಂಬಂಜ ಜಲ್ಮಜಲ್ಮಾಂತರದ್ದು ಅಂತ ಅಂದ್‌ಗಿಂದ್ ಕಂಡಿದ್ದರಾ ಕಾಣೆ ಸಾತವ್ವೋರು " ನುಡಿದು ಕಿರಿ ಕಿರಿ ಉಂಟುಮಾಡಿದ್ದಳು. ಯಾವುದಕ್ಕೂ ಅದರಿಂದ 'ಹರಾಶಿವಾ' ಉತ್ತರ ಬಂದಿರಲಿಲ್ಲ.

ಅಂಥದೇ ಗಾಢಮೌನದ ಒಂದು ದಿನ ಮತ್ತದೇ ಪಿಕೀರಿನ ಒಂದು ದಿನ, ಮತ್ತದೇ ನೋವಿನ ಒಂದು ದಿನ .......

ಎಂದಿನಂತೆ ಗಿರಿ ಅವ್ವನ ತಲೆಗೂದಲು ಬಾಚಿ ಎಣೆಗಂಟು ಹಾಕಿ ಮುಖದ ಮುಂದೆ ಕನ್ನಡಿ ಹಿಡಿದಿದ್ದ "ಚೆಂದಾಗಿ ಹಾಕಿದ್ದೀನಾ ನೋಡವ್ವಾ?" ಸಾತವ್ವ "ದಿವೀನಾಗದೆ" ನಗಾಡಿದ್ದರು. ಅವ್ವನ ಮುಖದಲ್ಲಿ ಒಂದಷ್ಟು ನಗು ಕಂಡ ಗಿರಿ "ಅವ್ವಾ ನಾಳೆ ಬೆಳಿಗ್ಗೆನೆ ಹೊರಟು ಬಿಡುವಾ. ಬೆಂಗಳೂರ್ನಲ್ಲಿ ಒಳ್ಳೆ ಡಾಕ್ಟರನ್ನ ನೋಡಿ ಬರೋದಂತ ನಿರ್ಧಾರ ಆಗದೆ, ಮತ್ತೆ ಅದೂ ಇದೂಂತ ಮಾತ್ ತೆಗಿಯಾದು ಬ್ಯಾಡಾ" ನಿರ್ಧಾರ ಮಾಡಿದವನಂತೆ ನುಡಿದಿದ್ದ. "ನಿಂಗೂ ಭ್ರಮ ಹಿಡ್‌ಕಂಡಿದ್ದದಾ ಗಿರಿ. ಅಲ್ಲೋಗಿ ಎಷ್ಟೆಷ್ಟೋ ಖರ್ಚ್ ಮಾಡ್‌ಕಂಡ್ರೂ ನನ್ನಾ ಬೆಂಗಳೂರ್ನಾಗೆ ಬೇವರ್ಸಿ ಯೆಣ ಮಾಡ್‌ಬುಟ್ಟೆಯ್ಯಾ"ಸಾತವ್ವ ಕಣ್ಣೀರುದುಂಬಿಕೊಡಿದ್ದರು. "ಯಾಕವ್ವಾ ಹಂಗೆಲ್ಲಾ ಮಾತಾಡ್ತೀಯಾ" ಗಿರಿ ಗೊರಗೊರ

ಧ್ವನಿ ಹೊರಡಿಸಿದ್ದ. ಕ್ಷಣ ಕಾಲ ಮೌನ ಅಲ್ಲಿ ಉಯ್ಯಾಲೆಯಾಡಿತ್ತು. 'ಗಿರಿ ನೀವುಗೋಳು ನನ್ನ ಎಷ್ಟು ಬಗ್ಯಾಗಿ ನೋಡ್ಕಂತಿದ್ದಿರಿ, ನಿಮ್ಮ ನಾ ಏನೇನೂ ನೋಡ್ಕನಿಲ್ಲ. ಬದ್ಕ ಹೆಂಗ್ ಬಂತೋ ಹಂಗೇ ಬುಟ್ಟೆಬುಟ್ಟೆ. ಆ ಬದ್ಕು ನಿಮ್ಗೂ ಸಂಬಂಧ ವಂದಿಸ್ಕಂಡಿತ್ತು ಅನ್ನಾದೇ ಮರ್ತಗಂಡ್‌ಬುಟ್ಟಿದ್ದೆ.' ಅವ್ವನ ನುಡಿ ಗಿರಿಗೆ ಹೊಸದಾಗಿತ್ತು. "ಏನೇನಾರಾ ನುಡೀತಿ ಹೋಗವ್ವಾ ನೀನು" "ಹೋಯ್ತಿನಿ ಕಪ್ಪಾ ಗಿರಿ ಯೆಚ್ಗೆ ದಿನಾ ಇಲ್ಲಿರಾಕೆ ಅವ್ರು ನನ್ನ ಬುಟ್‌ಕೊಟ್ರೆ ತಾನಾ" ಮತ್ತೆ ಕಣ್ಣೀರು ತುಂಬಿಕೊಡಿದ್ದರು. ಜೀವಂತ ಇರುವಾಗ ತಿಮ್ಮಪ್ಪಯ್ಯನಿಗೆ ಎಷ್ಟು ಹೆದರಿದ್ದರೋ ಅದರ ನಾಲ್ಕು ಪಟ್ಟು ಹೆದರಿಕೆ ಅವರ ಮುಖದಲ್ಲಿ ಕುಣಿದಾಡುತ್ತಿತ್ತು. ಗಿರಿಗೇನೂ ನುಡಿಯಬೇಕೆನ್ನಿಸಲಿಲ್ಲ. ಅವ್ವನನ್ನು ಇಲ್ಲೆ ಇಟ್ಟುಕೊಂಡರೆ ಆರುತಿಂಗಳು ಬರುವವರು ಮೂರು ತಿಂಗಳಿಗೇ ಮುಗಿದು ಹೋಗುತ್ತಾರೆಂದುಕೊಂಡವ ನಾಳೆ ಆರು ಘಂಟೆಯ ಬಸ್ಸಿಗೆ ಹೊರಟುಬಿಡಬೇಕೆಂದು ನಿರ್ಧರಿಸಿ, ಅವ್ವನಿಗೆ ಮಾತ್ರೆ ತಿನ್ನಲು ಕೊಟ್ಟು, ಲೈಟಾರಿಸಿ ಹೊರಬಂದಿದ್ದ.

ರೂಮಿನ ಕತ್ತಲೆಯ ಗರ್ಭದಲ್ಲಿ ಮುಳುಗಿ ಹೋದ ಸಾತವ್ವ, ಮಾರನೆಯ ಬೆಳಗಿನ ಗರ್ಭದಲ್ಲಿ ಮೂಡಿ ಬಂದಿರಲಿಲ್ಲ. ಇಡೀ ಮನೆ ಗೋಳಿನಿಂದ ತುಂಬಿ ಹೋಗಿತ್ತು. ಸುದ್ದಿ ತಿಳಿದ ಚಿಂಕ್ರಿ ಮೋರೆ ತೊಳೆಯದೆ ಓಡಿ ಬಂದಿದ್ದಳು, "ಕರ್ಕಂಡ್ಯೆ ಬುಟ್ನಾ ಪುಣ್ಯಾತ್ಮ. ವರ್ಸಾ ತುಂಬಾಕ್ ಮುಂಚೀನೆ, ನಮ್ಮವ್ವನ್ನಾ" ಕಾಲ ದೆಸಿ ಕುಳಿತು ಆ ಮನೆಯ ರೋದನಕ್ಕೆ ತನ್ನ ಧ್ವನಿಯನ್ನು ಸೇರಿಸಿದ್ದಳು.

ಸತ್ತ ಅವ್ವನ ಪೂರಾ ಹೆಸರು ಸಾವಂತ್ರಿಯಾಗಿತ್ತು !



## ಓದಿಗೆ ನೆರವು

ಸಿದ್ಧತೆ : ಡಾ. ಶೈಲಜಾ ಇಂ. ಹಿರೇಮಠ

ಸ್ವರೂಪ : ಕಳೆದ ಸಂಚಿಕೆಯಲ್ಲಿನ ಹೊಸ ಓದಿನ ಮುಂದುವರಿಕೆಯ ಭಾಗವಿದು. ಮಹಿಳಾ ಅಧ್ಯಯನದ ಓದಿಗೆ ನೆರವು ನೀಡಬಹುದಾದ ಮಟ್ಟಿಗೆ ಗ್ರಂಥಸೂಚಿಯನ್ನು ಒದಗಿಸುವ ಸದುದ್ದೇಶವನ್ನು ಈ ಅಂಕಣ ಹೊಂದಿದೆ. ಇಂಗ್ಲೀಷಿನಲ್ಲಿ, ಮಹಿಳಾ ಅಧ್ಯಯನಕ್ಕೆ ಸಂಬಂಧಿಸಿದಂತೆ ಅಪಾರ ಸಂಖ್ಯೆಯಲ್ಲಿ ಕೃತಿಗಳಿವೆ. ಈ ಚಿಕ್ಕ ಅಂಕಣದ ಇತಿ-ಮಿತಿಯಲ್ಲಿ ಅವುಗಳೆಲ್ಲವನ್ನೂ ಹಿಡಿದಿಡುವುದು ಆಗದ ಮಾತು. ಹೀಗಾಗಿ ಮಾದರಿಯಾಗಿರುವ ಕೃತಿಗಳ ಸೂಚಿಯನ್ನು ಮಾತ್ರ ನೀಡಲಾಗುವುದು. ಇಂಗ್ಲೀಷ್ ಕೃತಿಗಳಿಗೆ ಹಾಕಿಕೊಂಡಿರುವ ಈ ಮಿತಿಯನ್ನು ಕನ್ನಡದ ಸಂದರ್ಭದಲ್ಲಿ ಅಳವಡಿಸಿ ಕೊಂಡಿಲ್ಲ. ಸಾಧ್ಯವಾದಮಟ್ಟಿಗೆ ಪರಿಪೂರ್ಣವಾಗಿ ಕನ್ನಡ ಗ್ರಂಥಸೂಚಿಯನ್ನು ನೀಡಲಾಗುವುದು. ಕಾರಣ, ಕನ್ನಡದಲ್ಲಿ ಮಹಿಳಾ ಅಧ್ಯಯನಕ್ಕೆ ಸೈದ್ಧಾಂತಿಕ ನೆಲೆಗಳನ್ನು ಒದಗಿಸಬಲ್ಲ ಕೃತಿಗಳೇ ಕಡಿಮೆ. ಕನ್ನಡದ ಮಟ್ಟಿಗೆ 'ಸಮಗ್ರ'ವೆನಿಸಬಹುದಾದ ಮಾಹಿತಿಯನ್ನು ಒದಗಿಸುತ್ತೇವೆಂದರೂ, ಅದರಲ್ಲಿಯೂ ಕೆಲವು ಕೃತಿಗಳು ಕಣ್ತಪ್ಪಿನಿಂದ ದಾಖಲಾಗದೇ ಹೋಗಬಹುದು. ಅದು ಕೂಡ, ನಮಗೆ ದೊರೆತ ಮಾಹಿತಿಗಳ ಇತಿ-ಮಿತಿಗಳನ್ನೇ ಅವಲಂಬಿಸಿರುತ್ತದೆ. ನಮ್ಮ ಗಮನಕ್ಕೆ ಬಂದ ಕೃತಿಗಳ ಪಟ್ಟಿಯನ್ನು ನೀಡಿ, ಅದರಲ್ಲಿಯೇ ಆಯ್ದ ಕೆಲವನ್ನು ಮಾತ್ರ ಪರಿಚಯಿಸಲಾಗಿದೆ.

**ಪುಸ್ತಕ ಪರಿಚಯ**

ಇಪ್ಪತ್ತೊಂದನೆಯ ಶತಮಾನದತ್ತ ಮಹಿಳೆ :
ಕಾನೂನು ಸಮಾಜ ಮತ್ತು ಮಹಿಳೆ
ಲೇ : ಹೇಮಲತಾ ಮಹಿಷಿ
ಪ್ರ : ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ - ೩
ಪು: ೬+೫೦ ಬೆಲೆ ರೂ. ೧೦-೦೦. ೧೯೯೯

ಪ್ರಸ್ತುತ ಕೃತಿಯಲ್ಲಿ ಹೇಮಲತಾ ಮಹಿಷಿಯವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನೀಡಿದ 'ರೇಡಿಯೋ ಅಕ್ಕಮ್ಮ' ದತ್ತಿ ಉಪನ್ಯಾಸಗಳನ್ನು ಸಂಕಲಿಸಲಾಗಿದೆ. ಈ ಉಪನ್ಯಾಸಗಳ ವಿಷಯಗಳು ಸ್ಥೂಲವಾಗಿ ಹೀಗಿವೆ. ೧. ಭಾರತೀಯ ಮಹಿಳೆ ನಡೆದು ಬಂದ ದಾರಿ ೨. ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಸಮಪಾಲು ೩. ಮಹಿಳೆ ಮೀಸಲಾತಿ ೪. ಮಹಿಳೆಯರಿಗೆ ಮೀಸಲಾತಿ : ರಾಜಕೀಯ ಸಮಾನತೆ ೫. ಉದ್ಯೋಗದ ಸ್ಥಳಗಳಲ್ಲಿ ಮಹಿಳೆಯರಿಗೆ ಲೈಂಗಿಕ ಕಿರುಕುಳ.

ಆಯ್ದುಕೊಂಡ ವಿಷಯಗಳನ್ನು ಸಂಕ್ಷಿಪ್ತವಾಗಿ ಸ್ಫುಟವಾಗಿ ವಿವರಿಸಲಾಗಿದೆ. ಮಹಿಳಾಪರ ಕಾಳಜಿ ಎದ್ದು ಕಾಣುತ್ತದೆ.

Women In Modern India
Geraldine Forbes
Cambridge University Press
P. 64-282, Rs. 150-00, 1998

ಆಧುನಿಕ ಭಾರತದಲ್ಲಿಯ ಮಹಿಳಾ ಸ್ಥಿತಿ-ಗತಿಗಳನ್ನು, ಸ್ಥಾನಮಾನಗಳನ್ನು ಗೆರಾಲ್ಡಿನ್ ಫೋರ್ಬಿಸ್ ಅವರು ಸವಿವರವಾಗಿ ನೀಡಿರುವರು. ಪ್ರಸ್ತುತ ಗ್ರಂಥ ಎಂಟು ಅಧ್ಯಾಯಗಳ ವ್ಯಾಪ್ತಿಯನ್ನು ಹೊಂದಿದೆ. ಅವುಗಳು ಸ್ಥೂಲವಾಗಿ ಹೀಗಿವೆ : -

೧. ೧೯ನೆಯ ಶತಮಾನದ ಸುಧಾರಣೆ : ಆಧುನೀಕರಣಗೊಂಡ ಮಹಿಳೆಯ ಪಾತ್ರದ ಆಧುನೀಕರಣದ ಪ್ರಯತ್ನಗಳು ೨. ಮಹಿಳೆಯರಿಗೆ ಶಿಕ್ಷಣ ೩. ಮಹಿಳಾ ಸಂಘಟನೆಗಳ ಉದಯ ೪. ಮಹಿಳೆಯರ ಹಕ್ಕುಗಳಿಗಾಗಿ ಚಳುವಳಿ ೫. ರಾಷ್ಟ್ರಮಟ್ಟದ ಆಂದೋಲನಗಳಲ್ಲಿ ಮಹಿಳೆ ೬. ವಸಾಹತುಶಾಹಿ ಕಾಲದ ಭಾರತದಲ್ಲಿ ಮಹಿಳೆಯರ ಸಾಧನೆ. ೭. ಪರಿವರ್ತನೆಯ ಕಾಲ ೮. ಸ್ವತಂತ್ರ ಭಾರತದಲ್ಲಿ ಮಹಿಳೆ.

ಸ್ತ್ರೀಪರ ಕಾಳಜಿಯಲ್ಲಿ ಕಣ್ತೆರೆದ ಈ ಕೃತಿ ಮಹಿಳಾ ಅಧ್ಯಯನದಲ್ಲಿ ಆಸಕ್ತಿಯುಳ್ಳವರಿಗೆ ಅತ್ಯುತ್ತಮ ಕೈಪಿಡಿ.

Mental Health of Indian Women
Bhargavi V. davar
Sage Publications, Delhi
p. 281, 1999

ಸ್ತ್ರೀವಾದಿ ನೆಲೆಯಲ್ಲಿ ಭಾರತೀಯ ಮಹಿಳೆಯರ ಮಾನಸಿಕ ಆರೋಗ್ಯದ ಚಿಂತನೆಯನ್ನು ಭಾರ್ಗವಿಯವರು ಗಂಭೀರವಾಗಿ ನಡೆಯಿಸಿರುವರು. ಐದು ಅಧ್ಯಾಯಗಳಲ್ಲಿ ಹಾಗೂ ಅವುಗಳಲ್ಲಿಯೇ ಹಲವಾರು ಉಪಶೀರ್ಷಿಕೆಗಳು ಕಾಣಿಸಿಕೊಂಡಿವೆ: ೧. ಪ್ರಸ್ತಾವನೆ ಮಹಿಳೆ ಮಾನಸಿಕ ಮತ್ತು ಮಹಾರೋಗಗಳ ಶಾಸ್ತ್ರ ೧. ಶಾಸ್ತ್ರಗಳ ದರ್ಶನ, ಸ್ತ್ರೀವಾದ ಮತ್ತು ಮಾನಸಿಕ ಆರೋಗ್ಯಗಳ ನಡುವಿನ ಸಂಬಂಧ ೨. ಭಾರತೀಯ ಮಹಿಳೆಯರಲ್ಲಿ ಮಾನಸಿಕ ಅಸ್ವಸ್ಥತೆ ೩. ತೀವ್ರತರದ ಮತ್ತು ಸಾಮಾನ್ಯ ಮಾನಸಿಕ ವಿಕಾರಗಳು ೨. ಲಿಂಗ ಸಂಬಂಧಗಳು ಮತ್ತು ಕಾರ್ಯಕಾರಣ ಮೀಮಾಂಸೆ ೧. ಕಾರ್ಯಕಾರಣ ಶಾಸ್ತ್ರ : ಅಸ್ವಸ್ಥತೆ ಮತ್ತು ಕಾಯಿಲೆಗಳು ೨. ಸಾಮಾಜಿಕ ಜನಸಂಖ್ಯಾ ಶಾಸ್ತ್ರ ಮತ್ತು ಮಹಿಳೆಯರಲ್ಲಿಯ ಮಾನಸಿಕ ಅಸ್ವಸ್ಥತೆ ೩. ಮಹಿಳೆಯರ ವಿರುದ್ಧ ಹಿಂಸೆ ೪. ಸಾಂಸ್ಕೃತಿಕ ವಿಶಿಷ್ಟತೆಯಲ್ಲಿ ಅಸ್ವಸ್ಥತೆಯ ವರ್ತನೆಗಳು ೩. ಮಾನಸಿಕ ಆರೋಗ್ಯ ಸೇವೆಗಳು ಮತ್ತು ಮಹಿಳೆ ೧. ಮಾನಸಿಕ ಅನಾರೋಗ್ಯದಿಂದ ಮಾನಸಿಕ ಆರೋಗ್ಯದೆಡೆಗೆ ೨. ಮಹಿಳೆಯರಿಂದ ಮಾನಸಿಕ ಆರೋಗ್ಯ ಸೇವೆಗಳ ಬಳಕೆ ೩. ಮಾನಸಿಕ ಆರೋಗ್ಯ

ಸೇವೆಗಳಲ್ಲಿ ಲಿಂಗ ತಾರತಮ್ಯಗಳು ೪. ಸ್ತ್ರೀ ವ್ಯಕ್ತಿತ್ವ, ನೈತಿಕತೆ ಮತ್ತು ಮಾನಸಿಕ ಅನಾರೋಗ್ಯ ೧. ಮಹಿಳೆಯರ ವ್ಯಕ್ತಿತ್ವ ೨. ಮಾನಸಿಕ ಅಸ್ವಸ್ಥತೆಯ ಸಾಮಾಜಿಕ ಮೂಲಗಳು ೩. ಉಭಯ ಲಿಂಗಿ ಪ್ರಸ್ತಾಪ ೪. ಕೊನೆಯ ಮಾತು.

ಅನಾರೋಗ್ಯ ಅಸ್ವಸ್ಥತೆಯನ್ನು ಕುರಿತಂತೆ ಯೋಜನೆ ಮತ್ತು ಭಾರತೀಯ ಮಹಿಳೆಯರ ಮಾನಸಿಕ ಆರೋಗ್ಯದ ಸ್ಥಿತಿ ಗತಿಯ ಪ್ರಾಥಮಿಕ ಪರಿಚಯ ನೀಡುತ್ತಲೇ ಅವರ ಮಾನಸಿಕ ಅಸ್ವಸ್ಥತೆಯ ಕಾರಣಗಳನ್ನು ಸ್ತ್ರೀವಾದಿ ದೃಷ್ಟಿಕೋನದ ಹೊಸ ನೆಲೆಗಳಿಂದ ಚರ್ಚಿಸಲಾಗಿದೆ.

**ಗಮನಿಸಿದ ಪುಸ್ತಕಗಳು**

ಅರ್ಚಕ ಕೆ. ಬಿ. (ಸಂ)
ಮನುಸ್ಮೃತಿ ಮತ್ತು ಸ್ತ್ರೀ, ೧೯೯೭
ಸಂಸ್ಕೃತ ಶೋಧ ಸಂಸ್ಥಾನ, ಶಿರಸಿ

ಕೇಶವಶರ್ಮ
ಶಬ್ದ ರೇಖೆ, ೧೯೯೮
ಅಭಿನವ, ಬೆಂಗಳೂರು

ಧರಣಿದೇವಿ ಮಾಲಗತ್ತಿ
ಸ್ತ್ರೀವಾದ ಮತ್ತು ಭಾರತೀಯತೆ, ೧೯೯೮
ಚೇತನ ಬುಕ್ ಹೌಸ್, ಮೈಸೂರು

ಮಹಾಬಲೇಶ್ವರರಾವ್
ಗಾಂಧೀಜಿ ಮತ್ತು ಮಹಿಳೆ, ೧೯೯೩
ಜನಪದ ಸೇವಾ ಟ್ರಸ್ಟ್, ಮೇಲುಕೋಟೆ

ಮುಕ್ತಾಯಕ್ಕ ಎಚ್. ಎಸ್
ಕನ್ನಡ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ, ೧೯೯೮
ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು

ಮಂಗಳಾ ಸಿ. ಜಿ.
ಪ್ರಜ್ಞಾ (ಹೆಣ್ಣು ಮಗು ಮತ್ತು ಸ್ತ್ರೀ ಸಂವೇದನೆ ಕುರಿತ ಲೇಖನಗಳು) ೧೯೯೮
ನೆಲಮನೆ ಪ್ರಕಾಶನ, ಮೈಸೂರು

ವೆಂಕಟಲಕ್ಷ್ಮಿ ಬಿ. ಎಸ್.
ಕನ್ನಡ ಲೇಖಕಿಯರ ನೆಲೆ- ಬೆಲೆ, ೧೯೯೧

ಎನ್. ಟಿ. ಶ್ಯಾಂ ಪ್ರಕಾಶನ,
ಬೆಂಗಳೂರು

ಶಶಿಕಲಾ ವೀರಯ್ಯಸ್ವಾಮಿ (ಸಂ)
ಸಂವೇದನೆ, ೧೯೯೪
ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಶಾಲಿನಿ ರಘುನಾಥ, ಮಧುವೆಂಕಾರೆಡ್ಡಿ (ಸಂ)
ಅಭಿವ್ಯಕ್ತಿ, ೧೯೯೬
ಉತ್ತರ ಕರ್ನಾಟಕ ಲೇಖಕಿಯರ ಸಂಘ, ಧಾರವಾಡ

ಸಾರಾ ಅಬೂಬಕರ್
ಶೋಷಿತ ಮಹಿಳಾ ಕಾಳಜಿ ಲೇಖನಗಳು, ೧೯೯೯
ಚಂದ್ರಗಿರಿ ಪ್ರಕಾಶನ, ಮಂಗಳೂರು

ಸುನಂದಮ್ಮ ಆರ್. (ಸಂ)
ಜನಪದ ಸಾಹಿತ್ಯದ ಮಹಿಳಾ ಜಗತ್ತು, ೧೯೯೭
ಸಮತಾ ಅಧ್ಯಯನ ಕೇಂದ್ರ, ಮೈಸೂರು

ಸುಮಿತ್ರಾ ಎಲ್. ಸಿ
ವಿಭಾವ, ೧೯೯೭
ಅಕ್ಷರ ಪ್ರಕಾಶನ, ಹೆಗ್ಗೋಡು

ಸುಮಿತ್ರಾ ಬಾಯಿ ಬಿ. ಎನ್.
ಅಯನ, ೧೯೯೫
ವಿದ್ಯಾವರ್ಧಕ ಸಂಘ, ಮಹಿಳಾ ಪ್ರಥಮ ದರ್ಜೆ ಕಾಲೇಜು
ಬೆಂಗಳೂರು

ಸುಮಿತ್ರಾಬಾಯಿ ಬಿ. ಎನ್.
ವಿಚಯ, ೧೯೯೫
ಇಳಾ ಪ್ರಕಾಶನ, ಬೆಂಗಳೂರು

Ajin Ray and Rajesh Mishra
Silent Struggle, 1997
Streelekha,Bangalore

Ammu Joseph and Kalpana Sharma
Whose News? 1999
Sage Publications

Anju Vyas and Sunita Singh
Women's Studies in India, 1993
Sage Publications

Anna Dienhart
Reshaping fatherhood, 1998
Sage Publications

Archana Parashar
Women and Family Law Reform, 1992
Sage Publications

Betsy Wearing
Leijure and Feminist Theory, 1998
Sage Publications

Christina Lee
Women's Health, 1998
Sage Publications

Judith A Howard and Jocelyn Hollander
Gendered Situations, Gendered Selves, 1996
(Volume-2)
Sage Publications

Kalpagam V.
Labour And Gender, 1994
Sage Publications

Kerry J Paly
Families and Time, 1996
Sage Publications

Liz Stanlgy
Knowing Feminism 1996
Sage Publications

Lois A West (ed)
Feminist Nationalism, 1997
Streelekha, Bangalore

Neerja Anlawal
Women Organisation and Social Network, 1995
Streelekha, Bangalore

Ratna Kappor and Brenda Cossman
Subversive Sites, 1996
(Feminist Engagements with law in India)
Sage Publications

Renuka Sharma
Representation of Gender, Democracy and Indentity
Politics in Relation to South Asia, 1996
Streelekha, Bangalore

Rhoda K. Unger
Resisting Gender, 1998
Sage Publications

Roger N. Lancaster and Micaela
Dileonardo (ed)
The Gender Sexuality Reader, 1997
Streelekha, Bangalore

Ruthellen Josselson
The Space Between Us, 1995
Sage Publications

Scott Coltranc
Gender and Families, 1997
Sage Publications

Shamim Aleem
Women's Development, 1996
Streelekha, Bangalore

Sonia Bathia
Women's Democracy and the Media 1998
Sage Publications

Suanna W Hull
women According to men, 1996
Sage Publications



## ಈ ಸಂಚಿಕೆಯಲ್ಲಿ


**ಡಾ. ಇಂದಿರಾ. ಆರ್.**
ಸಮಾಜಶಾಸ್ತ್ರ ವಿಭಾಗ
ಮೈಸೂರು ವಿಶ್ವವಿದ್ಯಾಲಯ
ಮೈಸೂರು

**ಉಷಾ ಎಂ.**
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಕುಲಕರ್ಣಿ ಜಿ. ಕೆ.**
ಕೊಪ್ಪಿಕರ ಕಾಂಪೌಂಡ್
ಪಟೇಲ್ ನಗರ
ಹೊಸಪೇಟೆ

**ಗೀತಾ ಕೃಷ್ಣಮೂರ್ತಿ**
೧೫೬, ೪ನೇ ಮುಖ್ಯರಸ್ತೆ
ಪದ್ಮನಾಭ ನಗರ
ಬೆಂಗಳೂರು - ೭೦

**ಗಿರಿಜಮ್ಮ ಎಚ್.**
ಸ್ತ್ರೀರೋಗ ತಜ್ಞರು
ಬೌರಿಂಗ್ ಆಸ್ಪತ್ರೆ
ಶಿವಾಜಿನಗರ, ಬೆಂಗಳೂರು

**ಡಾ. ಗಾಯತ್ರಿ ನಾವಡ**
ಕಾಲೇಜ್ ರೋಡ್
ಹೊಸಪೇಟೆ

**ಜಯಲಕ್ಷ್ಮೀ ಕೆ. ಆರ್.**
ಜಿಲ್ಲಾ ಪಂಚಾಯತ್ ಸದಸ್ಯರು
ಕಂಪಲಾಪುರ ಪೋಸ್ಟ್
ಪಿರಿಯಾಪಟ್ಟಣ ತಾಲೂಕು
ಮೈಸೂರು ಜಿಲ್ಲೆ

**ದಿನೇಶ್ ಎ.**
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ನಾಗಮಣಿ ಎಸ್. ರಾವ್**
೨೧೫, ಶ್ರೇಯಸ್
೪ ನೇ ಮುಖ್ಯರಸ್ತೆ, ಚಾಮರಾಜಪೇಟೆ

**ಮನೋರಮಾ ಎಂ. ಭಟ್**
ಮುಳಿಯ ಮಹಾಬಲಭಟ್
'ಸೌಗಂಧಿಕಾ' ಉರ್ವಾಸ್ಟೋರ್ಸ್
ಮಂಗಳೂರು - ೬

**ಮಲ್ಲಿಕಾ ಘಂಟಿ**
ಸ್ನಾತಕೋತ್ತರ ಕೇಂದ್ರ
(ನಂದಿಹಳ್ಳಿ ಕ್ಯಾಂಪಸ್)
ಸೊಂಡೂರು

**ವನಮಾಲಾ ಕಟ್ಟೀಗೌಡರ**
ಗಾಂಧಿ ಕಾಲೋನಿ
ಹೊಸಪೇಟೆ

**ವೇದಾ ಎಂ. ಎಸ್.**
ಯು ೧೯, ಸಿ. ಎಚ್. ೧೯
ವಿಶ್ವವಿದ್ಯಾಲಯ, ವಸತಿಗೃಹಗಳು
ಪಂಪಾವತಿ ರಸ್ತೆ, ಸರಸ್ವತೀಪುರಂ
ಮೈಸೂರು- ೯

**ವಿಜಯಾ ದಬ್ಬೆ**
ಕನ್ನಡ ಅಧ್ಯಯನ ಸಂಸ್ಥೆ
ಮಾನಸ ಗಂಗೋತ್ರಿ
ಮೈಸೂರು ವಿಶ್ವವಿದ್ಯಾಲಯ
ಮೈಸೂರು

**ಶೇಷಾದ್ರಿ ಬಿ.**
'ರಾಧಿಕಾ' ನೆಹರೂ ಕಾಲೋನಿ
ಬಳ್ಳಾರಿ

**ಶ್ರೀಮತಿ ಎಚ್. ಎಸ್.**
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ.

**ಶೈಲಜಾ ಇಂ. ಹಿರೇಮಠ**
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಶಾರದಾ ಮಲಶೆಟ್ಟಿ**
ಬಸವೇಶ್ವರ ಬಡಾವಣೆ
ಹೊಸಪೇಟೆ

**ಸುಚೇತಾ ನವರತ್ನ**
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

**ಹೇಮಲತಾ ಮಹಿಪಿ**
೨೯, ೧೮ ನೇ ಕ್ರಾಸ್
ಶಶಿಕಿರಣ ಅಪಾರ್ಟ್‌ಮೆಂಟ್ಸ್
ಮಲ್ಲೇಶ್ವರಂ
ಬೆಂಗಳೂರು - ೫೬೦ ೦೫೫

# ಪ್ರಸಾರಾಂಗದ ಹೊಸ ಪ್ರಕಟಣೆಗಳು

೧. ಬಳ್ಳಾರಿ ಜಿಲ್ಲೆಯ ಶಾಸನಸಂಪುಟ — ರೂ. ೬೦೦.೦೦
ಡಾ. ದೇವರ ಕೊಂಡಾರೆಡ್ಡಿ

೨. ಕೊಡೇಕಲ್ಲ ವಚನವಾಕ್ಯ — ರೂ. ೨೦೦.೦೦
ಡಾ. ಬಸವಲಿಂಗ ಸೊಪ್ಪಿನಮಠ

೩. ಆದಿಲ್‌ಶಾಹಿ ಆಸ್ಥಾನ ಸಾಹಿತ್ಯ — ರೂ. ೪೦.೦೦
ಡಾ. ಕೃಷ್ಣ ಕೊಲ್ಹಾರ ಕುಲಕರ್ಣಿ

೪. ಕೃಷಿಜ್ಞಾನ ಪ್ರದೀಪಿಕೆ — ರೂ. ೧೦೦.೦೦
ಶ್ರೀ ಘನಮಠದ ಶಿವಯೋಗಿಗಳು

೫. ಸಾಂಸ್ಕೃತಿಕ ಸಂಶೋಧನೆ — ರೂ. ೦೫.೦೦
ಡಾ. ತಾಳ್ತಜೆ ವಸಂತಕುಮಾರ

೬. ಹಲಸಂಗಿ ಗೆಳೆಯರು — ರೂ. ೦೫.೦೦
ಡಾ. ಗುರುಲಿಂಗ ಕಾಪಸೆ

೭. ಸ್ವಾತಂತ್ರ್ಯ ಹೋರಾಟ ಮತ್ತು ಜನಪದ ಸಾಹಿತ್ಯ — ರೂ. ೦೫.೦೦
ಡಾ. ಬಸವರಾಜ ಮಲಶೆಟ್ಟಿ

೮. ಕನ್ನಡ ಭಾಷಾಪ್ರಭೇದಗಳು — ರೂ. ೦೫.೦೦
ಡಾ. ಸಂಗಮೇಶ ಸವದತ್ತಿಮಠ

೯. ಬಳ್ಳಾರಿ ಜಿಲ್ಲೆಯಲ್ಲಿ ಕೈಗಾರಿಕೀಕರಣ ಮತ್ತು
ಜನಾಂದೋಲನ — ರೂ. ೦೫.೦೦
ಡಾ. ಬಿ. ಶೇಷಾದ್ರಿ

೧೦. ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯರು — ರೂ. ೦೫.೦೦
ಶ್ರೀ ರಾಧಾಕೃಷ್ಣ ಬೆಳ್ಳೂರು

೧೧. ಸ್ವಾತಂತ್ರ್ಯ ಹೋರಾಟ ಮತ್ತು ರಂಗಭೂಮಿ — ರೂ. ೦೫.೦೦
ಡಾ. ಶ್ಯಾಮಸುಂದರ ಬಿದರಕುಂದಿ

೧೨. ತೇಜಸ್ವಿ ಕಥೆಗಳ ಕುರಿತು — ರೂ. ೦೫.೦೦
ಡಾ. ಕರೀಗೌಡ ಬೀಚನಹಳ್ಳಿ

೧೩. ದ್ವಿಭಾಷಿಕತೆ — ರೂ. ೦೫.೦೦
ಡಾ. ಕೆವಿ. ನಾರಾಯಣ

೧೪. ಹರಿಹರ ಚಿತ್ರಿಸಿದ ದಲಿತ ಶರಣರು — ರೂ. ೦೫.೦೦
ಪ್ರೊ. ಎಸ್.ಎಸ್. ಹಿರೇಮಠ

ಕನ್ನಡ ವಿಶ್ವವಿದ್ಯಾಲಯದ ಪ್ರಥಮ ಗುರಿ 'ಕನ್ನಡ ಸಂಸ್ಕೃತಿ'ಯ ಶೋಧ, ವಿಮರ್ಶೆ ಮತ್ತು ಪ್ರಸಾರ. ಅಂತಿಮ ಗುರಿ ಸುತ್ತಲಿನ ಸಂಸ್ಕೃತಿಗಳ ವಿವೇಕಪೂರ್ಣ ವಿನಿಯೋಗ. ಆದಿಕವಿ ಪಂಪ, ಸಾಹಿತ್ಯಕ್ಕೆ ಅನ್ವಯಿಸಿ ಹೇಳಿರುವ 'ದೇಸಿಯೊಳ್ ಪುಗುವುದು, ಪೊಕ್ಕು ಮಾರ್ಗದೊಳೆ ತಳ್ವುದು' ಎಂಬ ಮಾತು ಪರ್ಯಾಯವಾಗಿ ಇದನ್ನೇ ಧ್ವನಿಸುತ್ತದೆ.

ಸಂಸ್ಕೃತಿ ಎನ್ನುವುದು ಸಮೂಹಸಮ್ಮತ ಜೀವನ ಪದ್ಧತಿಯಾಗಿದೆ. ಕನ್ನಡಿಗರ ಇಂತಹ ಜೀವನ ಪದ್ಧತಿಗೆ ಸಾವಿರ ಸಾವಿರ ವರ್ಷಗಳ ಇತಿಹಾಸವಿದೆ. ತನ್ನ ಆಯುರ್ಮಾನದಲ್ಲಿ ಆರ್ಯ-ಆಂಗ್ಲ ಸಂಸ್ಕೃತಿಗಳನ್ನು ಜೀರ್ಣಿಸಿಕೊಳ್ಳುತ್ತ ಬಂದ ಕನ್ನಡ ಸಮಾಜ, ಉದ್ದಕ್ಕೂ ದ್ವಿಭಾಷಾ ಸಂದರ್ಭದಲ್ಲಿ ಬದುಕುಮಾಡಿದೆ. ಹಿಂದಿನದು ಕನ್ನಡ-ಸಂಸ್ಕೃತ ದ್ವಿಭಾಷಾ ಸಂದರ್ಭ, ಇಂದಿನದು ಕನ್ನಡ-ಇಂಗ್ಲಿಷ್ ದ್ವಿಭಾಷಾ ಸಂದರ್ಭ. ಗ್ರಂಥಸ್ಥ ಭಾಷೆಯಾದ ಸಂಸ್ಕೃತಕ್ಕಿಂತ ಜೀವಂತ ಭಾಷೆಯಾದ ಇಂಗ್ಲಿಷ್ ಬೆಳಕಾಗುತ್ತಲೇ ಬೆಂಕಿಯಾಗಬಹುದೇ? ಎಂಬ ಭಯ ನಮ್ಮಲ್ಲಿ ಹುಟ್ಟಿದೆ. ಹೆಚ್ಚಿನದಾಗಿ ಆಂಗ್ಲ ಜೀವನಶೈಲಿ ನಮ್ಮ ಜೀವನಾಡಿಗಳನ್ನು ದಿನೇದಿನೇ ನಿಯಂತ್ರಿಸತೊಡಗಿ, ಒಂದು ಬಗೆಯ ಅತಿರೇಕ ಸೃಷ್ಟಿಯಾಗುತ್ತಲಿದೆ.

ಇಂಥ ಸಂದರ್ಭದಲ್ಲಿ ಕನ್ನಡ ವಿಶ್ವವಿದ್ಯಾಲಯ ಮೊದಲು ಮಾಡಬೇಕಾದ ಕೆಲಸವೆಂದರೆ, ವಿಸ್ಮೃತಿಯ ಸಾಗರದಲ್ಲಿ ಮುಳುಗಿಹೋಗಿರುವ ನಮ್ಮ ಪಾರಂಪರಿಕ ಕ್ರಿಯೆ, ಪ್ರಕ್ರಿಯೆ ರೂಪದ 'ಸ್ವದೇಶೀ ಸತ್ಯ'ಗಳನ್ನು ಶೋಧಿಸುವುದು; ಬಳಿಕ ಅಲ್ಲಿ ಸೇರಿಕೊಂಡಿರುವ ದೋಷಗಳನ್ನು ದೂರ ಸರಿಸಿ ಗುಣಾಂಶಗಳನ್ನು ಗುರುತಿಸುವುದು; ಜೊತೆಗೆ ಪೂರ್ಣ ಬದುಕಿಗೆ ಅವಶ್ಯವಿರುವ ಕೊರತೆಗಳನ್ನು ಅನ್ಯಸಂಸ್ಕೃತಿಯಿಂದ ಎಚ್ಚರ ವಹಿಸಿ ತುಂಬಿಕೊಳ್ಳುವುದು.

ಹೆಗಲ ಮೇಲೆ ಈ ಹೊಣೆಯನ್ನು ಹೊತ್ತು, ಅಸ್ತಿತ್ವಕ್ಕೆ ಬಂದಿರುವ ಕನ್ನಡ ವಿಶ್ವವಿದ್ಯಾಲಯ ಈಗ "ಮಹಿಳಾ ಅಧ್ಯಯನ" ಪತ್ರಿಕೆಯನ್ನು ಪ್ರಕಟಿಸುತ್ತಲಿದೆ. ಮಹಿಳೆಯ ಸ್ವಾತಂತ್ರ್ಯ, ಸಂವೇದನೆ ಇತ್ಯಾದಿ "ಮಹಿಳಾವಾದಿ ಅಧ್ಯಯನ"ಕ್ಕೆ ನೆಲೆಯಾಗಬಯಸಿದೆ, ಈ ಪತ್ರಿಕೆ.

ಎಂ. ಎಂ. ಕಲಬುರ್ಗಿ
ಕುಲಪತಿಗಳು